ಶ್ರೀವಿದ್ಯಾಧೀಶ ಗ್ರಂಥಮಾಲಾ – ಪ್ರಥಮ ಪುಷ್ಪ

ಈ ಗ್ರಂಥವು ತಿರುಮಲೆ ತಿರುಪತಿ ದೇವಸ್ಥಾನದವರ
ಧನಸಹಾಯದಿಂದ ಪ್ರಕಟಿತವಾಗಿದೆ.

# ಅಣುವಿದ್ಯಾಧೀಶವಿಜಯ

## ಶ್ರೀ ಸತ್ಯವಿಜಯ ಚರಿತ್ರ ಮತ್ತು ಶ್ರೀ ಸತ್ಯಪ್ರಜ್ಞ ಚರಿತ್ರ

**(ಕನ್ನಡ ಲಿಪಿಯಲ್ಲಿ ಮೂಲ ಮತ್ತು ಕನ್ನಡ ಅನುವಾದ)**

ಅನುವಾದಕರು :

ದರ್ಶನರತ್ನ **ಪ್ರೊ. ಕೆ. ಟಿ. ಪಾಂಡುರಂಗಿ,** ವಿದ್ವಾನ್, ಶಿರೋಮಣಿ, ಎಂ.ಎ.
ಬೆಂಗಳೂರು ವಿಶ್ವವಿದ್ಯಾನಿಲಯದ ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು

ಬೆಂಗಳೂರು
1987

This book is published with the financial assistance of
Tirumala Tirupati Devasthanams under their
scheme 'Aid to publish religious books'

# अणुविद्याधीशविजयः

## श्रीसत्यविजयचरितम्, श्रीसत्यप्रज्ञचरितं च

(ಕನ್ನಡ ಲಿಪಿಯಲ್ಲಿಯೂ ಮೂಲ ಕನ್ನಡ ಅನುವಾದ ಸಹಿತ)

ಅನುವಾದಕರು :

ದರ್ಶನರತ್ನ ಪ್ರೊ. ಕೆ. ಟಿ. ಪಾಂಡುರಂಗಿ, ವಿದ್ವಾನ್, ಶಿರೋಮಣಿ, ಎಂ.ಎ.
ಬೆಂಗಳೂರು ವಿಶ್ವವಿದ್ಯಾನಿಲಯದ ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು

ಬೆಂಗಳೂರು
1987

**Anuvidyadhishavijaya**—Satyavijayacharita and Satya-prajnacharita : Published by Sri Vidyadhishagranthamala. Edited and translated in Kannada by Prof. K. T. Pandurangi.

1000 Copies

**Price : Rs. 12/-**

*Copies can be had from :*

1. The editor, 'Sri Vidyadhishagranthamala'
   No. 132/4, III Block, Jayanagar
   Bangalore - 560 011

2. Vedanta Book House
   VI Main Road. Chamarajapet
   Bangalore - 560 018

3. Geetha Book House
   New Statue Circle
   Mysore - 570 001

Printed by D. S. Krishnachar. M.Sc., at Prabha Printing House, 22-A, Dr. D. V. Gundappa Road, Basavanagudi, Bangalore- 4

# ವಿಜ್ಞಾಪನೆ

ಯತಿಶ್ರೇಷ್ಠರಾದ ಶ್ರೀವಿದ್ಯಾಧೀಶತೀರ್ಥರ ಚರಿತ್ರೆಯನ್ನು ವರ್ಣಿಸುವ ಶ್ರೀವಿದ್ಯಾಧೀಶವಿಜಯ ಎಂಬ ಸಂಸ್ಕೃತ ಮಹಾಕಾವ್ಯವನ್ನು ಜನಾರ್ದನಸೂರಿ ಎಂಬ ಕವಿಗಳು ಬರೆದಿದ್ದಾರೆ. ಇದು ಹನ್ನೆರಡು ಸರ್ಗಗಳಲ್ಲಿ ಇದ್ದು ಇದರಲ್ಲಿ ಸುಮಾರು ೭೦೦ ಶ್ಲೋಕಗಳಿವೆ. ಇದರಲ್ಲಿ ಮೊದಲಿನ ಹನ್ನೊಂದು ಸರ್ಗದಲ್ಲಿ ಶ್ರೀವಿದ್ಯಾಧೀಶರ ಚರಿತ್ರೆಯನ್ನೂ ಕೊನೆಯ ಸರ್ಗದಲ್ಲಿ ಶ್ರೀವೇದನಿಧಿತೀರ್ಥರ ಮತ್ತು ಶ್ರೀಸತ್ಯವ್ರತತೀರ್ಥರ ಚರಿತ್ರೆಯನ್ನೂ ಕೊಟ್ಟಿದ್ದಾರೆ. ಶ್ರೀಸತ್ಯನಿಧಿತೀರ್ಥರು ಪಟ್ಟಕ್ಕೆ ಬಂದ ಕಾಲದವರೆಗಿನ ಘಟನೆಗಳನ್ನು ತಿಳಿಸುತ್ತಾರೆ. ಜನಾರ್ದನಸೂರಿ ಕವಿಯು ಶ್ರೀವೇದನಿಧಿತೀರ್ಥರು ಶ್ರೀಸತ್ಯವ್ರತತೀರ್ಥರು ಮತ್ತು ಶ್ರೀಸತ್ಯನಿಧಿ-ತೀರ್ಥರ ಕಾಲದಲ್ಲಿ ಶ್ರೀ ಉತ್ತರಾದಿ ಮಠದವರಲ್ಲಿ ಭಾಗವತ ಪುರಾಣವನ್ನು ಹೇಳಲು ಇದ್ದವರು. ಇದನ್ನು ಅವರು ತಮ್ಮ ಈ ಕಾವ್ಯದಲ್ಲಿ ಉಲ್ಲೇಖಿಸುವರು. ಈ ಕಾವ್ಯವನ್ನು ಗಡ್ಡದ ಕೋನೇರೀ ಆಚಾರ್ಯರು ಎಂಬವರು ತಮ್ಮಿಂದ ಬರೆಸಿದರು ಎಂದು ಗ್ರಂಥದ ಕೊನೆಗೆ ಹೇಳುತ್ತಾರೆ. ಈ ಗಡ್ಡದ ಕೋನೇರೀ ಆಚಾರ್ಯರು ಪಾಂಡುರಂಗಿ ಮನೆತನದವರೂ ಗಡ್ಡದ ಶ್ರೀನಿವಾಸಾಚಾರ್ಯರ ಸಂತತಿಯವರೂ ಇದ್ದಂತೆ ಕಾಣುತ್ತದೆ.

ಶ್ರೀವಿದ್ಯಾಧೀಶವಿಜಯಕಾವ್ಯವನ್ನು ಜನಾರ್ದನಸೂರಿಗಳೇ ಬರೆದ ವ್ಯಾಖ್ಯಾನ ಸಹಿತವಾಗಿ ವಾಂಯಿಯ ಪ್ರಸಿದ್ಧ ವಿದ್ವಾಂಸರೂ ಧಾರವಾಡದ ಕರ್ನಾಟಕ ಕಾಲೇಜದಲ್ಲಿ ಸಂಸ್ಕೃತಪಂಡಿತರೂ ಆಗಿದ್ದ ರಡ್ಡೀ ರಂಗಾಚಾರ್ಯರು ೧೯೨೭ ರಲ್ಲಿ ಮುದ್ರಿಸಿ ಪ್ರಕಟಿಸಿರುವರು. ಆದರೆ ಅದರ ಪ್ರತಿಗಳು ಅನೇಕ ವರ್ಷಗಳಿಂದ ಉಪಲಬ್ಧವಿಲ್ಲ (ಶ್ರೀ ಕೆ. ಟಿ. ಪಾಂಡುರಂಗಿಯವರು ಇತ್ತೀಚೆಗೆ ಇದರ ಮೂವತ್ತು ಪ್ರತಿಗಳನ್ನು ವಾಂಯಿಯಲ್ಲಿಯ ಪ್ರಾಜ್ಞಪಾಠಶಾಲೆಯವರಿಂದ ದೊರಕಿಸಿರುವರು. ಅಗತ್ಯವಿದ್ದವರು ಅವರಿಂದ ಪಡೆಯಬಹುದು.). ಆದ್ದರಿಂದ ಈ ಕಾವ್ಯವನ್ನು ಸಮಗ್ರವಾಗಿ ಒದಗಿಸುವದು ಕಾಲವಿಲಂಬವಾಗುವ ಕಾರ್ಯವಾದ್ದರಿಂದ ಇದರ ಸಾರವನ್ನಾದರೂ ಒದಗಿಸಬೇಕೆಂದು ಧಾರವಾಡದಲ್ಲಿ ವಾಸವಾಗಿದ್ದ ತುಮ್ಮಿನಕಟ್ಟಿ ಪಾಂಡುರಂಗಿ ತಮ್ಮಣ್ಣಾಚಾರ್ಯರು ತಮ್ಮ ಮೂರನೆಯ ಮಕ್ಕಳಾದ

ಕೆ. ಟಿ. ಪಾಂಡುರಂಗಿಯವರಿಂದ ಈ ಕಾವ್ಯದಿಂದಲೇ ಆಯ್ದು ೧೦೮ ಶ್ಲೋಕಗಳ ಈ ಕಾವ್ಯದ ಸಾರವನ್ನು ಸಿದ್ಧಪಡಿಸಿ 'ಅಣುವಿದ್ಯಾಧೀಶವಿಜಯ' ಎಂಬ ಹೆಸರಿನಿಂದ ೧೯೬೦ ರಲ್ಲಿ ಪ್ರಕಟಿಸಿದರು. ಈ ಅಣುವಿದ್ಯಾಧೀಶವಿಜಯದ ಪ್ರತಿಗಳೂ ಈಗ ಉಪಲಬ್ಧವಿಲ್ಲ. ಆದ್ದರಿಂದ ಅದರ ಈ ವಿಸ್ತೃತ ಆವೃತ್ತಿಯನ್ನು ಈ ಮೂಲಕ ಪ್ರಕಟಿಸುತ್ತಿದ್ದೇವೆ.

ಈ ಅಣುವಿದ್ಯಾಧೀಶವಿಜಯದಲ್ಲಿ ಮೂಲ ಶ್ರೀವಿದ್ಯಾಧೀಶವಿಜಯದಲ್ಲಿಯ ೧೬೪ ಶ್ಲೋಕಗಳನ್ನು ಆಯ್ದು ಸಾರವನ್ನು ಸಂಗ್ರಹಿಸಲಾಗಿದೆ. ಇದರಲ್ಲಿ ಶ್ರೀವಿದ್ಯಾಧೀಶರ ಚರಿತ್ರೆಯ ಎಲ್ಲ ಮುಖ್ಯಾಂಶಗಳೂ ಒಳಗೊಂಡಿವೆ. ಇದಲ್ಲದೆ ಶ್ರೀದೈವಜ್ಞಭೀಮ ಎಂಬ ಕವಿಗಳು ಬರೆದ 'ಪೂರ್ಣಬೋಧ ಗುರುವಂಶ ಕಥಾಕಲ್ಪತರು' ಎಂಬ ಕಾವ್ಯದಲ್ಲಿ ಬಂದ ಶ್ರೀವಿದ್ಯಾಧೀಶರ ಚರಿತ್ರೆಯ ಸಾರವನ್ನೂ ಸುಮಾರು ೫೦ ಶ್ಲೋಕಗಳಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಪೂರ್ವಾಶ್ರಮದಲ್ಲಿ ಪಾಂಡುರಂಗಿ ಮನೆತನದವರಾದ ಶ್ರೀಸತ್ಯವಿಜಯರ ಚರಿತ್ರೆಯನ್ನೂ ಈ ಗುರುವಂಶ ಕಥಾಕಲ್ಪತರುವಿನಿಂದ ಆಯ್ದುಕೊಡಲಾಗಿದೆ. ಪಾಂಡುರಂಗಿ ಮನೆತನದ ಮೂರನೆಯ ಯತಿಗಳಾದ ಶ್ರೀಸತ್ಯಪ್ರಜ್ಞರ ಚರಿತ್ರೆಯನ್ನು ಈಗಾಗಲೇ ಯಾರೂ ಬರೆಯದೇ ಇದ್ದದ್ದರಿಂದ ಅವನ್ನು ಕೆ. ಟಿ. ಪಾಂಡುರಂಗಿಯವರೇ ೫೩ ಶ್ಲೋಕಗಳಲ್ಲಿ ಬರೆದುದನ್ನು ಇಲ್ಲಿ ಸೇರಿಸಲಾಗಿದೆ.

ಶ್ರೀರಾಮಚಂದ್ರಾಚಾರ್ಯರು ಎಂಬವರು ಬರೆದ ಶ್ರೀವಾದಿರಾಜ ಚರಿತಾಮೃತದಲ್ಲಿ ಬಂದ ಪಾಂಡುರಂಗಿ ಆನಂದಭಟ್ಟಾರಕರ ವೃತ್ತಾಂತವನ್ನೂ ಇಲ್ಲಿ ಕೊಡಲಾಗಿದೆ. ಗ್ರಂಥಗಳ ಅದ್ಯಂತದಲ್ಲಿ ಬರುವ ಈ ಮೂವರೂ ಯತಿಶ್ರೇಷ್ಠರ ಸ್ತೋತ್ರಗಳನ್ನೂ ಆಯ್ದು ಕೊಡಲಾಗಿದೆ.

ಹೀಗೆ ಈ ಗ್ರಂಥವು ಶ್ರೀವಿದ್ಯಾಧೀಶರ ಮಹಿಮೆಯನ್ನೂ ಅವರ ಪೂರ್ವಾಶ್ರಮದ ಮನೆತನವಾದ ಪಾಂಡುರಂಗಿ ಮನೆತನದವರು ಮಾಡಿದ ಶ್ರೀಮದಾಚಾರ್ಯರ ವಾಙ್ಮಯದ ಸೇವೆಯನ್ನೂ ಆಸ್ತಿಕರಾದ ಸಜ್ಜನರು ತಿಳಿದುಕೊಳ್ಳಲು ಸಹಾಯವಾಗುವಂತೆ ಈ ಪುಸ್ತಕವನ್ನು ಯೋಜಿಸಲಾಗಿದೆ. ಸಜ್ಜನರು ಇದರ ಪ್ರಯೋಜನವನ್ನು ಪಡೆಯುವರೆಂದು ಆಶಿಸುವೆವು.

ಕಾಲಕ್ರಮವಲ್ಲಿ ಶ್ರೀವಿದ್ಯಾಧೀಶವಿಜಯ ಮಹಾಕಾವ್ಯವನ್ನು ಸಂಪೂರ್ಣವಾಗಿ ಕನ್ನಡ ಅನುವಾದದೊಡನೆ ಪ್ರಕಟಿಸಬೇಕೆಂಬ ಅಪೇಕ್ಷೆಯಿರುವದು. ಅಲ್ಲದೆ ಶ್ರೀ ಪಾಂಡುರಂಗಿ ಮನೆತನದವರು ಬರೆದ ಈವರೆಗೆ ಪ್ರಕಟವಾಗದೇ ಇದ್ದ ಸಂಸ್ಕೃತ ಗ್ರಂಥಗಳನ್ನೂ ಪ್ರಕಟಿಸಬೇಕೆಂಬ ಸಂಕಲ್ಪವಿರುವದು. ಈ ಎಲ್ಲ ಕಾರ್ಯಗಳನ್ನು ನೆರವೇರಿಸುವದರಲ್ಲಿ ತಾವೂ ಧನಸಹಾಯದ ರೂಪದಿಂದಲಾಗಲೀ ಹಸ್ತಪ್ರತಿಗಳನ್ನು ಒದಗಿಸಿಯಾಗಲೀ ಪ್ರಕಟಿಸಿದ ಗ್ರಂಥಗಳ ಖರೀದಿ ಮಾಡಿ ಅಥವಾ ತಮಗೆ ತಿಳಿದ ಸಂಘ ಸಂಸ್ಥೆಗಳಿಗೆ ದಾನ ಅಥವಾ ಮಾರಾಟರೂಪದಿಂದ ಒದಗಿಸಿ ಈ ಗ್ರಂಥಗಳ ಪ್ರಯೋಜನ ವ್ಯಾಪಕರೀತಿಯಿಂದ ಆಸ್ತಿಕಸಜ್ಜನರಿಗೆ ಆಗುವಂತೆ ಮಾಡಲು ಅಪೇಕ್ಷೆಯಿದ್ದವರು ನಮ್ಮೊಡನೆ ಪತ್ರವ್ಯವಹಾರ ಮಾಡಬಹುದು. ಈ ಕಾರ್ಯವನ್ನು ನಾವು ನಮ್ಮ ಕರ್ತವ್ಯ ಎಂಬ ಭಾವನೆಯಿಂದ ಕೈಕೊಂಡಿದ್ದರೂ ಸ್ವಸಂತೋಷದಿಂದ ಬರುವ ಸಹಕಾರವನ್ನೂ ನಾವು ಸ್ವಾಗತಿಸುವೆವು. ಈ ಕಾರ್ಯವು ಯಶಸ್ವಿಯಾಗುವಂತೆ ಆಶೀರ್ವದಿಸಲು ಹರಿವಾಯುಗುರುಗಳನ್ನು ಪ್ರಾರ್ಥಿಸುವೆವು.

ಈ ಗ್ರಂಥದ ಮುದ್ರಣಕ್ಕೆ T.T.D. ಯವರು ತಮ್ಮ 'ಧಾರ್ಮಿಕಗ್ರಂಥ ಪ್ರಕಾಶನಕ್ಕೆ ಸಹಾಯಧನ ಕೊಡುವ ಯೋಜನೆ' ಯಲ್ಲಿ ಧನಸಹಾಯ ಮಾಡಿ ಉಪಕರಿಸಿದ್ದಾರೆ. ಅವರಿಗೆ ನಮ್ಮ ವಂದನೆಗಳು.

ಬೆಂಗಳೂರಿನ ಪ್ರಭಾ ಪ್ರಿಂಟಿಂಗ್ ಹೌಸ್‌ದವರು ಅಂದವಾಗಿ ಮುದ್ರಿಸಿ ಕೊಟ್ಟದ್ದಕ್ಕೆ ಅವರಿಗೂ ನಮ್ಮ ವಂದನೆಗಳು.

ತಾ|| 5-7-1987
ವಿದ್ಯಾಧೀಶನಿಲಯ
132/4, III ಬ್ಲಾಕ್, ಜಯನಗರ
ಬೆಂಗಳೂರು.

ಕೆ. ಟಿ. ಪಾಂಡುರಂಗಿ

# ಶ್ರೀವಿದ್ಯಾಧೀಶತೀರ್ಥರು

ಗೋದಾವರೀತೀರದ ಪುಣ್ಯಸ್ತಂಭ ಎಂಬ ಊರಲ್ಲಿ ಕ್ರಿ.ಶ. ೧೫೦೦ ರಿಂದ ೧೫೮೦ ರ ಅವಧಿಯಲ್ಲಿ ಪಾಂಡುರಂಗಿ ಆನಂದಭಟ್ಟ ಎಂಬವರು ಇದ್ದರು. ಅವರು ಶ್ರೀಮದುತ್ತರಾದಿಮಠದ ಪೀಠಾಧಿಪತಿಗಳಾಗಿದ್ದ ಶ್ರೀ. ರಘೂತ್ತಮತೀರ್ಥರ ಶಿಷ್ಯರು. ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆಯ ಮಠದ ಪೀಠಾಧಿಪತಿಗಳಾಗಿದ್ದ ಶ್ರೀವಾದಿರಾಜ ಸ್ವಾಮಿಗಳ ಸಮಕಾಲೀನರು ಮತ್ತು ಅವರ ಅನುಗ್ರಹಕ್ಕೆ ಪಾತ್ರರಾದವರು. ಶ್ರೀವ್ಯಾಸರಾಜರ 'ನ್ಯಾಯಾಮೃತ' ಗ್ರಂಥಕ್ಕೆ 'ನ್ಯಾಯಾಮೃತ ಕಂಟಕೋದ್ಧಾರ' ಎಂಬ ವ್ಯಾಖ್ಯಾನವನ್ನು ಬರೆದವರು. ಕೊಲ್ಹಾಪುರದ ಲಕ್ಷ್ಮೀ ದೇವಿಯನ್ನು ಕುರಿತು ತಪಸ್ಸುಮಾಡಿ ತಮ್ಮ ಮನೆತನಕ್ಕೆ ಹನ್ನೊಂದು ತಲೆಮಾರು ವಿದ್ಯೆ ಐಶ್ವರ್ಯ ಸಂತಾನಗಳ ಅನುಗ್ರಹವನ್ನು ಪಡೆದವರು (ಇವರ ಚರಿತ್ರೆಯ ಪೂರ್ಣ ವಿವರಗಳು ಪುಟ ೯೫–೯೮ ರಲ್ಲಿ ಕೊಡಲ್ಪಟ್ಟಿವೆ.).

ಈ ಆನಂದಭಟ್ಟರಿಗೆ ಶ್ರೀನಿವಾಸಾಚಾರ್ಯನೆಂಬ ಹಿರಿಯಮಗನಿದ್ದನು. ಆದರೆ ಇವರಿಗೆ ಇನ್ನೊಬ್ಬ ಮಗ ಬೇಕೆಂಬ ಅಪೇಕ್ಷೆಯಿದ್ದಿತು. ಅದಕ್ಕಾಗಿ ದಂಪತಿಗಳು ನರಸಿಂಹದೇವರ ಸೇವೆ ಮಾಡುತ್ತಿದ್ದರು. ಸ್ವಪ್ನದಲ್ಲಿ ಶ್ರೀ ನರಸಿಂಹದೇವರು ಅನುಗ್ರಹಮಾಡಿ ಎರಡನೆಯ ಮಗನಾದನು. ಈ ಎರಡನೆಯ ಮಗನಿಗೆ ನರಸಿಂಹಾಚಾರ್ಯ ಎಂದು ಹೆಸರಿಟ್ಟರು. ಶ್ರೀವಾದಿರಾಜಸ್ವಾಮಿಗಳೂ ನಿಮಗೆ ನಮ್ಮಂಥ ಮಗನಾಗುವನೆಂದು ಆಶೀರ್ವದಿಸಿದ್ದರು. ನಿಮ್ಮ ಮಗನು ಮುಂದೆ ಯತಿಯಾಗುವನೆಂಬುದನ್ನು ಸೂಚ್ಯವಾಗಿ ತಿಳಿಸಿದ್ದರು.

ಈ ನರಸಿಂಹನು ಬಾಲಕನಾಗಿದ್ದಾಗಲೇ ದೇವರಪೂಜೆಯ ಆಟವಾಡುವದು, ತಾನು ಗುರು ಎಂದು ಜೊತೆಯ ಬಾಲಕರಿಗೆಲ್ಲ ಉಪದೇಶ ಮಾಡುವದು ಹೀಗೆ ಭವಿಷ್ಯದ ಘಟನೆಗಳನ್ನು ಸೂಚಿಸುತ್ತಿದ್ದನು. ಆನಂದಭಟ್ಟರು ಮಗನ ಉಪನಯನ ಮಾಡಿ ಕಾವ್ಯ ನಾಟಕ ವ್ಯಾಕರಣ ನ್ಯಾಯ ಮೀಮಾಂಸಾ ವೇದಾಂತ ಗ್ರಂಥಗಳಲ್ಲಿ ಸ್ವತಃ ಪಾಠವನ್ನು ಹೇಳಿ ಮಗನನ್ನು ಉತ್ತಮ ಪಂಡಿತನನ್ನಾಗಿ ಮಾಡಿದರು. ನರಸಿಂಹಾಚಾರ್ಯರು ವ್ಯಾಕರಣದಲ್ಲಿ ಪಂಡಿತರಾದ ಶಿವಪಂಡಿತ ಮತ್ತು ವಿಶ್ವಪಂಡಿತ ಎಂಬವರೊಡನೆ ವ್ಯಾಕರಣ ಮಹಾಭಾಷ್ಯದಲ್ಲಿ ವಾಕ್ಯಾರ್ಥಮಾಡಿ ಜಯಿಸಿದರು.

ಗೋಲಿಂಗ ಎಂಬ ಪಂಡಿತನೊಡನೆ ತತ್ವಚಿಂತಾಮಣಿ ಎಂಬ ನ್ಯಾಯಶಾಸ್ತ್ರ ಗ್ರಂಥದಲ್ಲಿ ವಾಕ್ಯಾರ್ಥಮಾಡಿ ಜಯಿಸಿದರು. ತಾನಭಟ್ಟ ಎಂಬ ಪಂಡಿತನನ್ನು ಶ್ರೌತ ವಾಙ್ಮಯದಲ್ಲಿ ಜಯಿಸಿದರು.

ಆನಂದಭಟ್ಟರು ರುಕ್ಮಿಣೀ ಎಂಬ ಸತ್ಕುಲೀನ ವಧುವಿನೊಡನೆ ನರಸಿಂಹಾಚಾರ್ಯರ ವಿವಾಹವನ್ನು ಮಾಡಿ ತಾವಿರುವ ತ್ರಿವಿಕ್ರಮ ದೇವಾಲಯದಲ್ಲಿ ನರಸಿಂಹಾಚಾರ್ಯರಿಂದಲೇ ಪಾಠ ಹೇಳಿಸಿ ಸಂತೋಷಪಟ್ಟರು. ಇವರು ಪಾಠ ಹೇಳುವದನ್ನು ನೋಡಲು ಬಂದ ಓರ್ವ ಅದ್ವೈತಯತಿಗಳು ಇವರ ಗ್ರಂಥಾನುವಾದದ ಪ್ರೌಢಿಮೆಗೆ ಬೆರಗಾಗಿ ದೂರದಿಂದಲೇ ಗೌರವ ಸೂಚಿಸಿ ಮರಳಿದರು. ಆಗ ನರಸಿಂಹಾಚಾರ್ಯರಿಗೆ ಇನ್ನೂ ಹದಿನಾರು ವರ್ಷ ಮಾತ್ರವಾಗಿದ್ದಿತು. ಮುಂದೆ ವೃದ್ಧಾಪ್ಯದಿಂದ ಆನಂದಭಟ್ಟರು ವೈಕುಂಠವಾಸಿಗಳಾದರು.

ಮುಂದೆ ಕೆಲವರ್ಷಗಳಾದಮೇಲೆ ಪುಣ್ಯಸ್ತಂಭಪುರದ ಮೇಲೆ ಸುಮಾರು ಕ್ರಿ.ಶ. ೧೬೦೦ ರಲ್ಲಿ ಮುಸಲ್ಮಾನರ ದಾಳಿಯಾಯಿತು. ಆಗ ನರಸಿಂಹಾಚಾರ್ಯರು ಆ ಊರು ಬಿಟ್ಟು ತಮ್ಮ ಶಿಷ್ಯಬಂಧು ಸಮೇತರಾಗಿ ನಾಸಿಕತ್ರ್ಯಂಬಕಕ್ಕೆ ಹೋದರು. ಅಲ್ಲಿ ಎರಡು ವರ್ಷ ಇದ್ದರು. ಆಗ ಪೈಠಣದಲ್ಲಿ ಸುಬೇದಾರನಾಗಿದ್ದ ಶಹಾಜಿಯ (ಶಿವಾಜಿಯ ತಂದೆಯು) ಸರದಾರನಾಗಿದ್ದ ನಾಗನಾಥನ ಮಗ ದತ್ತಪಂಡಿತ ಎಂಬವನು ನರಸಿಂಹಾಚಾರ್ಯರನ್ನು ಸಂಗಮನೇರಕ್ಕೆ ಕರೆಯಿಸಿಕೊಂಡನು. ಅಲ್ಲಿ ಕೆಲಕಾಲವಿದ್ದಮೇಲೆ ಮುಂದೆ ಪೈಠಣಕ್ಕೇ ಕರೆಯಿಸಿಕೊಂಡನು. ಈ ದತ್ತಪಂಡಿತನು ಮುಂದೆ ಬೆಂಗಳೂರಿನ ಸುಬೇದಾರನಾದನು. ರಾಧಾಮಾಧವ ವಿಲಾಸ ಚಂಪೂ ಕಾವ್ಯದ ಆರನೆಯ ಉಲ್ಲಾಸದ ಕೊನೆಗೆ ಇವನ ಉಲ್ಲೇಖ ಬರುವದು. ಪೈಠಣದಲ್ಲಿ ಆರು ತಿಂಗಳ ಕಾಲವಿದ್ದು ಸೂತ್ರಭಾಷ್ಯದ ಪಾಠವನ್ನು ಹೇಳಿದರು. ಆಗ ಆ ಊರಲ್ಲಿ ಅನೇಕ ಮಾಧ್ವರಿದ್ದರು ಮತ್ತು ಮಾಧ್ವಮಠವೂ ಇದ್ದಿತು. ಅಲ್ಲಿಂದ ಮುಂದೆ ನರಸಿಂಹಾಚಾರ್ಯರು ಪಂಢರಪುರಕ್ಕೆ ಬಂದರು. ಅಲ್ಲಿರುವ ಶ್ರೀಮಧ್ವಾ-ಚಾರ್ಯರ ಪಾದಧೂಳಿಯಿಂದ ಪವಿತ್ರವಾದ ಮಠದ ಜೀರ್ಣೋದ್ಧಾರ ಮಾಡಿದರು. ಈ ಮಠವನ್ನು ಶ್ರೀಪದ್ಮನಾಭತೀರ್ಥರೇ ಕಟ್ಟಿಸಿದ್ದು ಶ್ರೀಮದಾಚಾರ್ಯರು ಎರಡನೆಯ ಸಲ ಬದರಿಕಾಶ್ರಮಕ್ಕೆ ಹೊರಟಾಗ ಅವರನ್ನು ಇಲ್ಲಿ ಬರಮಾಡಿ ಕೊಂಡಿದ್ದರು. ಚಂದ್ರಭಾಗಾದ ದಂಡೆಯ ಮೇಲಿದ್ದ ಈ ಮಠವು ಮಹಾಪ್ರವಾಹ ಬಂದಾಗ ಆಗಾಗ ಬೀಳುತ್ತಿತ್ತು ಮತ್ತು ಮತ್ತೆ ಮತ್ತೆ ಇದರ ಜೀರ್ಣೋದ್ಧಾರ

ಮಾಡಬೇಕಾಗುತ್ತಿತ್ತು. ನರಸಿಂಹಾಚಾರ್ಯರು ಹೀಗೆ ಜೀರ್ಣೋದ್ಧಾರ ಮಾಡಿ ಅಲ್ಲಿಯೇ ಕೆಲಕಾಲವಿದ್ದರು. ಇದೇ ಮಠದಲ್ಲಿಯೇ ಮುಂದೆ ಶ್ರೀವಿದ್ಯಾಧೀಶರ ಶಿಷ್ಯರಾದ ಶ್ರೀವೇದನಿಧಿತೀರ್ಥರ ಮೂಲ ವೃಂದಾವನವಾಯಿತು. ಈ ಶತಮಾನ ದಲ್ಲಿ ಇಲ್ಲಿಯೇ ಶ್ರೀಸತ್ಯಧ್ಯಾನರ ಮೂಲ ವೃಂದಾವನವಾಗಿದೆ. ಚಂದ್ರಭಾಗಾದ ಆಚೆಯ ದಂಡೆಯಲ್ಲಿ ಶ್ರೀಸತ್ಯಧ್ಯಾನತೀರ್ಥರು ದೊಡ್ಡದಾದ ಇನ್ನೊಂದು ಮಠ ವನ್ನೂ ಕಟ್ಟಿಸಿದ್ದಾರೆ.

ನರಸಿಂಹಾಚಾರ್ಯರು ಪಂಢರಪುರದಲ್ಲಿದ್ದಾಗ ನರಸಪಂಡಿತ ಎಂಬವನು ಅವರೊಡನೆ ವಾಕ್ಯಾರ್ಥಮಾಡಿ ಪರಾಜಿತನಾದನು. ಇವನು ವಿಜಾಪುರಕ್ಕೆ ಹೋಗಿ ಲಿಂಗೋಜೀಪಂಡಿತ ಎಂಬವನ ಆಶ್ರಯ ಪಡೆದನು. ವಿಜಾಪುರದ ಬಾದಶಾಹರಿಗೆ ದಿವಾಣನಾಗಿದ್ದ ಲಕ್ಷ್ಮಣಪಂಡಿತ ಎಂಬ ವೈಷ್ಣವನು ಶ್ರೀನರಸಿಂಹಾಚಾರ್ಯರನ್ನು ವಿಜಾಪುರಕ್ಕೆ ಕರೆಯಿಸಿಕೊಂಡನು. ಈ ನರಸಪಂಡಿತನು ಅಲ್ಲಿ ಮತ್ತೊಮ್ಮೆ ವಾಕ್ಯಾರ್ಥಮಾಡಿ ಪರಾಜಿತನಾದನು. ಇದೇ ಸಮಯದಲ್ಲಿ ಆಗಿನ ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀವೇದವ್ಯಾಸತೀರ್ಥರು ಮಣ್ಣೂರಿಗೆ ಬಂದರು. ನರಸಿಂಹಾ ಚಾರ್ಯರು ಮಣ್ಣೂರಿಗೆ ಆಹ್ವಾನಿತರಾಗಿ ಹೋಗಿ ಗುರುಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು.

ಶ್ರೀವೇದವ್ಯಾಸತೀರ್ಥರು ನರಸಿಂಹಾಚಾರ್ಯರಿಗೆ ಆಶ್ರಮವನ್ನು ಕೊಟ್ಟು ಶ್ರೀವಿದ್ಯಾಧೀಶತೀರ್ಥರು ಎಂದು ಹೆಸರಿಟ್ಟು ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿದರು. ಶ್ರೀವೇದವ್ಯಾಸತೀರ್ಥರು ಶ್ರೀವಿದ್ಯಾಪತಿತೀರ್ಥ ಎಂಬವರಿಗೆ ಈಗಾಗಲೇ ಆಶ್ರಮಕೊಟ್ಟಿದ್ದರು. ಆದರೆ ಶ್ರೀವೇದವ್ಯಾಸತೀರ್ಥರ ಗುರುಗಳಾದ ಶ್ರೀರಘೋತ್ತಮ ತೀರ್ಥರು ಅವರ ಸ್ವಪ್ನದಲ್ಲಿ ಬಂದು ಈ ವಿದ್ಯಾಪತಿತೀರ್ಥರು ನಿಮಗಿಂತಲೂ ಮೊದಲೇ ವೃಂದಾವನಸ್ಥರಾಗುವರು ಆದ್ದರಿಂದ ಪಾಂಡುರಂಗಿ ನರಸಿಂಹಾಚಾರ್ಯರಿಗೆ ಆಶ್ರಮಕೊಟ್ಟು ನಿಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿರಿ ಎಂದು ಆಜ್ಞೆ ಮಾಡಿದರು. ಅದಕ್ಕನುಗುಣವಾಗಿ ಶ್ರೀವೇದವ್ಯಾಸತೀರ್ಥರು ಒಂದು ಕಿವಿಯಲ್ಲಿಯೂ ಶ್ರೀವಿದ್ಯಾಪತಿತೀರ್ಥರು ಇನ್ನೊಂದು ಕಿವಿಯಲ್ಲಿಯೂ ಮಂತ್ರೋಪದೇಶ ಮಾಡಿ ನರಸಿಂಹಾಚಾರ್ಯರಿಗೆ ಆಶ್ರಮಕೊಟ್ಟು ಶ್ರೀವಿದ್ಯಾಧೀಶತೀರ್ಥರೆಂದು ಹೆಸರಿಟ್ಟರು. ಈ ವಿದ್ಯಾಪತಿತೀರ್ಥರ ಮೂಲವೃಂದಾವನವು ಕಾಟ್ಪಾಡಿಯ ಹತ್ತಿರದ ವೆಲ್ಲೂರಿ ನಲ್ಲಿದೆ. ಇದು ಹಿಂದೆ ರಾಯವೇಲೂರು ಎಂದು ಪ್ರಸಿದ್ಧವಾಗಿತ್ತು. ಶ್ರೀಸತ್ಯಾಧಿರಾಜರ

ಮೂಲ ವೃಂದಾವನವು ಇವರ ಎದುರಿಗೇ ಇದೆ. ಈ ಸತ್ಯಾಧಿರಾಜರ ಪೂರ್ವಾ-ಶ್ರಮದ ಹೆಸರು ಚಿಂತಾಮಣಿ ವಿದ್ಯಾಧೀಶಾಚಾರ್ಯರು. ಇವರು ದಕ್ಷಿಣದೇಶದ ಪಾಂಡುರಂಗಿ ಮನೆತನದ ದೌಹಿತ್ರ ಸಂತಾನಕ್ಕೆ ಸೇರಿದವರು.

ಶ್ರೀವಿದ್ಯಾಧೀಶರಿಗೆ ವಂಶರಾಮದೇವರನ್ನೂ ವ್ಯಾಸಮುಷ್ಟಿಗಳನ್ನೂ ಕೊಟ್ಟು ಸಂಚಾರಕ್ಕೆ ಕಳಿಸಿದರು. ಅಲ್ಲಿಂದ ಇವರು ಸಾಂಗಲಿಗೆ ಹೋಗಿ ತಮ್ಮ ಮೊದಲನೆಯ ಚಾತುರ್ಮಾಸ ಸಂಕಲ್ಪವನ್ನು ಕೈಕೊಂಡರು. ಅಲ್ಲಿಂದ ಮುಂದೆ ಕೊಲ್ಹಾಪುರಕ್ಕೆ ಹೋಗಿ ಪಂಚನದಿಗಳಲ್ಲಿ ಸ್ನಾನಮಾಡಿದರು. ಅಲ್ಲಿಂದ ಕೃಷ್ಣಾತೀರದ ಕರಹಾಡ ಭಾಗದಲ್ಲಿ (ಈಗಿನ ಮಹಾರಾಷ್ಟ್ರದ ಸಾತರಾ ಸಾಂಗಲಿ ಜಿಲ್ಲೆಗಳಿರುವ ಪ್ರದೇಶ) ಸಂಚಾರಮಾಡಿ ಆಂಧ್ರದಲ್ಲಿಯ ಪೆನುಗೊಂಡಕ್ಕೆ ಬಂದು ಅಲ್ಲಿದ್ದ ತಮ್ಮ ಗುರುಗಳಾದ ಶ್ರೀವೇದವ್ಯಾಸತೀರ್ಥರಿಗೆ ಸಾಷ್ಟಾಂಗಪ್ರಣಾಮ ಮಾಡಿದರು. ಅಲ್ಲಿಯ ರಾಜನಾದ ವೆಂಕಟಪತಿರಾಯನು ಶ್ರೀವಿದ್ಯಾಧೀಶರ ತಪಸ್ಸು ಮತ್ತು ಪಾಂಡಿತ್ಯಗಳಿಗೆ ಮೆಚ್ಚಿ ಮಠಕ್ಕೆ ನಾಲ್ಕು ಗ್ರಾಮಗಳನ್ನು ದಾನಕೊಟ್ಟನು.

ಇದೇ ಸಮಯದಲ್ಲಿ ಶ್ರೀರಂಗಪಟ್ಟಣದ ರಾಜನಾದ ದೊಡ್ಡಚಾಮರಾಜನಿಗೆ ಅವನ ಪ್ರಾಚೀನಕರ್ಮವಶದಿಂದ ಆಹಾರವು ಕ್ರಿಮಿಯರಾಶಿಯಂತೆ ಕಾಣುತ್ತಿತ್ತು. ಅದನ್ನು ಪರಿಹರಿಸಿಕೊಳ್ಳಲು ಅವನು ಶ್ರೀವಿದ್ಯಾಧೀಶತೀರ್ಥರನ್ನು ಶ್ರೀರಂಗಪಟ್ಟಣಕ್ಕೆ ಆಹ್ವಾನಿಸಿದನು. ಶ್ರೀವಿದ್ಯಾಧೀಶರು ದೇವರಪೂಜೆ ಮಾಡಿ ತೀರ್ಥ ಪ್ರೋಕ್ಷಣೆ ಮಾಡಿ ಅಭಿಮಂತ್ರಿಸಿ ಕಳಿಸಿದ ಅನ್ನದಲ್ಲಿ ಅವನಿಗೆ ಯಾವ ಕ್ರಿಮಿಯೂ ಕಾಣದೆ ಸಂತೋಷದಿಂದ ಭೋಜನ ಮಾಡಿದನು. ಶ್ರೀವಿದ್ಯಾಧೀಶರ ಈ ಅದ್ಭುತವಾದ ಮಹಿಮೆಯಿಂದ ಅವರಲ್ಲಿ ಅಪಾರಭಕ್ತಿಯುಳ್ಳವನಾಗಿ ಚಿಣ್ಯ ವೃತ್ತಿ ಮತ್ತು ಸಣ್ಣ ಚಿಕ್ಕೂರು ಎಂಬ ಮೂರು ಗ್ರಾಮಗಳನ್ನು ಮಠಕ್ಕೆ ದಾನವಾಗಿ ಕೊಟ್ಟನು. ಈ ಸಂದರ್ಭದಲ್ಲಿ ಶ್ರೀವಿದ್ಯಾಧೀಶರು ರಾಜನ ಪ್ರಾರ್ಥನೆಯಂತೆ ಶ್ರೀರಂಗಪಟ್ಟಣದಿಂದ ಹೊರಟು ಮೂರು ಪ್ರಹರ ಸಂಚಾರಮಾಡಿ ಈ ಗ್ರಾಮಗಳನ್ನು ಸುತ್ತಾಡಿ ಬಂದರು. ಆಗ ಒಂದು ಕಡೆಗೆ ಕಾಲಿಗೆ ಬಿಸಿ ಎನಿಸಿತು. ಆ ಸ್ಥಳವನ್ನು ಅಗಿಸಿ ನೋಡಲಾಗಿ ಅಲ್ಲಿ ಪ್ರಾಣದೇವರ ಪ್ರತಿಮೆಯಿದ್ದಿತು. ಅದನ್ನು ಕಾವೇರೀ ತೀರದ ಚಂದಗೂರು ಎಂಬ ಗ್ರಾಮದಲ್ಲಿ ಪ್ರತಿಷ್ಠೆ ಮಾಡಿದರು. ಶ್ರೀರಂಗಪಟ್ಟಣದ ಉತ್ತರಾದಿ ಮಠದಲ್ಲಿಯೂ ಶ್ರೀವಿದ್ಯಾಧೀಶರು ಪ್ರತಿಷ್ಠೆ ಮಾಡಿದ ಪ್ರಾಣದೇವರ ಮೂರ್ತಿಯಿರುವದು. ಇಲ್ಲಿ ಇಂದಿಗೂ ಪ್ರತಿವರ್ಷ ಶ್ರೀವಿದ್ಯಾಧೀಶರ ಆರಾಧನೆ ನಡೆಯು

ವದು. ನದಿಯ ಮಧ್ಯದಲ್ಲಿ ಪ್ರತಿಷ್ಠಾಪಿಸಿದ ಪ್ರಾಣದೇವರ ಮೂರ್ತಿಯು ಶ್ರೀವ್ಯಾಸರಾಜಪ್ರತಿಷ್ಠಿತವು. ಹೊಳೆನರಸಿಂಹಪುರದಲ್ಲಿಯ ಉತ್ತರಾದಿಮಠವೂ ಶ್ರೀವೇದವ್ಯಾಸತೀರ್ಥರ ಕಾಲದಲ್ಲಿಯೇ ನಿರ್ಮಿತವಾಯಿತು ಎಂಬ ಪರಂಪರೆಯಿದೆ. ಅಲ್ಲಿ ಈಗಿರುವ ವಿಶಾಲಕಟ್ಟಡವು ಪೂರ್ಣಯ್ಯನವರ ಕಾಲದಲ್ಲಿ ಆಯಿತು. ಅಲ್ಲಿರುವ ಪ್ರಾಣದೇವರ ಮೂರ್ತಿಯು ಶ್ರೀಸತ್ಯಧರ್ಮಪ್ರತಿಷ್ಠಿತವು.

ಶ್ರೀರಂಗಪಟ್ಟಣದಿಂದ ಹೊರಟು ಶ್ರೀವಿದ್ಯಾಧೀಶತೀರ್ಥರು ದಕ್ಷಿಣಭಾರತದ ಯಾತ್ರೆಯನ್ನು ಕೈಕೊಂಡರು. ದಾರಿಯಲ್ಲಿ ತಾನು ಶೈವಾಗಮಪಂಡಿತನೆಂದು ಹೇಳಿಕೊಳ್ಳುತ್ತಿದ್ದ ಮಣಲೂರು ಎಂಬ ಗ್ರಾಮದಲ್ಲಿ ಪಾಂಡ್ಯವಂಶದ ರಾಜನೆಂದು ಹೇಳಿಕೊಳ್ಳುತ್ತಿದ್ದ ಓರ್ವ ರಾಜನನ್ನು ಜಯಿಸಿದರು. ಇನ್ನೊಂದು ಕಡೆಗೆ 'ಲಘು-ಮಾನಸ' ಎಂಬ ಜ್ಯೋತಿಷ್ಯ ಗ್ರಂಥದಲ್ಲಿ ವಾದಮಾಡಿದ ಒಬ್ಬ ಜ್ಯೋತಿಷಿಯನ್ನು ಜಯಿಸಿದರು. ರಾಮೇಶ್ವರಕ್ಕೆ ಹೋಗಿ ಸಮುದ್ರಸ್ನಾನ ಮಾಡಿ ರಾಮೇಶ್ವರನಿಗೆ ನಮಸ್ಕಾರ ಮಾಡಿದರು. ತಮ್ಮ ದಕ್ಷಿಣಭಾರತದ ಜಯವನ್ನು ಶ್ರೀಕೃಷ್ಣನಿಗೆ ಸಮರ್ಪಿಸಲು ಅಲ್ಲಿಂದ ಉಡುಪಿಗೆ ತೆರಳಿದರು. ಅಲ್ಲಿ ಶ್ರೀಕೃಷ್ಣನನ್ನು ಕೋಟಿ ತುಳಸೀದಳಗಳಿಂದ ಪೂಜಿಸಿದರು. ಅಲ್ಲಿಂದ ಇಕ್ಕೇರಿಗೆ ಬಂದರು. ಅಲ್ಲಿ ರಂಗೋಜೀ ಭಟ್ಟನೆಂಬ ಅದ್ವೈತ ಪಂಡಿತನಿದ್ದನು. ಇವನು ಮೂಲತಃ ದ್ರಾವಿಡದವನು. ಆ ಭಾಗದಲ್ಲಿ ಮುಸಲ್ಮಾನರ ದಾಳಿಯಾದ ಮೇಲೆ ಇಲ್ಲಿಗೆ ಬಂದಿದ್ದನು. ಇವನು ವ್ಯಾಕರಣದ ಸಿದ್ಧಾಂತಕೌಮುದೀ ಎಂಬ ಗ್ರಂಥವನ್ನು ಬರೆದ ಭಟ್ಟೋಜೀ ದೀಕ್ಷಿತನ ಅಣ್ಣನು. ವೈಯ್ಯಾಕರಣಭೂಷಣಸಾರವನ್ನು ಬರೆದ ಕೊಂಡದೇವನ ಸೋದರ ಮಾವನು. ಈ ರಂಗೋಜೀಭಟ್ಟನು ಶ್ರೀವಿದ್ಯಾಧೀಶರೊಡನೆ ವಾದ ಮಾಡಿದನು. ಅವನು 'ದರ್ಶನಾದಭ್ರಶಿರಸಃ' ಎಂಬ ಭಾಗವತ ಶ್ಲೋಕದ ಅರ್ಥದ ವಿಷಯದಲ್ಲಿ ವಾದ ಮಾಡಿ ಪರಾಜಿತನಾದನು. 'ಪ್ರಯಾಗ ಮರಣದಿಂದಲೇ ಮುಕ್ತಿ. ಜ್ಞಾನವು ಅಗತ್ಯವಿಲ್ಲ' ಎಂದು ವಾದಮಾಡಲು ಪ್ರಯತ್ನಿಸಿಯೂ ಸೋತನು. ಪ್ರಾಭಾಕರ ಸಿದ್ಧಾಂತಗಳನ್ನು ಸಮರ್ಥಿಸಲು ಪ್ರಯತ್ನಿಸಿಯೂ ಸೋತನು. ಈ ವಾಕ್ಯಾರ್ಥದ ವಿವರಗಳನ್ನು ಕೊಡುವ 'ರಂಗೋಜೀಭಟ್ಟ ಧಿಕ್ಕಾರಃ' ಎಂಬ ಹಸ್ತಲಿಖಿತ ಗ್ರಂಥವಿದೆ. ಕೊಂಡಭಟ್ಟನೂ ತನ್ನ ವೈಯ್ಯಾಕರಣಭೂಷಣಸಾರದ ಕೊನೆಗೆ ಇವರಿಬ್ಬರಲ್ಲಿ ವಾದವಾದದ್ದನ್ನು ಉಲ್ಲೇಖಿಸುವನು.

ಇದೇ ಸಮಯದಲ್ಲಿ ವಾದೀಂದ್ರ ಎಂಬ ರಂಗೋಜೀಭಟ್ಟನ ಶಿಷ್ಯನಿಗೂ ಶ್ರೀವಿದ್ಯಾಧೀಶರ ಪೂರ್ವಾಶ್ರಮದ ತಮ್ಮಂದಿರಾದ ಕೇಶವಾಚಾರ್ಯರಿಗೂ (ಗುರುರಾಜರಿಗೂ)ವಾಕ್ಯಾರ್ಥವಾಯಿತು. ಇದರ ವಿವರಗಳು 'ವಾದೀಂದ್ರಧಿಕ್ಕಾರಃ' ಎಂಬ ಹಸ್ತಲಿಖಿತ ಪುಸ್ತಕದಲ್ಲಿ ಬರೆದಿಡಲ್ಪಟ್ಟಿವೆ.

ಇಕ್ಕೇರಿಯಿಂದ ಸಂಧ್ಯಾವಲೀ ಎಂಬ ಗ್ರಾಮಕ್ಕೆ ಹೋಗಿ ಅಲ್ಲಿಂದ ಪೆನುಗೊಂಡೆಗೆ ಮರಳಿದರು. ಇವರು ಹೀಗೆ ದಿಗ್ವಿಜಯವನ್ನು ಮಾಡಿಕೊಂಡು ಬಂದದ್ದನ್ನು ನೋಡಿ ಗುರುಗಳಾದ ಶ್ರೀವೇದವ್ಯಾಸತೀರ್ಥರು ಬಹಳ ಸಂತೋಷ ಪಟ್ಟರು. ಮುಂದೆ ಕೆಲದಿನಗಳಲ್ಲಿ ಶ್ರೀವೇದವ್ಯಾಸತೀರ್ಥರು ಅಲ್ಲಿಯೇ ವೃಂದಾವನಸ್ಥ ರಾದರು. ಶ್ರೀವಿದ್ಯಾಧೀಶರು ಬಹಳ ವೈಭವದಿಂದ ಅವರ ಸಮಾರಾಧನೆ ಮಾಡಿ ಪಂಡಿತರಿಗೆ ಅವರವರ ಪಾಂಡಿತ್ಯಕ್ಕೆ ತಕ್ಕಂತೆ ಆರು ಎಂಟು ಹನ್ನೆರಡು ಸುವರ್ಣ ನಾಣ್ಯಗಳ ದಕ್ಷಿಣೆ ಕೊಟ್ಟರು.

ಅಲ್ಲಿಂದ ಶೂರ್ಪಾಲಿಗೆ ಹೋದರು. ಅಲ್ಲಿ ಅವರ ಪೂರ್ವಾಶ್ರಮದ ತಾಯಿಯು ಹರಕೆ ಹೊತ್ತಂತೆ ಸಾಧನೀ ದ್ವಾದಶಿಯ ದಿನ ಒಂದು ಲಕ್ಷ ಬ್ರಾಹ್ಮಣರ ಭೋಜನ ವನ್ನು ಮಾಡಿಸಿದರು. ಕರ್ನಾಟಕ ಆಂಧ್ರ ತಮಿಳುದೇಶ ಮತ್ತು ಮಹಾರಾಷ್ಟ್ರ ಭಾಗಗಳಿಂದ ಚಕ್ಕಡಿ ಕಳಿಸಿ ಶ್ರೇಷ್ಠರಾದ ಬ್ರಾಹ್ಮಣರನ್ನು ಕರೆಯಿಸಿಕೊಂಡು ಲಕ್ಷ ಜನರನ್ನು ಸೇರಿಸಿದ್ದರು. ಈ ಸಮಯದಲ್ಲಿ ಶೂರ್ಪಾಲಿಯಲ್ಲಿಯೇ ಇದ್ದ ಶ್ರೀ ಯಾದವಾರ್ಯರಿಗೆ ಭೋಜನ ಮಾಡಿಸಿ ಯಾದವಾರ್ಯರಿಗೆ ಭೋಜನ ಮಾಡಿಸಿದ್ದು ಒಂದು ಲಕ್ಷಕ್ಕೆ ಸಮಾನ ಇನ್ನಿತರರು ಒಂದು ಲಕ್ಷ ಹೀಗೆ ಎರಡು ಲಕ್ಷ ಬ್ರಾಹ್ಮಣರ ಭೋಜನವಾಯಿತೆಂದು ತಾಯಿಗೆ ಹೇಳಿದರು. ಶ್ರೀವಿದ್ಯಾಧೀಶರ ತಾಯಿಯವರು ನಿತ್ಯವೂ ಯಾದವಾರ್ಯರಿಂದ ಭಾಗವತ ಕೇಳದೇ ಊಟ ಮಾಡುತ್ತಿದ್ದಿಲ್ಲ. ಶೂರ್ಪಾಲಿಯಲ್ಲಿ ಶ್ರೀವಿದ್ಯಾಧೀಶರು ನರಸಿಂಹದೇವರ ಗುಡಿಯ ಹಿಂದೆ ಪ್ರಾಣದೇವರ ಪ್ರತಿಷ್ಠೆ ಮಾಡಿರುವರು. ವೈಶಾಖದಲ್ಲಿ ನರಸಿಂಹದೇವರ ಉತ್ಸವ ಕಾಲದಲ್ಲಿ ಬ್ರಾಹ್ಮಣ ಸಂತರ್ಪಣೆಯ ಕಾಲದಲ್ಲಿ ಮಳೆ ಬಂದರೆ ಈ ಪ್ರಾಣದೇವರಿಗೆ ಮಂಗಳಾರತಿ ಮಾಡಿ ನಿಲ್ಲಿಸುವರು. ಇದು ಅನೇಕ ಸಂದರ್ಭ ಗಳಲ್ಲಿ ಎಲ್ಲರೂ ಕಂಡ ವಿಷಯವಾಗಿದೆ. ಶ್ರೀವಿದ್ಯಾಧೀಶರ ಪೂರ್ವಾಶ್ರಮದ ತಮ್ಮಂದಿರಾದ ಕೇಶವಾಚಾರ್ಯರು ಇಲ್ಲಿಯೇ ಮನೆ ಮಾಡಿದ್ದರು. ಮುಂದೆ ಎರಡು ತಲೆಮಾರು ಪಾಂಡುರಂಗಿಯವರು ಇಲ್ಲಿಯೇ ಇದ್ದರು.

ಶೂರ್ಪಾಲಿಯಿಂದ ಶ್ರೀವಿದ್ಯಾಧೀಶರು ಮತ್ತೆ ಉಡುಪಿಗೆ ಹೋದರು. ಅಲ್ಲಿ ಮಠಾಧಿಪತ್ಯದ ಮರ್ಯಾದೆಗಳಾದ ಪಲ್ಲಕ್ಕಿ ಚಾಮರ ಮೊದಲಾದವುಗಳನ್ನು ಬಿಟ್ಟು ಪಾದಚಾರಿಗಳಾಗಿಯೇ ಸಂಚರಿಸತೊಡಗಿದರು. ಉಡುಪಿಯ ಅಷ್ಟಮಠಗಳು ಮೊದಲು ಶ್ರೀಕೃಷ್ಣಮಂದಿರದ ಒಳಗೇ ಇದ್ದವು. ಶ್ರೀವಾದಿರಾಜತೀರ್ಥರ ಕಾಲದಲ್ಲಿ ಅನಂತೇಶ್ವರ ದೇವಸ್ಥಾನದ ಸುತ್ತಲಿರುವ ಈಗಿನ ಕಟ್ಟಡಗಳು ಪ್ರಾರಂಭವಾದವು. ಇದೇ ಸಮಯದಲ್ಲಿ ಅಲ್ಲಿಗೆ ಹೋದ ಶ್ರೀವಿದ್ಯಾಧೀಶರು ಪೇಜಾವರಮಠದ ಪಕ್ಕದಲ್ಲಿ ಈಗಿದ್ದ ಉತ್ತರಾದಿಮಠವನ್ನು ಕಟ್ಟಿಸಿದರು. ಇದು ಮೊದಲು ಚಿಕ್ಕದಾಗಿದ್ದು ಶ್ರೀಸತ್ಯಸಂಧರ ಕಾಲದಲ್ಲಿ ವಿಸ್ತಾರವಾದ ಕಟ್ಟಡವಾಯಿತು. ಉಡುಪಿಯಲ್ಲಿದ್ದಾಗಲೇ ಶ್ರೀವಿದ್ಯಾಧೀಶರು ಶ್ರೀಮನ್ನ್ಯಾಯಸುಧಾಕ್ಕೆ ವಾಕ್ಯಾರ್ಥಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆದರು. ಇದು ಮೊದಲಿನ ಐದು ಅಧಿಕರಣಗಳಿಗೆ ಇದೆ. ಮುಂದಿನ ಭಾಗಕ್ಕೆ ತಮ್ಮ ತಮ್ಮಂದಿರಾದ ಕೇಶವಾಚಾರ್ಯರಿಗೆ ಆಜ್ಞೆ ಮಾಡಿ ಶೇಷವಾಕ್ಯಾರ್ಥಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆಸಿದರು.

ಮುಂದೆ ವೇದನಿಧಿತೀರ್ಥರಿಗೆ ಆಶ್ರಮಕೊಟ್ಟು ತಾವು ಗೋದಾವರಿಯ ಉಗಮಸ್ಥಲವಾದ ನಾಸಿಕಾತ್ರ್ಯಂಬಕಕ್ಕೆ ಹೋದರು. ಅಲ್ಲಿಂದ ನೂರುಜನ ಬ್ರಾಹ್ಮಣರೊಡನೆ ಗೋದಾವರಿಯ ಪ್ರದಕ್ಷಿಣೆಯನ್ನು ಮಾಡಿದರು. ಮಾರ್ಗದಲ್ಲಿ ಭದ್ರಾಚಲಕ್ಷೇತ್ರಕ್ಕೆ ಹೋದರು. ಅಂತರ್ವೇದಿ ಎಂಬ ನರಸಿಂಹದೇವರ ಕ್ಷೇತ್ರಕ್ಕೆ ಹೋದರು. ಸಮುದ್ರತೀರದ ಆ ಪ್ರದೇಶದಲ್ಲಿ ಸಿಹಿ ನೀರೇ ಇಲ್ಲದ ಸ್ಥಳದಲ್ಲಿ ಸಿಹಿ ನೀರಿನ ಬಾವಿಯನ್ನು ಮಾಡಿಸಿಕೊಟ್ಟರು. ಹೀಗೆ ಗೋದಾವರೀ ಪ್ರದಕ್ಷಿಣೆಯನ್ನು ಮಾಡುತ್ತ ಧರ್ಮಪುರಿ ಎಂಬಲ್ಲಿಗೆ ಬಂದರು. ಈ ಧರ್ಮಪುರಿಯು ಮರಾಠವಾಡಾದಲ್ಲಿ ಪರಳೀವೈದ್ಯನಾಥದ ಹತ್ತಿರ ಗೋದಾವರೀ ತೀರದಲ್ಲಿದೆ. ಉತ್ತರಾದಿಮಠದ ಅನೇಕ ಸ್ವಾಮಿಗಳವರ ಕಾಲದಲ್ಲಿ ಇದೊಂದು ಮಠದ ಪ್ರಮುಖ ಕೇಂದ್ರವಾಗಿತ್ತು. ಇಲ್ಲಿಂದ ನಾಸಿಕಾತ್ರ್ಯಂಬಕಕ್ಕೆಹೋಗಿ ಗೋದಾವರೀ ಪ್ರದಕ್ಷಿಣೆಯನ್ನುಮುಗಿಸಿದರು.

ಮುಂದೆ ಮತ್ತೊಮ್ಮೆ ದಕ್ಷಿಣಭಾರತದ ಯಾತ್ರೆಯನ್ನು ಕೈಕೊಂಡರು. ಮೊದಲು ತಿರುಪತಿಗೆ ಹೋಗಿ ಶ್ರೀವೆಂಕಟೇಶದೇವರ ದರ್ಶನ ಮಾಡಿದರು. ಬಳಿಕ ಕಾಲಹಸ್ತಿ ಕಂಚಿಗಳನ್ನು ಸಂದರ್ಶಿಸಿ ಶ್ರೀರಂಗಕ್ಕೆ ಹೋದರು. ಆಗ ತ್ರಿಚನಾಪಳ್ಳಿಯ ರಾಜನಾದ ತಿರುಮಲರಾಯನು ಬಂದು ಶ್ರೀಗಳಿಗೆ ಸಾಷ್ಟಾಂಗಪ್ರಣಾಮ ಮಾಡಿ ಅವರಿಗೆ ಶ್ರೀರಂಗದಲ್ಲಿ ಸಕಲ ಅನುಕೂಲತೆಗಳನ್ನು ಮಾಡಿಕೊಟ್ಟನು. ಅಲ್ಲಿದ್ದಾಗ

ಶ್ರೀವಿದ್ಯಾಧೀಶರು ತಮ್ಮ ಗುರುಗಳಾದ ಶ್ರೀವೇದವ್ಯಾಸತೀರ್ಥರ ಮಹಾಸಮಾರಾಧನೆಯನ್ನು ವೈಭವದಿಂದ ಮಾಡಿದರು. ಶ್ರೀರಂಗದಿಂದ ಹೊರಟು ತಂಜಾವೂರಿಗೆ ಹೋಗಿ ಅಲ್ಲಿಯ ರಾಜನಾದ ರಘುನಾಥನಾಯಕನಿಂದ ಸತ್ಕರಿಸಲ್ಪಟ್ಟರು. ಅಲ್ಲಿಂದ ಕುಂಭಕೋಣಕ್ಕೆ ಹೋಗಿ ಅಲ್ಲಿದ್ದ ಶ್ರೀಸುಧೀಂದ್ರತೀರ್ಥರನ್ನು ಭೆಟ್ಟಿಯಾಗಿ ಕುಶಲವಾರ್ತೆಗೈದರು. ಬಳಿಕ ಮಧುರೆ ರಾಮೇಶ್ವರಗಳಿಗೆ ಹೋಗಿ ತಮ್ಮ ದಕ್ಷಿಣಭಾರತದ ದಿಗ್ವಿಜಯವನ್ನು ಮುಗಿಸಿ ಧರ್ಮಪುರಿಗೆ ಮರಳಿ ಬಂದರು. ಧರ್ಮಪುರಿಯಲ್ಲಿ ಶ್ರೀಗಳವರನ್ನು ಪೂರ್ಣಬೋಧಾಚಾರ್ಯರೇ ಮೊದಲಾದ ಪಂಡಿತರು ವಾಸುದೇವಯತಿಗಳು ಸ್ವಾಗತಿಸಿದರು.

ಶ್ರೀವಿದ್ಯಾಧೀಶರಿಗೆ ಅವರ ನಂತರ ಪಟ್ಟಕ್ಕೆ ಬಂದ ಶ್ರೀವೇದನಿಧಿತೀರ್ಥರು ಶ್ರೀಸತ್ಯವ್ರತತೀರ್ಥರು ಅಲ್ಲದೆ ಇನ್ನೂ ಕೆಲವರು ಬಿಡಿಸಂನ್ಯಾಸಿಗಳು ಶಿಷ್ಯರಾಗಿದ್ದರು. ಇಂಥವರಲ್ಲಿ ಈ ವಾಸುದೇವಯತಿಗಳು ನರಸಿಂಹಯತಿಗಳು ಮತ್ತು ಮಧುಸೂದನಭಿಕ್ಷುಗಳು ಮುಖ್ಯರು. ನರಸಿಂಹಯತಿಗಳ ಪೂರ್ವಾಶ್ರಮದ ಹೆಸರು ನರಸಪ್ಪ. ಇವರು ಶ್ರೀವಿದ್ಯಾಧೀಶರ ಸೇವೆಯನ್ನು ನಿರಂತರವಾಗಿ ಮಾಡುತ್ತಿದ್ದರು. ಉಪನಿಷತ್ತುಗಳಿಗೆ ಖಂಡಾರ್ಥಗಳನ್ನು ಬರೆದಿರುವರು. ಅಣುಭಾಷ್ಯಕ್ಕೂ ವ್ಯಾಖ್ಯಾನವನ್ನು ಬರೆದಿರುವರು. ಈಗ ರಾಣೇಬೆನ್ನೂರಿನಲ್ಲಿ ಇದ್ದ ಶ್ರೀವಿದ್ಯಾಧೀಶರ ಮೂರ್ತಿಯನ್ನು ಇವರಿಗಾಗಿಯೇ ಮಾಡಿಸಿಕೊಳ್ಳಲು ಶ್ರೀಗಳವರು ಅನುಮತಿಕೊಟ್ಟಿದ್ದರು. ಆ ಮೂರ್ತಿಯು ಮಾಸೂರು ಬಾಳಯ್ಯಾಚಾರ್ಯರ ಕಾಲದವರೆಗೆ ಧರ್ಮಪುರಿಯಲ್ಲಿಯೇ ಇದ್ದಿತು. ಅವರು ಮಾಸೂರಿಗೆ ತಂದರು. ಮುಂದೆ ತುಮ್ಮಿನಕಟ್ಟೆ ಹುಚ್ಚಾಚಾರ್ಯರು ರಾಣೇಬೆನ್ನೂರಿಗೆ ತಂದು ಮಠ ಕಟ್ಟಿಸಿದರು.

ಶ್ರೀಗಳವರು ಧರ್ಮಪುರಿಯಲ್ಲಿದ್ದಾಗ ನಿತ್ಯವೂ ಸುಧಾ ಪಾಠ ನಡೆಯುತ್ತಿತ್ತು. ಶ್ರೀವೇದನಿಧಿಗಳು ಶ್ರೀಸತ್ಯವ್ರತರು ಪಾಂಡುರಂಗಿ ಕೇಶವಾಚಾರ್ಯರು ಯಾದವಾರ್ಯರು ಶ್ರೀಮುಷ್ಣಂ ಅನಂತಾಚಾರ್ಯರು ನರಸಿಂಹಾಚಾರ್ಯರು ರೊಟ್ಟಿ ವೆಂಕಟಭೀಮರು ಹೀಗೆ ಅನೇಕ ಪಂಡಿತರು ಈ ಸುಧಾ ಪಾಠ ಕೇಳುತ್ತಿದ್ದರು. ಶ್ರೀಗಳು ಇಲ್ಲಿಯೇ ಚಾತುರ್ಮಾಸ್ಯ ಸಂಕಲ್ಪ ಮಾಡಿದರು. ಆಗ ಅಲ್ಲಿ ಕಾಮದೇವನೆಂಬ ಪಂಡಿತನಿದ್ದನು ಅವನು ಶ್ರೀಗಳೊಡನೆ ವಾಕ್ಯಾರ್ಥಮಾಡಿ ಪರಾಜಿತನಾದನು. ಅಲ್ಲಿಯೇ ಇದ್ದ ರಾಮಭದ್ರಾಶ್ರಮಿ ಎಂಬ ಅದ್ವೈತ ಯತಿಯ ಆಶ್ರಯ ಪಡೆದು ಓಡಿಹೋದನು.

ಮುಂದೆ ಶ್ರೀಗಳವರು ಬದರೀಯಾತ್ರೆಯನ್ನು ಮಾಡಬೇಕೆಂದು ಸಂಕಲ್ಪಿಸಿ ಶ್ರೀವೇದನಿಧಿತೀರ್ಥರಿಗೆ ಮೂಲರಾಮದೇವರನ್ನು ಕೊಟ್ಟು ಕೆಲವೇ ಪಂಡಿತರೊಡನೆ ಪ್ರಯಾಣವನ್ನು ಆರಂಭಿಸಿದರು. ಮಾರ್ಗದಲ್ಲಿ ನರ್ಮದಾನದಿಯನ್ನು ದಾಟಿ ಪ್ರಯಾಗವನ್ನು ಮುಟ್ಟಿ ತ್ರಿವೇಣೀಸಂಗಮದಲ್ಲಿ ಸ್ನಾನ ಮಾಡಿದರು. ವೇಣೀ-ಮಾಧವನ ಪೂಜೆ ಮಾಡಿದರು. ಪ್ರಯಾಗದಲ್ಲಿ ಈಗಿರುವ ಉತ್ತರಾದಿಮಠವನ್ನು ಕಟ್ಟಿಸಿ ಪ್ರಾಣದೇವರ ಪ್ರತಿಷ್ಠೆ ಮಾಡಿದರು. ಮುಂದೆ ಶ್ರೀಸತ್ಯಸಂಧರು ಈ ಮಠದ ಜೀರ್ಣೋದ್ಧಾರ ಮಾಡಿದರು. ಮುಂದೆ ಕಾಶಿಗೆ ಪ್ರಯಾಣ ಮಾಡಿದರು. ಅಲ್ಲಿ ಒಂದು ತಿಂಗಳು ಇದ್ದು ಬಿಂದುಮಾಧವ ಮತ್ತು ವಿಶ್ವನಾಥನನ್ನು ಆರಾಧಿಸಿದರು. ಕಾಶಿಯಲ್ಲಿ ಆ ಕಾಲದಲ್ಲಿ ಬ್ರಹ್ಮೇಂದ್ರದಂಡೀ ಎಂಬ ಅದ್ವೈತ ಯತಿಯಿದ್ದನು. ಅವನು ಶ್ರೀಗಳೊಡನೆ ವಾದ ಮಾಡಿ ಪರಾಜಿತನಾದನು.

ಕಾಶಿಯಿಂದ ಶ್ರೀಗಳು ಗಯಾಕ್ಷೇತ್ರಕ್ಕೆಹೋದರು. ಗಯಾದಲ್ಲಿ ವಿಷ್ಣುಪಾದದ ಅರ್ಚಕರಾದ ಗಯಾವಾಡರು ತಾಂತ್ರಿಕರಾಗಿದ್ದರು. ಅವರಿಗೆ ತಮಗೆ ತಾಂತ್ರಿಕ ಸಿದ್ಧಿಯಿರುವ ಅಭಿಮಾನ ಬಹಳವಾಗಿತ್ತು. ಶ್ರೀವಿದ್ಯಾಧೀಶರು ಸಿದ್ಧಪುರುಷರು ಎಂಬುದನ್ನು ಕೇಳಿ ನಿಮ್ಮ ಸಿದ್ಧಿಯನ್ನು ತೋರಿಸಬೇಕು ಎಂದು ಕೇಳಿದರು. ಆಗ ಗಯಾದಲ್ಲಿಯ ವಟವೃಕ್ಷವು ಒಣಗಿತ್ತು. ಶ್ರೀವಿದ್ಯಾಧೀಶರು ಅದಕ್ಕೆ ತೀರ್ಥಪ್ರೋಕ್ಷಣೆ ಮಾಡಿ ಚಿಗುರಿಸಿದರು. ಇದರಿಂದ ಗಯಾವಾಡರ ಅಹಂಕಾರ ಖಂಡನವಾಗಿ ಅವರು ಮಧ್ವಮತವನ್ನು ಸ್ವೀಕರಿಸಿದರು. ಮಠದ ಶಿಷ್ಯರಿಂದ ಹೆಚ್ಚು ದಕ್ಷಿಣೆ ಕೇಳದೆ ಪಿಂಡಪ್ರದಾನಕ್ಕೆ ಅವಕಾಶ ಮಾಡಿಕೊಟ್ಟರು. ಶ್ರೀವಿದ್ಯಾಧೀಶರು ವಿಷ್ಣುಪಾದದ ಗುಡಿಯ ಆವರಣದಲ್ಲಿಯೇ ಉತ್ತರಾದಿಮಠವನ್ನು ಕಟ್ಟಿಸಿ ಅಲ್ಲಿ ಪ್ರಾಣದೇವರ ಪ್ರತಿಷ್ಠೆ ಮಾಡಿರುವರು. ವಿಷ್ಣುಪಾದಕ್ಕೆ ಪ್ರತಿನಿತ್ಯವೂ ಉತ್ತರಾದಿಮಠದಿಂದಲೇ ನೈವೇದ್ಯವು ಹೋಗುವದು. ಶ್ರೀಸತ್ಯಧ್ಯಾನತೀರ್ಥರ ಕಾಲದಲ್ಲಿ ಇಲ್ಲಿ ಒಂದು ಪಾಠಶಾಲೆಯನ್ನು ಏರ್ಪಡಿಸಿ ವರಖೇಡಿ ಪ್ರದ್ಯುಮ್ನಾಚಾರ್ಯರನ್ನು ಅಧ್ಯಾಪಕರನ್ನಾಗಿ ಮಾಡಿದ್ದರು. ಈಗ ಆದ್ಯ ರಾಮಾಚಾರ್ಯರು ಎಂಬವರು ಇರುವರು. ಶೃಂಗೇರಿಮಠದ ಕಟ್ಟಡವೂ ಉತ್ತರಾದಿಮಠದ ಕಟ್ಟಡವೂ ಫಲ್ಗುನದಿಯ ದಂಡೆಯ ಮೇಲೆ ಅಕ್ಕಪಕ್ಕದಲ್ಲಿಯೇ ಇದ್ದು ಎರಡೂ ಜೀರ್ಣವಾಗಿವೆ. ಗಯಾವಾಡರೆಲ್ಲ ಇಂದಿಗೂ ಮಾಧ್ವರಾಗಿದ್ದು ಇತ್ತೀಚೆಗೆ ಮಾಧ್ವಸೇವಾಸಮಿತಿ ಎಂಬ ಸಂಘ ಮಾಡಿಕೊಂಡಿರುವರು. ಸದಾನಂದ ಗುರ್ದಾ ಎಂಬ ಗಯಾವಾಡರು ಇದರ

ಕಾರ್ಯದರ್ಶಿಗಳಾಗಿರುವರು. ರಾಣೇಬೆನ್ನೂರಿನಲ್ಲಿಯ ಶ್ರೀವಿದ್ಯಾಧೀಶರ ಮೂರ್ತಿಯ ದೊಡ್ಡ ಫೋಟೋ ಒಂದನ್ನು ಈ ಸಂಘಕ್ಕೆ ಕೆ. ಟಿ. ಪಾಂಡುರಂಗಿ ಯವರು ಕೊಟ್ಟಿರುವರು ಮತ್ತು ಈ ಸಂಘದ ಪೋಷಕರಾಗಿರುವರು.

ಗಯಾದಿಂದ ಶ್ರೀವಿದ್ಯಾಧೀಶರು ಅಯೋಧ್ಯಾ ಮಥುರಾ ವೃಂದಾವನ ಕುರುಕ್ಷೇತ್ರಗಳ ಮಾರ್ಗವಾಗಿ ಬದರಿಗೆ ತಲುಪಿದರು. ಅಲ್ಲಿ ಶೀತಕುಂಡ ಉಷ್ಣ ಕುಂಡಗಳಲ್ಲಿ ಸ್ನಾನಮಾಡಿ ಅಲಕಾಸ್ನಾನಮಾಡಿ ಬದರೀನಾರಾಯಣನ ದರ್ಶನ ಮಾಡಿದರು.

ಅಲ್ಲಿಂದ ಮರಳಿ ಗಂಗಾ ಯಮುನಾ ನದಿಗಳ ಮಧ್ಯದಲ್ಲಿರುವ ಏಕಚಕ್ರ ಎಂಬ ನಗರಕ್ಕೆ ಬಂದರು. ಅಲ್ಲಿ ಯೋಗದಿಂದ ತಾವು ದೇಹತ್ಯಾಗ ಮಾಡುವ ಸಂಕಲ್ಪವನ್ನು ಶಿಷ್ಯರಿಗೆ ತಿಳಿಸಿ ಪ್ರಜಾಪತಿ ಸಂವತ್ಸರದ ಪುಷ್ಯಕೃಷ್ಣ ಚತುರ್ದಶಿಯ ದಿನ ಪ್ರಾತಃಕಾಲ ಶ್ರೀವಿದ್ಯಾಧೀಶರು ನಾರಾಯಣನ ಪಾದಕಮಲಗಳನ್ನು ಸೇರಿ ದರು. ಇವರ ವೃಂದಾವನವನ್ನು ಗಂಗಾನದಿಯ ತೀರದಲ್ಲಿ ಶಿಷ್ಯರು ಮಾಡಿದರು. ಮತ್ತು ಧರ್ಮಪುರಿಗೆ ಮರಳಿ ಬಂದು ಶ್ರೀವೇದನಿಧಿತೀರ್ಥರಿಗೆ ಗುರುಗಳು ವೃಂದಾವನಸ್ಥರಾದದ್ದನ್ನು ತಿಳಿಸಿ ದಿಗ್ವಿಜಯ ರಾಮದೇವರ ಪ್ರತಿಮೆಯನ್ನು ಒಪ್ಪಿಸಿದರು.

**ಕೆ. ಟಿ. ಪಾಂಡುರಂಗಿ**

---

ಈ ಏಕಚಕ್ರನಗರವು ಎಲ್ಲಿದೆ ಎಂಬುದು ಇನ್ನೂ ಪತ್ತೆಯಾಗಿಲ್ಲ. ಹೃಷೀಕೇಶದಿಂದ ಬದರಿಗೆ ಹೋಗುವ ದಾರಿಯಲ್ಲಿ ದೇವಪ್ರಯಾಗದಿಂದ ಸ್ವಲ್ಪ ಮುಂದೆ ಶ್ರೀನಗರ ಎಂಬ ಊರಿದೆ. ಅದರ ಹತ್ತಿರವೇ ಈ ಏಕಚಕ್ರ ನಗರವಿತ್ತೆಂದೂ ಈ ಶ್ರೀನಗರದ ಹತ್ತಿರವೇ ಗಂಗಾತೀರದಲ್ಲಿ ಶ್ರೀವಿದ್ಯಾಧೀಶಸ್ವಾಮಿಗಳ ವೃಂದಾವನವಿದ್ದಿತೆಂದೂ ಪರಂಪರೆಯಿದೆ. ಈ ನದಿಗೆ ಆಗಾಗ ಮಹಾಪೂರ ಬರುವದು. ನದಿಯ ಪ್ರವಾಹವೂ ಆಗಾಗ ಬದಲಾಗುವದು. ಆದರೂ ಈ ಸ್ಥಳದಲ್ಲಿ ಸುತ್ತಾದಿ ಹುಡುಕುವ ಕಾರ್ಯವನ್ನು ಉತ್ತರಪ್ರದೇಶ ರಾಜ್ಯದ ಮುಖ್ಯ ಕಾರ್ಯದರ್ಶಿಗಳಾದ ಪಿ. ಭೀಮುನ್‌ರ ಸಹಾಯದಿಂದ ಕೈಕೊಳ್ಳಲಾಗಿದೆ. ಶ್ರೀವಿದ್ಯಾಧೀಶರ ಸಂಕಲ್ಪವಿದ್ದರೆ ದೊರೆಯಬಹುದು.

1. ಚಿತ್ರಾವಶಾಸ್ತ್ರಿಗಳು ಸಿದ್ಧಪಡಿಸಿದ 'ಸ್ಥಲಕೋಶ' ಎಂಬ ಗ್ರಂಥದಲ್ಲಿ ಈಗಿನ ಉತ್ತರಪ್ರದೇಶದ ಇಟಾವಾ ಜಿಲ್ಲೆಯಲ್ಲಿ ಕಾಂಪಿಲ್ಯ ಎಂಬ ಊರಿನಿಂದ ನೂರುಮೈಲು

ದೂರದಲ್ಲಿ ಇರುವ ಚಕ್ರನಗರವೇ ಪುರಾಣಪ್ರಸಿದ್ಧ ಏಕಚಕ್ರನಗರ ಎಂದು ಬರೆದಿದ್ದಾರೆ.

2. Dey's '*Geographical Dictionary*' ಎಂಬ ಪುಸ್ತಕದಲ್ಲಿ Dr. Fuhrer ಎಂಬವರು ಉತ್ತರಪ್ರದೇಶದಲ್ಲಿಯ ಇಟಾವಾ ನಗರಕ್ಕೆ ಹದಿನಾರು ಮೈಲು ದೂರದಲ್ಲಿಯ ಈಗಿನ ಚಕ್ರನಗರವೇ ಪುರಾಣಪ್ರಸಿದ್ಧ ಏಕಚಕ್ರ ನಗರವೆಂದು ಬರೆದಿದ್ದಾರೆ.

ಇವೆರಡೂ ಊರುಗಳು ವಿದ್ಯಾಧೀಶವಿಜಯದಲ್ಲಿಯ ವರ್ಣನೆಗೆ ಅನುಗುಣವಾಗಿಲ್ಲ. ಈ ಊರುಗಳು ಗಂಗಾ ಯಮುನಾನದಿಗಳ ಮಧ್ಯದಲ್ಲಿ ಇಲ್ಲ. ಗಂಗಾನದಿಯ ದಂಡೆಯ ಮೇಲೂ ಇಲ್ಲ. ಅಲ್ಲದೆ ಇವು ಮಹಾಭಾರತದಲ್ಲಿ ವರ್ಣಿಸಿದ ಏಕಚಕ್ರನಗರದ ಸ್ಥಳದ ಪರಿಸರಕ್ಕೂ ಹೊಂದುವದಿಲ್ಲ. ಇವುಗಳಲ್ಲಿ ಒಂದು (ಇಟಾವಾಕ್ಕೆ ೧೬ ಮೈಲು ಇರುವ ಚಕ್ರನಗರ) ವೃದ್ಧ ಗಂಗಾನದಿಯ ಮೇಲಿದೆ. ಇಲ್ಲಿ ವೃಂದಾವನವನ್ನು ಹುಡುಕಿಸುವ ಪ್ರಯತ್ನ ಮಾಡಲಾಯಿತು. ಆದರೆ ಉಪಲಬ್ಧವಾಗಲಿಲ್ಲ.

3. ಮುರಾದಾಬಾದದ ಹತ್ತಿರ ಒಂದು ಏಕಚಕ್ರನಗರವಿದೆ ಎಂದು ಕೆಲವರು ಹೇಳುವರು. ಫರೂಕಾಬಾದದ ಹತ್ತಿರ ಒಂದಿದೆ ಎಂದು ಇನ್ನು ಕೆಲವರು ಹೇಳುವರು. ಸೀತಾಪುರದ ಹತ್ತಿರದ ಚಕ್ರತೀರ್ಥ ಎಂದು ಇನ್ನು ಕೆಲವರು ಹೇಳುವರು. ಬರೇಲಿಯ ಹತ್ತಿರ ಒಂದಿದೆ ಎಂದು ಸೇತುಮಾಧವರಾವ ಪಗಡಿ ಹೇಳುವರು.

4. '*Identification of ancient place names*' ಮತ್ತು 'प्राचीन चरित्रकोश' ಇತ್ಯಾದಿ ಇನ್ನೂ ಕೆಲವು ಗ್ರಂಥಗಳನ್ನು ಪರಿಶೀಲಿಸಿ ನೋಡಬೇಕು.

# ಶ್ರೀಸತ್ಯವಿಜಯತೀರ್ಥರು

ಇವರು ಕ್ರಿ.ಶ. 1726 ರಿಂದ 1737 ರ ವರೆಗೆ ಹನ್ನೊಂದುವರ್ಷಕಾಲ ಶ್ರೀಮದುತ್ತರಾದಿಮಠದ ಪೀಠಾಧಿಪತಿಗಳಾಗಿದ್ದರು. ಇವರು ಪೂರ್ವಾಶ್ರಮದಲ್ಲಿ ಪಾಂಡುರಂಗಿ ಗಡ್ಡದ ಶ್ರೀನಿವಾಸಾಚಾರ್ಯರ ಮಕ್ಕಳು ಮತ್ತು ಕೇಶವಭಟ್ಟಾರಕರ (ಗುರುರಾಜರ) ಮೊಮ್ಮಕ್ಕಳು. ಇವರ ಪೂರ್ವಾಶ್ರಮದ ಹೆಸರು ಬಾಬಾಚಾರ್ಯ ಪಾಂಡುರಂಗಿ. ದಕ್ಷಿಣಭಾರತದಲ್ಲಿ ರಾಜಗೋಪಾಲಪುರದ ಹತ್ತಿರದಲ್ಲಿ ಮನ್ನಾರ ಗುಡಿಯಲ್ಲಿ ವಾಸವಾಗಿದ್ದರು.

ಕೇಶವಭಟ್ಟಾರಕರ (ಗುರುರಾಜರ) ಹಿರಿಯ ಮಕ್ಕಳಾದ ಗಡ್ಡದ ಶ್ರೀನಿವಾಸಾಚಾರ್ಯರು ದೊಡ್ಡ ವಿದ್ವಾಂಸರೂ ತಪಸ್ವಿಗಳೂ ಆಗಿದ್ದರು. ಮಹಾರಾಷ್ಟ್ರದಲ್ಲಿಯ ರಾಮದಾಸಪಂಥದ ಮೇರುಸ್ವಾಮಿ ಎಂಬವನು ರಾಜಗೋಪಾಲಪುರದ ಹತ್ತಿರದ ಮನ್ನಾರಗುಡಿ ಎಂಬಲ್ಲಿ ಒಂದು ಅಗ್ರಹಾರವನ್ನು ಕಟ್ಟಿಸಿ ಅನೇಕ ವಿದ್ವಾಂಸರಿಗೆ ಮನೆ ಜಮೀನುಕೊಟ್ಟು ಅಲ್ಲಿ ಇರಲು ಅನುಕೂಲ ಮಾಡಿಕೊಟ್ಟಿದ್ದನು. ಹೀಗೆ ಅವನಿಂದ ಆಹ್ವಾನಿತರಾಗಿ ಅಲ್ಲಿ ಇದ್ದವರಲ್ಲಿ ಈ ಗಡ್ಡದ ಶ್ರೀನಿವಾಸಾಚಾರ್ಯರೂ ಒಬ್ಬರು. ಇವರ ಮಕ್ಕಳೇ ಪಾಂಡುರಂಗಿ ಬಾಬಾಚಾರ್ಯರು. ಇವರೂ ದೊಡ್ಡ ವಿದ್ವಾಂಸರೂ ಅಗ್ನಿಹೋತ್ರಿಗಳೂ ಆಗಿದ್ದರು. ಆಗ ಉತ್ತರಾದಿಮಠಾಧೀಶರಾಗಿದ್ದ ಶ್ರೀಸತ್ಯಪೂರ್ಣತೀರ್ಥರು ಸಂಚಾರ ಕ್ರಮೇಣ ಅಲ್ಲಿಗೆ ಬಂದಾಗ ಇವರು ಅಲ್ಲಿಯ ಹರಿದ್ರಾನದಿಯ ದಂಡೆಯ ಮೇಲೆ ಯಾಗ ಮಾಡುತ್ತ ಕುಳಿತಿದ್ದರು. ಆಗ ಇವರ ಗುರುಭಕ್ತಿಯನ್ನು ಪರೀಕ್ಷಿಸಬೇಕೆಂದು ಶ್ರೀಸತ್ಯಪೂರ್ಣರು ಆ ಯಾಗದ ದ್ರವ್ಯಗಳನ್ನೆಲ್ಲ ನದಿಯಲ್ಲಿ ಹಾಕಿ ಕೂಡಲೇ ಬರಬೇಕೆಂದು ಹೇಳಿಕಳಿಸಿದರು. ಅದರಂತೆ ಇವರು ಅವನ್ನೆಲ್ಲ ನದಿಯಲ್ಲಿ ಹಾಕಿ ಗುರುಗಳ ದರ್ಶನಕ್ಕೆ ಬಂದರು. ಇದರಿಂದ ಸಂತುಷ್ಟರಾದ ಶ್ರೀಸತ್ಯಪೂರ್ಣರು ಇವರಿಗೆ ಆಶ್ರಮವನ್ನು ಕೊಟ್ಟು ಸತ್ಯವಿಜಯರು ಎಂದು ಕರೆದರು. ಶ್ರೀಸತ್ಯಪೂರ್ಣರು ಈಗಾಗಲೇ ಸತ್ಯವರ್ಯ (ಸತ್ಯಪ್ರಿಯ) ಎಂಬವರಿಗೆ ಆಶ್ರಮಕೊಟ್ಟು ಅನುಸಂಸ್ಥಾನದೊಡನೆ ಅವರನ್ನು ಸಂಚಾರಕ್ಕೆ ಕಳಿಸಿದ್ದರು. ಆವರೂ ಇವರಿಗೂ ಆಶ್ರಮಕೊಟ್ಟು ಇವರನ್ನು ತಮ್ಮೊಡನೆಯೇ ಸಂಚಾರಕ್ಕೆ ಕರೆದು

ಕೊಂಡು ಹೊರಟರು. ಮತ್ತು ಕರ್ನಾಟಕದ ಭಾಗವಲ್ಲಿ ಸಂಚಾರ ಮಾಡಿದರು. ಮುಂದೆ ತಾವು ಗಂಗಾಯಾತ್ರೆಯನ್ನು ಮಾಡಬೇಕೆಂದು ಉದ್ದೇಶಿಸಿ ಮಹಾ ಸಂಸ್ಥಾನವನ್ನು ಶ್ರೀಸತ್ಯವಿಜಯರಿಗೆ ಕೊಟ್ಟು ಉತ್ತರಭಾರತದ ಕಡೆಗೆ ಪ್ರಯಾಣ ಮಾಡಿದರು.

ಸಂಚಾರಕ್ರಮದಿಂದ ಶ್ರೀಸತ್ಯವಿಜಯರು ಅಜಾದ್ರಿ ಎಂಬಲ್ಲಿಗೆ ಬಂವರು. ಅದೇ ಸಮಯದಲ್ಲಿ ಶ್ರೀಸತ್ಯವರ್ಯರೂ (ಸತ್ಯಪ್ರಿಯರೂ) ಅಲ್ಲಿಗೆ ಬಂದರು. ಈ ಸಂದರ್ಭವನ್ನು ಉಪಯೋಗಿಸಿ ಲಕ್ಕುಂಡಿ ಆನಂದತೀರ್ಥಾಚಾರ್ಯರೇ ಮೊದಲಾದ ಮಠದ ಅಭಿಮಾನಿಗಳು ಅವರಿಬ್ಬರ ಭೆಟ್ಟಿ ಮಾಡಿಸಿ ಶ್ರೀಸತ್ಯವಿಜಯರು ಆಶ್ರಮ ದಿಂದ ಚಿಕ್ಕವರಾಗಿದ್ದರೂ ವಯಸ್ಸಿನಿಂದ ಹಿರಿಯರು. ಶ್ರೀಸತ್ಯವರ್ಯರು ಆಶ್ರಮ ದಿಂದ ಹಿರಿಯರು ಆದರೆ ವಯಸ್ಸಿನಿಂದ ಚಿಕ್ಕವರು ಆದ್ದರಿಂದ ಪರಸ್ಪರ ದಂಡ ವ್ಯತ್ಯಾಸಮಾಡಿಕೊಂಡು ಶ್ರೀಸತ್ಯವಿಜಯರು ಮಹಾಸಂಸ್ಥಾನವನ್ನೂ ಶ್ರೀಸತ್ಯ-ವರ್ಯರು ಅಣುಸಂಸ್ಥಾನವನ್ನೂ ಪಡೆಯಬೇಕೆಂದು ಪ್ರಾರ್ಥಿಸಿದರು. ಇದಕ್ಕೆ ಇಬ್ಬರೂ ಒಪ್ಪಿದರು. ಶ್ರೀಸತ್ಯವಿಜಯರು ಶ್ರೀಸತ್ಯವರ್ಯರಿಗೆ ಸತ್ಯಪ್ರಿಯರು ಎಂಬ ಹೊಸ ನಾಮಕರಣಮಾಡಿ ಅಣುಸಂಸ್ಥಾನವನ್ನು ಕೊಟ್ಟು ಸಂಚಾರಕ್ಕೆ ಕಳಿಸಿದರು.

ಮುಂದೆ ಶ್ರೀಸತ್ಯವಿಜಯರು ಸಂಚಾರಕ್ರಮೇಣ ಷಡಾರಣ್ಯ ಅಂದರೆ ಆರ್ಕಾಟ, ಮತ್ತು ಆರಣಿಗಳ ಕಡೆಗೆ ಹೋದರು.

ಅಲ್ಲಿ ಆರ್ಕಾಟವಲ್ಲಿದ್ದ ಕೃಷ್ಣಾಜೀಸಂತನೂ ಆರಣಿಯಲ್ಲಿದ್ದ ವೆಂಕಾಜೀ-ಪಂತನೂ ಶ್ರೀಗಳವರಿಗೆ ಬಹಳ ಆದರ ಮಾಡಿದರು. ಇವರಿಬ್ಬರೂ ಅಣ್ಣತಮ್ಮಂದಿರು ಮತ್ತು ಶಿವಾಜಿಯ ತಂದೆ ಶಹಾಜಿಯ ಸರದಾರನಾಗಿದ್ದ ವೇದೋಜೀ ಭಾಸ್ಕರನ ವಂಶದವರು. ಮಾಧ್ವರು. ಆಗ ಆರಣಿ ಆರ್ಕಾಟಗಳ ಜಾಗಿರದಾರರಾಗಿದ್ದರು. ಇವರು ಮಠಕ್ಕೆ ಅನೇಕ ಬಂಗಾರದ ಆಭರಣಗಳು ಬೆಳ್ಳಿ ಪಾತ್ರೆಗಳು ವಜ್ರ ಸಂಪುಟ ಮುತ್ತುರತ್ನಗಳ ಸರಗಳನ್ನು ಕೊಟ್ಟರು. ಈಗ ಉತ್ತರಾದಿಮಠದಲ್ಲಿದ್ದ ಬಂಗಾರದ ಗಂಗಾಳವು ಇವರೇ ಕೊಟ್ಟದ್ದಾಗಿದೆ. ಶ್ರೀಸತ್ಯವಿಜಯರು ಕೆಲಕಾಲ ಅಲ್ಲಿಯೇ ಇದ್ದರು.

ಶ್ರೀಸತ್ಯಪೂರ್ಣರು ಗಂಗಾಯಾತ್ರೆಯನ್ನು ಮುಗಿಸಿಕೊಂಡು ಕೃಷ್ಣಾತೀರದ ಕೋಲಪುರಕ್ಕೆ ಬಂದರು. ಅಲ್ಲಿ ಅವರು ದೇಹಾಯಾಸವಾಗಿ ವೃಂದಾವನಸ್ಥ

ರಾದರು. ಶ್ರೀಸತ್ಯವಿಜಯರೂ ಶ್ರೀಸತ್ಯಪ್ರಿಯರೂ ಅಲ್ಲಿಗೆ ಹೋಗಿ ವೈಭವದಿಂದ ಗುರುಗಳ ಸಮಾರಾಧನೆಯನ್ನು ಮಾಡಿದರು. ಬಳಿಕ ಶ್ರೀಸತ್ಯವಿಜಯರು ಆರ್ಕಾಟ ಮತ್ತು ಆರಣಿಗಳಿಗೆ ಹೋಗಿ ಕೃಷ್ಣಾಜೀಪಂತ ಮತ್ತು ವೆಂಕಾಜೀಪಂತರ ಸೇವೆ ಯನ್ನು ಸ್ವೀಕರಿಸುತ್ತ ಇದ್ದರು. ಪ್ರತಿದಿನ ಸಾಯಂಕಾಲ ಶ್ರೀಗಳೂ ವೆಂಕಾಜೀ ಪಂತನೂ ಆರಣಿಯಿಂದ ಹೊರಟು ಕೌಂಡಿಣ್ಯಾನದಿಯ ದಂಡೆಯಮೇಲೆ ಸಂಚಾರ ಮಾಡುತ್ತಿದ್ದರು. ಶ್ರೀಗಳು ಆರಣಿಯಿಂದ ಕೆಲ ಮೈಲುದೂರ ನದಿಯ ದಂಡೆಯ ಮೇಲಿನ ಒಂದು ಪ್ರದೇಶವನ್ನು ತೋರಿಸಿ ಇಲ್ಲಿ ತಮ್ಮ ಮಠವನ್ನು ಕಟ್ಟಿಸುವ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ವೆಂಕಾಜಿಪಂತನು ಅಲ್ಲಿ ಮಠವನ್ನೂ ತನಗೊಂದು ಅರಮನೆಯನ್ನೂ ಕಟ್ಟಿಸಿದನು. ಮಠವು ಅರಮನೆಯ ಒಳಗೇ ಇದೆ. ಅರವತ್ತು ಜನ ಬ್ರಾಹ್ಮಣ ಕುಟುಂಬಗಳಿಗೆ ಮನೆಗಳನ್ನು ಕಟ್ಟಿಸಿ ಅದನ್ನೊಂದು ಅಗ್ರಹಾರ ವನ್ನಾಗಿಯೇ ಮಾಡಿದನು. ಅದು ಸತ್ಯವಿಜಯನಗರವೆಂದು ಪ್ರಸಿದ್ಧವಾಯಿತು.

ಮುಂದೆ ಕೆಲದಿನಗಳಾದ ಮೇಲೆ ಶ್ರೀಗಳಿಗೆ ದೇಹಾಯಾಸವಾಯಿತು. ಶ್ರೀಸತ್ಯಪ್ರಿಯತೀರ್ಥರು ದೂರದೇಶದಲ್ಲಿ ಸಂಚಾರದಲ್ಲಿದ್ದರು. ಆದ್ದರಿಂದ ಶ್ರೀಗಳು ದೇವರ ಪೆಟ್ಟಿಗೆ ಮತ್ತು ಬೆಳ್ಳಿ ಬಂಗಾರದ ಸಾಮಾನುಗಳನ್ನೆಲ್ಲ ಪೂಜಾಗೃಹದಲ್ಲಿ ಭೂಗತಮಾಡಿದರು. ಅವುಗಳ ಮೂರು ಪಟ್ಟಿ ಮಾಡಿ ಒಂದು ದೇವರ ಪೆಟ್ಟಿಗೆಯಲ್ಲಿ ಇಟ್ಟರು. ಇನ್ನೊಂದನ್ನು ವೆಂಕಾಜೀಪಂತನ ಕೈಯಲ್ಲಿ ಕೊಟ್ಟರು. ಮೂರನೆ ಯದನ್ನು ಶ್ರೀಸತ್ಯಪ್ರಿಯರಿಗೆ ಕೊಡಬೇಕೆಂದೂ ಅವರನ್ನು ಬೇಗನೇ ಕರೆಯಿಸಿ ಕೊಳ್ಳಬೇಕೆಂದೂ ಹೇಳಿದರು. ಶ್ರೀಸತ್ಯಪ್ರಿಯರು ಬರುವವರೆಗೆ ದೇವರಪೆಟ್ಟಿಗೆ ಯನ್ನು ಭೂಗತಮಾಡಿದ ಸ್ಥಳದ ಎದುರಿಗೆ ದೀಪಹಚ್ಚಿಟ್ಟು ಒಂದು ಅನ್ನದ ತಪ್ಪೇಲಿ ಯನ್ನಿಟ್ಟು ದ್ವಾದಶಸ್ತೋತ್ರವನ್ನು ಹೇಳಿ ಎಲ್ಲರೂ ಆ ನೈವೇದ್ಯವನ್ನು ಸ್ವೀಕರಿಸ ಬೇಕೆಂದು ಹೇಳಿದರು. ಹೀಗೆ ಹೇಳಿ ಸಿದ್ಧಾರ್ಥಿಸಂವತ್ಸರ ಚೈತ್ರಕೃಷ್ಣ ಏಕಾದಶಿಯ ದಿನ ವೃಂದಾವನಸ್ಥರಾದರು. ಅವರ ವೃಂದಾವನವು ಸತ್ಯವಿಜಯನಗರದ ಅರಮನೆಯ ಹಿಂಬದಿಗೆ ಕೌಂಡಿಣ್ಯಾನದೀತೀರದಲ್ಲಿದೆ. ಅಲ್ಲಿಯೇ ಶ್ರೀಸತ್ಯವೀರರ ವೃತ್ತಿಕಾವೃಂದಾವನವೂ ಇದೆ. ಮುಂದಿನ ಓರ್ವ ಆರಣೀ ಜಾಗಿರದಾರನಿಗೆ ಗಂಡಸು ಮಕ್ಕಳಿದ್ದಿಲ್ಲ. ರಾಮೇಶ್ವರದ ಯಾತ್ರೆಗೆ ಹೊರಟಿದ್ದ ಶ್ರೀಸತ್ಯವೀರರು ಆರಣಿಯ ಆಗಿನ ಜಾಗಿರದಾರನ ಅರಮನೆಯಲ್ಲಿ ಪೂಜೆಮಾಡಿ ಅನುಗ್ರಹಿಸಿದ್ದರಿಂದ ಅವನಿಗೆ ಗಂಡು ಮಗುವಾಯಿತು. ಆದ್ದರಿಂದ ಶ್ರೀಸತ್ಯವೀರರು ವೃಂದಾವನಸ್ಥ

ರಾದಮೇಲೆ ಅವರ ಮೃತ್ತಿಕಾವೃಂದಾವನವನ್ನು ಶ್ರೀಸತ್ಯವಿಜಯರ ಮಠದ ಆವರಣ ದಲ್ಲಿಯೇ ಸ್ಥಾಪಿಸಲಾಗಿದೆ.

ಶ್ರೀಸತ್ಯವಿಜಯರು ವೃಂದಾವನಸ್ಥರಾದಮೇಲೆ ವೆಂಕಾಜಿಪಂತನು ಕುದುರೆ ಸವಾರರನ್ನು ಕಳಿಸಿ ಶ್ರೀಸತ್ಯಪ್ರಿಯರಿಗೆ ಹೇಳಿ ಕಳಿಸಿದನು. ಅವರು ಇಪ್ಪತ್ತೆರಡು ದಿನಗಳಾದ ಮೇಲೆ ಬಂದು ಸೇರಿದರು. ತಾವು ಶ್ರೀಸತ್ಯವಿಜಯರ ವೃಂದಾವನದ ಮುಂದೆ ನಿಂತು ಅವರ ಅಪ್ಪಣೆ ಪಡೆದು ದೇವರ ಪೆಟ್ಟಿಗೆ ಮತ್ತು ಇತರ ಸಾಮಾನು ಗಳನ್ನು ಸ್ವೀಕರಿಸಬೇಕು ಎಂಬ ಶ್ರೀಸತ್ಯವಿಜಯರ ಆಜ್ಞೆಯನ್ನು ವೆಂಕಾಜೀಪಂತನು ಶ್ರೀಸತ್ಯಪ್ರಿಯರಿಗೆ ತಿಳಿಸಿದನು. ಅವರು ಅದಕ್ಕೆ ಒಪ್ಪದೇ ತಿರುಗಿ ಹೊರಟರು. ಆದರೆ ಸ್ವಲ್ಪದೂರ ಹೋದಮೇಲೆ ಒಂದು ಹನುಮಂತದೇವರ ಮೂರ್ತಿಯು ಅವರನ್ನು ಕೈಎತ್ತಿ ತಡೆಯಿತು. ಆಗ ಅವರು ಮರಳಿ ಬಂದು ಶ್ರೀಸತ್ಯವಿಜಯರ ವೃಂದಾವನದ ಎದುರಿಗೆ ನಿಂತು 'ಬಂಧುಸ್ತ್ವಂ ಗುರುರಿಷ್ಟದೈವತಮ್' ಇತ್ಯಾದಿಯಾದ ಶ್ಲೋಕ ದಿಂದ ಪ್ರಾರ್ಥಿಸಿದರು. (ಈ ಶ್ಲೋಕದ ಪೂರ್ಣಪಾಠವನ್ನು ಪುಟ ೧೦೬ ರಲ್ಲಿ ಕೊಡಲಾಗಿದೆ.) ಶ್ರೀಸತ್ಯವಿಜಯರು ಅಪ್ಪಣೆಕೊಟ್ಟ ಸೂಚನೆಯಾಯಿತು. ಅಲ್ಲಿಂದ ಅವರು ದೇವರ ಪೆಟ್ಟಿಗೆಯನ್ನು ಭೂಗತಮಾಡಿದ ಸ್ಥಳಕ್ಕೆ ಹೋಗಿ ದೇವರನ್ನು ಪ್ರಾರ್ಥಿಸಿದರು. ಕೂಡಲೇ ಭೂಮಿ ಹೋಳಾಗಿ ದೇವರ ಪೆಟ್ಟಿಗೆ ಹೊರಗೆ ಬಂದಿತು. ಬಳಿಕ ದೇವರಪೂಜೆ ಮಾಡಿ ಶ್ರೀಸತ್ಯವಿಜಯರ ಆರಾಧನೆಯನ್ನು ವಿಜೃಂಭಣೆಯಿಂದ ಮಾಡಿದರು. ತಮ್ಮ ಸಂಚಾರವನ್ನು ಕೈಕೊಂಡರು.

ಶ್ರೀವಿದ್ಯಾಧೀಶರು ಮತ್ತು ಶ್ರೀಸತ್ಯವಿಜಯರು ಈ ಇಬ್ಬರು ಪಾಂಡುರಂಗಿ ಮನೆತನದ ಶ್ರೀಗಳವರ ಮಧ್ಯದಲ್ಲಿ ಶ್ರೀಸತ್ಯಾನಂದರು ಎಂಬ ಇನ್ನೊಬ್ಬ ಪಾಂಡುರಂಗಿ ಮನೆತನದ ಶ್ರೀಗಳಾದರು. ಆದರೆ ಇವರು ಪೀಠಾಧಿಪತಿಗಳಾಗಲಿಲ್ಲ. ಇವರು ಶ್ರೀಸತ್ಯನಿಧಿತೀರ್ಥರಿಂದ ಆಶ್ರಮವನ್ನು ಪಡೆದಿದ್ದರು. ಶ್ರೀಸತ್ಯನಿಧಿ ತೀರ್ಥರೂ ಪಾಂಡುರಂಗಿ ಮನೆತನದ ದೌಹಿತ್ರ ಸಂತಾನದವರು ಎಂದು ಸತ್ಯನಿಧಿ ವಿಲಾಸದಿಂದ ತಿಳಿದುಬರುತ್ತದೆ. ಶ್ರೀಸತ್ಯಾನಂದರ ವೃಂದಾವನವು ಮಳಖೇಡದಲ್ಲಿ ಶ್ರೀ ಟೀಕಾರಾಯರ ವೃಂದಾವನದ ಎದುರಿಗೆ ಇರುವದು.

ಶ್ರೀಸತ್ಯವಿಜಯರ ವಿದ್ಯಾಶಿಷ್ಯರಲ್ಲಿ ಮಧುಸೂದನಭಿಕ್ಷುಗಳು ಮತ್ತು ವರಖೇಡಿ ತಿಮ್ಮಣ್ಣಾಚಾರ್ಯರೂ ಪ್ರಮುಖರು.

# ಶ್ರೀಸತ್ಯಪ್ರಜ್ಞತೀರ್ಥರು

ವಿಶ್ವವಿಖ್ಯಾತರಾದ ಶ್ರೀಸತ್ಯಧ್ಯಾನತೀರ್ಥರ ನಂತರ ಇವರು ಶ್ರೀಮದುತ್ತರಾದಿ ಮಠಾಧೀಶರಾದರು. ಇವರ ಪೂರ್ವಾಶ್ರಮದ ಹೆಸರು ಪಾಂಡುರಂಗಿ ಜಯಾಚಾರ್ಯರು. ಪಾಂಡುರಂಗಿ ಶ್ರೀಕೇಶವಭಟ್ಟಾರಕರ (ಗುರುರಾಜರ) ಎರಡನೆಯ ಮಕ್ಕಳಾದ ರತ್ನಮಾಲಾ ನರಸಿಂಹಾಚಾರ್ಯರ ಸಂತತಿಗೆ ಸೇರಿದವರು. ಅವರಿಂದ ಎಂಟನೆಯ ತಲೆಮಾರಿನವರು. ಶ್ರೀಸತ್ಯಧ್ಯಾನತೀರ್ಥರ ಪೂರ್ವಾಶ್ರಮದ ಅಕ್ಕನ ಮಕ್ಕಳು ಮತ್ತು ಅವರ ಅಳಿಯಂದಿರು. ಇವರ ತಂದೆ ರಂಗಾಚಾರ್ಯ ಪಾಂಡುರಂಗಿಯವರು ಶ್ರೀಸತ್ಯಧೀರತೀರ್ಥರ ಪೂರ್ವಾಶ್ರಮದ ಅಳಿಯಂದಿರು.

ಈ ಜಯಾಚಾರ್ಯ ಪಾಂಡುರಂಗಿಯವರು ಶ್ರೀಸತ್ಯಧ್ಯಾನತೀರ್ಥರಲ್ಲಿಯೂ ತಮ್ಮ ಅಣ್ಣ ಕೃಷ್ಣಾಚಾರ್ಯ ಪಾಂಡುರಂಗಿಯವರಲ್ಲಿಯೂ ತರ್ಕ ಮತ್ತು ವೇದಾಂತಶಾಸ್ತ್ರಗಳನ್ನು ಓದಿದರು. ಇವರು ಶ್ರೀವಿದ್ಯಾಧೀಶರ ವಾಕ್ಯಾರ್ಥಚಂದ್ರಿಕಾ ಮತ್ತು ಶ್ರೀಗುರುರಾಜರ ಶೇಷವಾಕ್ಯಾರ್ಥ ಚಂದ್ರಿಕಾಗಳಲ್ಲಿ ವಿಶೇಷ ಪ್ರಾವೀಣ್ಯವುಳ್ಳವರಾಗಿದ್ದು ಈ ಟಿಪ್ಪಣಿಗಳನ್ನಿಟ್ಟುಕೊಂಡು ಪಾಠ ಹೇಳುವದರಲ್ಲಿ ಸಿದ್ಧಹಸ್ತರಾಗಿದ್ದರು. ಹೀಗೆ ಪಂಡಿತರಾದ ಇವರ ಮೇಲೆ ಮಠದ ಆಡಳಿತದ ಭಾರವು ಹೆಚ್ಚಾಗಿ ಬಿದ್ದಿದ್ದಿತು. 1920 ರಿಂದ 1942 ರ ವರೆಗೆ ಇಪ್ಪತ್ತೆರಡುವರ್ಷ ಶ್ರೀಮದುತ್ತರಾದಿಮಠದ ದಿವಾಣರಾಗಿದ್ದರು. ಶ್ರೀಸತ್ಯಧ್ಯಾನತೀರ್ಥರ ಕಾಲದಲ್ಲಿ ಅದ್ಭುತವಾಗಿ ನಡೆಯುವ ಮಹಾಸಮಾರಾಧನೆಗಳು ಚಾತುರ್ಮಾಸದ ಕಾರ್ಯಕ್ರಮಗಳು ವಿದ್ವತ್ಸಭೆಗಳು ಇವುಗಳ ವ್ಯವಸ್ಥೆ ಮಾಡುವ ಹೊಣೆ ಇವರದೇ ಆಗಿರುತ್ತಿತ್ತು. ವಿದ್ವಾಂಸರಿಗೆ ವಿಪುಲಸಂಭಾವನೆ ಕೊಡುವ ಏರ್ಪಾಡನ್ನು ಇವರೇ ಮಾಡಬೇಕಾಗುತ್ತಿತ್ತು. ಪದ್ಮಸರೋವರದ ಸಭೆಗೆ ಬಂದ ವಿದ್ವಾಂಸರೆಲ್ಲ ಜ.ಪಾ ಎಂಬ ಇವರ ಹಸ್ತಾಕ್ಷರದ ಚೀಟಿಗಳನ್ನು ಪಡೆದುಕೊಂಡು ಶ್ರೀಸತ್ಯಧ್ಯಾನರಿಂದ ಯಥೋಚಿತ ಸಂಭಾವನೆಯನ್ನು ಪಡೆಯುತ್ತಿದ್ದರು. ಶ್ರೀಸತ್ಯಧ್ಯಾನರ ಅನ್ನದಾನ ದಕ್ಷಿಣಾದಾನ ಕಾರ್ಯಗಳಲ್ಲಿ ಇವರು ಬಲಗೈಯೆನಿಸಿದ್ದರು.

ಹೀಗೆ ಪಾಂಡಿತ್ಯ ಆಡಳಿತ ಸಾಮರ್ಥ್ಯ ಎರಡನ್ನೂ ಪಡೆದ ಇವರನ್ನೇ ಶ್ರೀಸತ್ಯಧ್ಯಾನತೀರ್ಥರು ವೃಷ ಸಂವತ್ಸರ ಪುಷ್ಯ ಶುಕ್ಲ ಚತುರ್ದಶೀ ದಿವಸ (1-1-1942) ಪಂಢರಪುರದಲ್ಲಿ ಸಂನ್ಯಾಸಾಶ್ರಮಕೊಟ್ಟು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಿದರು. ಇವರಿಗೆ ಸತ್ಯಪ್ರಜ್ಞರು ಎಂದು ನಾಮಕರಣ

ಮಾಡಿದರು. ಮುಂದೆ ಚಿತ್ರಭಾನು ಸಂವತ್ಸರ ಚೈತ್ರಶುದ್ಧ ಅಷ್ಟಮಿಯ ದಿನ ಶ್ರೀಸತ್ಯಧ್ಯಾನರು ಪಂಢರಪುರದಲ್ಲಿಯೇ ವೃಂದಾವನಸ್ಥರಾದರು. ಅಲ್ಲಿಂದ ಮುಂದೆ ಮೂರು ವರ್ಷ ಮಾತ್ರ ಇವರು ಪೀಠಾಧಿಪತಿಗಳಾಗಿದ್ದರೂ ಅನೇಕ ಮಹತ್ವದ ಕಾರ್ಯಗಳನ್ನು ಮಾಡಿದರು. ಪಂಢರಪುರ ಮತ್ತು ರಾಯಚೂರುಗಳಲ್ಲಿ ತಮ್ಮ ಗುರುಗಳ ಮಹಾಸಮಾರಾಧನೆಯನ್ನು ವೈಭವದಿಂದ ಮಾಡಿದರು. ಮಠಕ್ಕೆ ಇದ್ದ ಸುಮಾರು ಹತ್ತು ಲಕ್ಷ ರೂಪಾಯಿಗಳ ಸಾಲವನ್ನು ತೀರಿಸಿದರು. ಶ್ರೀಸತ್ಯಕಾಮರು ಮತ್ತು ಶ್ರೀಸತ್ಯಧೀರರ ಮೂಲವೃಂದಾವನಗಳಿರುವ ಕೃಷ್ಣಾತೀರದಲ್ಲಿರುವ ಆತಗೂರು ಎಂಬ ಗ್ರಾಮದಲ್ಲಿದ್ದು ನಿರಂತರ ಸುಧಾಪಾಠವನ್ನು ಮಾಡಿದರು.

ತಪಸ್ವಿಗಳೂ ವಿದ್ವಾಂಸರೂ ಸರಳ ಸ್ವಭಾವದವರೂ ಆದ ತಮ್ಮ ಪೂರ್ವಾ-ಶ್ರಮದ ತಂಗಿಯ ಮಕ್ಕಳಾದ ಕುಸನೂರಿನ ಕಟ್ಟಿ ವೆಂಕಣ್ಣಾಚಾರ್ಯರಿಗೆ ಆಶ್ರಮ ಕೊಟ್ಟು ಸತ್ಯಾಭಿಜ್ಞರು ಎಂದು ಕರೆದರು. ಮುಂದೆ ಪಾರ್ಥಿವನಾಮ ಸಂವತ್ಸರ ಚೈತ್ರ ಶುಕ್ಲ ದ್ವಿತೀಯಾದ ದಿವಸ (14-4-1945) ಆತಗೂರದಲ್ಲಿಯೇ ವೃಂದಾವನಸ್ಥರಾದರು. ಇವರಲ್ಲಿ ಓದಿದವರಲ್ಲಿ ಪ್ರಾಕ್ತೂರು ಭೀಮಾಚಾರ್ಯರು ಬಿ. ಕೃಷ್ಣಾಚಾರ್ಯರು ಇನ್ನ ಕೃಷ್ಣಾಚಾರ್ಯರು ಮಾಹುಲೀ ಗೋಪಾಲಾ-ಚಾರ್ಯರು ಹುಣಸಗಿ ರಾಮಾಚಾರ್ಯರು ಮುಂಡರಗಿ ಸುಬ್ಬಣ್ಣಾಚಾರ್ಯರು ಪ್ರಮುಖರು. ಸಾಂಗಲಿ ಮೈಸೂರು ಮತ್ತು ಚಿದಂಬರಗಳಲ್ಲಿದ್ದು ಓದಲು ಕೆ. ಟಿ. ಪಾಂಡುರಂಗಿಗೆ ಇವರು ಬಹಳ ಸಹಾಯ ಮಾಡಿದರು.

ಪಾಂಡುರಂಗಿ ಮನೆತನದಲ್ಲಿ ಈ ಮೂವರು ಪೀಠಾಧಿಪತಿಗಳಲ್ಲದೆ ಶ್ರೀ ಸತ್ಯಾನಂದರೆಂಬ ಇನ್ನೊಬ್ಬರು ಯತಿಗಳಾದದ್ದನ್ನು ಈಗಾಗಲೇ ಹೇಳಿದ್ದೇವೆ. ಇವರಲ್ಲದೆ ಮೂವರು ಯತಿಗಳು ಪಾಂಡುರಂಗಿ ಮನೆತನದ ದೌಹಿತ್ರ ಸಂತಾನಕ್ಕೆ ಸೇರಿದವರು. ಶ್ರೀಸತ್ಯನಿಧಿಗಳು ಶ್ರೀಸತ್ಯಾಧಿರಾಜರು ಮತ್ತು ಶ್ರೀಸತ್ಯಾಭಿಜ್ಞರು ಈ ಮೂವರು ಪಾಂಡುರಂಗಿಯವರ ದೌಹಿತ್ರ ಸಂತಾನಕ್ಕೆ ಸೇರಿದವರು.

ಇವರಲ್ಲದೆ ಅನೇಕ ಗೃಹಸ್ಥರೂ ಅಪರೋಕ್ಷಜ್ಞಾನಿಗಳೂ ಟಿಪ್ಪಣೀಕಾರರೂ ದೊಡ್ಡ ವಿದ್ವಾಂಸರೂ ಆಗಿಹೋಗಿರುವರು. ಈ ಎಲ್ಲ ಮಹನೀಯರು ಮುಂದಿನ ಪೀಳಿಗೆಯ ಪಾಂಡುರಂಗಿಯವರು ಸಾತ್ವಿಕರೂ ಸದಾಚಾರ ಸಂಪನ್ನರೂ ಆಗುವಂತೆ ಆಶೀರ್ವದಿಸಬೇಕೆಂದು ಪ್ರಾರ್ಥಿಸುವೆವು.

**ಕೆ. ಟಿ. ಪಾಂಡುರಂಗಿ**

ಶ್ರೀಪ್ರಸನ್ನ ಶ್ರೀನಿವಾಸದಾಸ ವಿರಚಿತ

# ಶ್ರೀವಿದ್ಯಾಧೀಶತೀರ್ಥ ವಿಜಯ

ವಿದ್ಯಾಧೀಶರ ಪಾದ ಪದ್ಮದಲಿ ಶರಣಾದೆ ।
  ಶ್ರೀದಯದುಪತಿ ನೃಹರಿ ಪ್ರಿಯಕರ ಮಹಂತ ॥
ಔದಾರ್ಯಕರುಣೆಯು ಸದ್ವೈರಾಗ್ಯ ಭಕ್ತಿಮಾನ್ ।
  ಉದ್ದಾಮಪಂಡಿತ ದಿಕ್ಕವಿಜಯ ಜಯ ಜಯಶೀಲ ॥ ಪ ॥
ನಿರ್ದೋಷ ಗುಣಪೂರ್ಣ ಶ್ರೀರಮಣ ಹಂಸನಿಗೆ ।
  ವಿಧಿಸನಕ್ಕ ಮೊದಲಾದ ಗುರುಪರಂಪರೆಗೆ ॥
ಯತಿವರ್ಯ ಅಚ್ಯುತಪ್ರೇಕ್ಷರಿಗೆ ಆನಂದ ।
  ತೀರ್ಥರಾಂಬುಜ ಪಾದಗಳಿಗೆ ಆ ನಮಿಪೆ ॥ ೧ ॥
ಪಂಕರುಹನಾಭ ನರಹರಿ ಮಾಧವ ।
  ಅಕ್ಷೋಭ್ಯ ಜಯತೀರ್ಥ ವಿದ್ಯಾಧಿರಾಜ ॥
ವಾಗ್ವಜ್ರ ರಾಜೇಂದ್ರ ಕವಿವರ ಕವೀಂದ್ರ ।
  ವಾಗೀಶರಿಗೆ ನಮೋ ರಾಮಚಂದ್ರರಿಗೆ ॥ ೨ ॥
ಶ್ರೀರಾಮಪ್ರಿಯ ರಾಮಚಂದ್ರರಕರಜಯ ।
  ಸೂರಿಗಳು ವಿಬುಧೇಂದ್ರ ವಿದ್ಯಾನಿಧಿಗೆ ॥
ಎರಗಿ ವಿದ್ಯಾನಿಧಿಯ ಸುತ ರಘುನಾಥರಿಗೂ ।
  ಕರುಣಾಳು ರಘುವರ್ಯರಿಗೂ ಆ ನಮಿಪೆ ॥ ೩ ॥
ವೇದಾಂತ ಕೋವಿದ ರಘೂತ್ತಮತೀರ್ಥರಿಗೆ ।
  ವೇದವ್ಯಾಸಾಭಿದ ಯತಿಗಳಿಗೆ ನಮಿಪೆ ॥
ವೇದವ್ಯಾಸತೀರ್ಥರ ಕರಕಮಲ ಸಂಜಾತ ।
  ವಿದ್ಯಾಧೀಶರ ಚರಣಕ್ಕೆ ನಮಿಪೆ ॥ ೪ ॥
ಮೊದಲು ಪುಣ್ಯಸ್ತಂಭ ಪಟ್ಟಣದ ಬ್ರಾಹ್ಮಣರು ।
  ಆನಂದಭಟ್ಟರು ಇವರ ವಂಶಜರು ॥
ಮುದದೆ ಸೇವಿಸಿ ಪಾಂಡುರಂಗನ್ನ ಬಹುಕಾಲ ।
  ಹೊಂದಿದರು ಪಾಂಡುರಂಗೀಯ ನಾಮವನು ॥ ೫ ॥

ವೈರಾಗ್ಯಯುಕ್ತಜ್ಞಾನ ಭಕ್ತಿಸಂಪನ್ನರು ।
ಭಾರಿ ಪಂಡಿತರನ್ನ ಆನಂದಭಟ್ಟ ॥
ಶಿರಿ ವ್ಯಾಸ ಮುನಿ ವಾದಿರಾಜರಿಗೆ ಪ್ರಿಯತಮರು ।
ಪರಪಕ್ಷಗಿರಿ ವಜ್ರ ಸ್ವಪಕ್ಷ ಸ್ಥಾಪಕರು ॥ ೬ ॥

ತಿಳೀಯಬಾರದು ಈ ಆನಂದಭಟ್ಟರ ।
ಈ ಲೋಕ ಸಾಮಾನ್ಯನರರು ಎಂದು ॥
ಇಳಿಯಲಿ ಸುರರ್ಹುಟದವರು ಈ ಋಷಿಯ ।
ಮಾಲೋಲ ಪುಟ್ಟಿಸಿಹ ಕರ್ಮಗತಿಯಲ್ಲಿ • ॥ ೭ ॥

ಕರ್ಮಸುಳಿಯಲಿ ಸಿಲುಕಿ ಆನಂದಭಟ್ಟರು ।
ತಮ್ಮ ಗೃಹ ಬಿಟ್ಟು ಕೊಲ್ಲಾಪುರ ಪೋಗಿ ॥
ರಮೆಯ ಪೂಜಿಸೆ ಹನ್ನೆರಡು ವರುಷಗಳು ।
ಲಕ್ಷ್ಮಿ ಸ್ವಪ್ನದಿ ಅನುಗ್ರಹ ಮಾ(ತಾ)ಡಿದಳು ॥ ೮ ॥

ಸ್ವಪ್ನಸೂಚನೆಯಂತೆ ಪೂಜಾಕಾಲದಲಿ ।
ಸರ್ಪರೂಪದಿ ಶಿರಿ ಬರಲು ಕಂಡರಂಜಿ ॥
ಸರ್ಪ ಪೊದರೊಳ ಪೋಗೆ ಸ್ವಪ್ನ ನೆನಪಿಗೆ ಬಂದು ।
ವಿಪ್ರವರ್ಯರು ಪುಚ್ಛವ ಸ್ಪರ್ಶಿಸಿದರು ॥ ೯ ॥

ಸರ್ಪ ರೂಪದಿ ಬಂದ ಲಕ್ಷ್ಮಿಯು ಪಾದವ ।
ಈ ಪುಣ್ಯವಂತರು ಸ್ಪರ್ಶಿಸಿದಾರಾಭ್ಯ ॥
ತಪ್ಪದೇ ಬುದ್ಧಿ ಕೌಶಲ್ಯ ಐಶ್ವರ್ಯವು ।
ಶುಭೋದಯವಾಗಿ ಪೋದರು ಕಾಶೀಗೆ ॥ ೧೦ ॥

ವಾರಣಾಸಿಯಲ್ಲಿ ವ್ಯಾಸ ಮಾಧವ ಶಿವಾ ।
ನುಗ್ರಹದಿ ಉದ್ದಾಮ ಪಾಂಡಿತ್ಯ ಹೊಂದಿ ॥
ಗುರು ವ್ಯಾಸರಾಜರ ವಾದಿರಾಜರ ದಯದಿ ।
ಭಾರಿ ಜಯಶೀಲರಾದರು ದಿಗ್ವಿಜಯದಿ ॥ ೧೧ ॥

ದುರ್ವಾದಿಗಜಸಿಂಹ ಶ್ರೀವ್ಯಾಸರಾಜರು ।
ಅದ್ವಿತೀಯ ಶೂರರು ಅಜೇಯರು ವಾದದಲಿ ॥

ಆದ ಶ್ರೀವಾದಿರಾಜರು ಅನುಗ್ರಹ ಮಾಡಿ ಆ ।
ನಂದಭಟ್ಟಗೆ ಪುಟ್ಟಿದನು ನರಸಿಂಹ ॥ ೧೨ ॥

ನರಸಿಂಹಾಭಿದನು ಎರಡನೇ ಮಗನು ।
ಅಗ್ರಜನು ಶ್ರೀನಿವಾಸನು ಕೊನೆಯವನು ॥
ಗುರುರಾಜೀಯ ಪ್ರಖ್ಯಾತನು ಕೇಶವನು ।
ಮೂರು ಈ ಸೂರಿಗತ ಚರಣಕ್ಕೆ ನಮಿಪೆ ॥ ೧೩ ॥

ಶ್ರೀನಿವಾಸಾಚಾರ್ಯರು ಕೇಶವಾಚಾರ್ಯರು ।
ಸನ್ಯಾಸ ಕೊಳ್ಳಲಿಲ್ಲ ನರಸಿಂಹಾಚಾರ್ಯ ॥
ಹಿಂದೆ ವಾದಿರಾಜರು ಮಾಡಿದಂತೆಯೇ ।
ಘನ ಮಹಾ ಸಂಸ್ಥಾನ ಹೊಂದಿದರು ಮುದದಿ ॥ ೧೪ ॥

ವಿದ್ಯಾಪತಿಗಳು ಕೃಷ್ಣದ್ವೈಪಾಯನರು ।
ವೇದೇಶತೀರ್ಥರು ಈ ಮೂವರಲ್ಲಿ ॥
ವಿದ್ಯಾಪತಿಗೆ ಸಂಸ್ಥಾನ ಕೊಡಲಾ ಎಂದು ।
ವೇದವ್ಯಾಸತೀರ್ಥರು ಯೋಚನೆ ಮಾಡಿದರು ॥ ೧೫ ॥

ಸ್ಮರಿಸಿ ಗುರುಗಳ ಚರಣ ಬೇಡಿದರು ಸ್ವಾಮಿಗಳು ।
ಅರುಹಿದರು ಸ್ವಪ್ನದಿ ಗುರು ರಘೂತ್ತಮರು ॥
ಭರದಿ ಸ್ವಾಮಿಗಳು ನರಸಿಂಹಾಚಾರ್ಯರ ।
ಕರೆದು ಕೊಟ್ಟರು ತುರಿಯ ಆಶ್ರಮವ ಮುದದಿ ॥ ೧೬ ॥

ವೇದವ್ಯಾಸತೀರ್ಥರು ನರಸಿಂಹಾಚಾರ್ಯರಿಗೆ ।
ವಿದ್ಯಾಧೀಶತೀರ್ಥ ನಾಮವನ್ನಿತ್ತು ॥
ಉತ್ತಮ ಪ್ರಣವ ಮಂತ್ರವ ಬೋಧಿಸಿ ತಮ್ಮ ।
ಸಂಸ್ಥಾನ ಪೀಠಕ್ಕೆ ನಿಯಮನ ಮಾಡಿದರು ॥ ೧೭ ॥

ಹದಿನೈದು ನೂರು ನಲವತ್ತೊಂದು ಶಾಲಿ ಶಕ್ಯವ್ರ ।
ಸಿದ್ಧಾರ್ಥಿ ವತ್ಸರ ಚೈತ್ರಸಿತ ಶದಿಗೆ ॥
ವೇದವ್ಯಾಸತೀರ್ಥರು ಹರಿಪದ ಐದಲು ।
ವಿದ್ಯಾಧೀಶರು ಕೊಂಡರು ಸಂಸ್ಥಾನ ॥ ೧೮ ॥

ರಘುನಾಥ ರಘುವರ್ಯ ರಘೂತ್ತಮತೀರ್ಥರ ।
ಮಾರ್ಗ ಅನುಸರಿಸುತ್ತ ಶ್ರೀಮಠ ಆಳಿ ॥
ಯೋಗ್ಯರಿಗೆ ಉಪದೇಶ ದುರ್ಮತ ಖಂಡನ ।
ವಾಕ್ಯಾರ್ಥ ಕೌಶಲ್ಯ ವರ್ಣಿಸಲಳವೆ ॥ ೧೯ ॥

ಮಠದ ಆಡಳಿತದ ವಿಜೃಂಭಣಾದಲ್ಲಿ ।
ನಾಟವಿಲ್ಲದೆ ಈ ವೈರಾಗ್ಯ ನಿಧಿಯು ॥
ನಾಡಿನಲಿ ಇರುವಂಥ ತೀರ್ಥ ಕ್ಷೇತ್ರಾಟನ ।
ಮಾಡಲು ನೆನೆದರು ಹರಿಯ ಸೇವಿಸಲು ॥ ೨೦ ॥

ವೇದನಿಧಿತೀರ್ಥರಿಗೆ ಆಶ್ರಮವ ಕೊಟ್ಟು ।
ಪೋದರು ಉತ್ತರ ದೇಶಗಳ ಕುರಿತು ॥
ಯದುಪತಿ ರಘುಪತಿ ಅವತಾರ ಸ್ಥಳಗಳಲಿ ।
ರತಿ ಪ್ರಚುರವಾಯಿತು ಸಂಸ್ಕಾರ ಬಲದಿ ॥ ೨೧ ॥

ಮಾರ್ಗದಲು ಕಾಶೀಲೂ ಅದ್ವೈತ ಪಂಡಿತರು ।
ರಂಗೋಜಿ ಭಟ್ಟಾದಿ ಸರ್ವರನು ಗೆದ್ದು ॥
ನಿಗಮಾಂತ ಸತ್ತತ್ವ ಮಧ್ವ ಸಿದ್ಧಾಂತದ ।
ಜಗಜಗಿಪ ಧ್ವಜವನ್ನು ಎತ್ತಿ ತೋರಿದರು ॥ ೨೨ ॥

ಕಾಶೀಲಿ ಪರಪಕ್ಷ ಸ್ವ ಪಕ್ಷ ಜನರಿಂದ ।
ಅಸದೃಶ ಮರ್ಯಾದೆ ಪೂಜೆಗಳ ಕೊಂಡು ॥
ವಾಸಮಾಡಿ ಅಲ್ಲಿ ಕೆಲಸ ಕಾಲದ ಮೇಲೆ ।
ವಿಷ್ಣುಪಾದಕ್ಷೇತ್ರ ಗಯಾವನ್ನು ಸೇರಿದರು ॥ ೨೩ ॥

ಗಯಾವಾಡರು ಅಹಂಮಮಕಾರಕೊಳಗಾಗಿ ।
ಗಯಾ ಕ್ಷೇತ್ರಯಾತ್ರಿಕರಿಗೆ ಕಷ್ಟಕೊಡಲು ॥
ದಯದಿ ವಿದ್ಯಾಧೀಶರು ಮಠದಿ ಯಾತ್ರಿಕರ್ಗೆ ।
ಗಯಾ ಅನುಷ್ಠಾನ ಫಲ ಒದಗಿಸಿದರು ॥ ೨೪ ॥

ಗಯಾಕ್ಷೇತ್ರದಲ್ಲಿಯೇ ಮನೆಯೊಂದನ ಮಾಡಿ ।
ನಿತ್ಯಪೂಜಾನುಷ್ಠಾನಗಳ ಆಚರಿಸಿ ॥

ಗಯಾ ಕ್ಷೇತ್ರದಲ್ಲಿ ರಾಮ ಗಯಾ ಶಮ್ಮ ಮಠವೆಂದು ।
ಗಯಾ ಯಾತ್ರಿಕರುಗಳಿಗೆ ಒದಗಿಸಿದರು ದಯದಿ ॥ ೨೫ ॥

ಒಂದಾನೊಂದು ದಿನ ವಿದ್ಯಾಧೀಶರು ।
ಬಂದ ಜನರಿಗೆ ತೀರ್ಥ ಕೊಡುವ ಸಮಯದಲಿ ॥
ಬಿಂದು ಶಂಖೋದಕ ಯದೃಚ್ಛಯಾ ಹಾರಿ ।
ನಿಂದಿದ್ದ ಒಣ ಮೋಟಿಮರದ ಮೇಲೆ ಬಿತ್ತು ॥ ೨೬ ॥

ಶಂಖತೀರ್ಥವು ಬಿದ್ದ ಆ ಕ್ಷಣದಲ್ಲೇವೇ ।
ಶುಷ್ಕ ಆ ಬಹು ಹಳೆ ಮೋಟಿಮರವು ॥
ಚಿಗಿದು ಎಲೆಗಳು ತೋರಿದವು ಜನರು ಕಂಡು ।
ಚಕಿತರಾದರು ಆಶ್ಚರ್ಯದಲಿ ಮುಳುಗಿ ॥ ೨೭ ॥

ನೇರವಾಗಿ ಕಂಡು ಈ ಅದ್ಭುತ ಚರ್ಯ ।
ಅರಿತು ವಿದ್ಯಾಧೀಶರ ಪ್ರಭಾವವನ್ನು ॥
ನಮ್ರ ಭಾವದಿ ಗಯಾವಾಡರು ಕ್ಷಮೆ ಬೇಡಿ ।
ಕೋರಿದರು ಶಿಷ್ಯತ್ವ ಕರುಣಿಸು ಎಂದು ॥ ೨೮ ॥

ಧೀರ ವೈರಾಗ್ಯ ನಿಧಿ ವಿಜ್ಞಾನಯೋಗಿಗಳು ।
ಹರಿ ಒಲುಮೆ ಪೂರ್ಣರು ವಿದ್ಯಾಧೀಶರು ॥
ಶರಣಾದ ಗಯಾವಾಡರಿಗೆ ಮುದ್ರೆ ಕೊಟ್ಟು ।
ಸೇರಿಸಿ ಕೊಂಡರು ಶಿಷ್ಯ ಜನ ಮಾಡಿ ॥ ೨೯ ॥

ಗಯಾವಾಡರು ಮಾತ್ರವಲ್ಲದೇ ಇನ್ನೂ ।
ಈ ಯತಿವರ್ಯರು ಹೋದ ಕಡೆಯಲ್ಲಿ ॥
ವಿನಯದಿ ಬೇಡಿದ ಮಿಶ್ರ ಮಿಥಿಲಾದಿಗಳ ।
ದಯದಿ ಸ್ವೀಕರಿಸಿದರು ಶಿಷ್ಯತ್ವ ಇತ್ತು ॥ ೩೦ ॥

ಗುರುಸಾರ್ವಭೌಮರು ವಿದ್ಯಾಧೀಶರು ।
ಧರೆಯಲುನ್ನತ ಬದರಿ ಕ್ಷೇತ್ರಕ್ಕೆ ಪೋಗಿ ॥
ನರನಾರಾಯಣ ವ್ಯಾಸನಿಗೆ ಸನ್ನಮಿಸಿ ।
ಅರ್ಪಿಸಿದರು ತಾನು ರಚಿಸಿದ ಗ್ರಂಥಗಳ ॥ ೩೧ ॥

ತಿಥಿತ್ರಯ ನಿರ್ಣಯವು ವಾಕ್ಯಾರ್ಥಚಂದ್ರಿಕಾ ।
ಮೊದಲೈದು ಅಧಿಕರಣ ಸುಧಾ ಟಿಪ್ಪಣಿಯು ॥
ದ್ವಿತ್ವ ಓಂಕಾರವಾದಾರ್ಥವು ಕೇನೋಪ ।
ನಿಷತ್ತೆಂಬುವ ತಲವಕಾರದ ಖಂಡಾರ್ಥ ॥ ೩೨ ॥

ಬಾದರಾಯಣ ಮಧ್ವ ಪ್ರೀತಿ ಸೇವಾರ್ಥವು ।
ಅಧಿಕಾರಿಗಳಿಗೆ ಸತ್ತತ್ವ ವೇದಾರ್ಥ ॥
ವಿದ್ಯಾಧೀಶ ಧೀಮಂತರ ಗ್ರಂಥಗಳು ।
ಶ್ರೀದನು ಒಪ್ಪಿದ ಅನುಗ್ರಹ ಮಾಡಿದನು ॥ ೩೩ ॥

ಬದರಿಯಿಂದ ತಿರುಗಿ ಯಮುನೆ ಉತ್ತರ ತೀರ ।
ವೈದರ್ಭಿ ಪತಿ ಬಾಲ ಲೀಲೆಯಗೈದ ॥
ಉತ್ತಮ ಕ್ಷೇತ್ರಕ್ಕೆ ಪೋಗಿ ಬಾಲ್ಹಿಕ ದೇಶ ।
ಪ್ರಾಂತ್ಯ ಸಮೀಪಕ್ಕೆ ಬಂದು ಸೇರಿದರು ॥ ೩೪ ॥

ಏಕಚಕ್ರಪುರ ಇದು ಪವಿತ್ರ ಯಮುನಾತೀರ ।
ಏಕಾಗ್ರ ಚಿತ್ತದಲಿ ಶ್ರೀಶನ ಧ್ಯಾನಿಸಲು ॥
ತಕ್ಕ ಸ್ಥಳ ಇದು ಎಂದು ಇಲ್ಲಿಯೇ ಕುಳಿತರು ।
ಶ್ರೀಕರ ನಾರಾಯಣನ ಪಾದ ಭಜಿಸುತ್ತಾ ॥ ೩೫ ॥

ಚತುರ್ದಶಿ ಶ್ರೀಹರಿಯ ಸೇವಿಸಿ ।
ಹದಿನೈದು ನೂರೈವತ್ಮೂರು ಶಕ ಶಾಲಿ ॥
ವಿದ್ಯಾಧೀಶರು ಸಿತ ಪೌಷ್ಯ ಪ್ರಜಾಪತಿಯಲಿ ।
ಯದುಪತಿ ಶ್ರೀಧಾಮನ ಪುರವ ಐದಿದರು ॥ ೩೬ ॥

ಪದುಮಭವಸಿತನು ಶ್ರೀಪ್ರಸನ್ನಶ್ರೀನಿವಾಸ ।
ಯದುಪತಿ ನೃಹರಿ ರಾಮ ವ್ಯಾಸ ಪ್ರಿಯಕರರು ॥
ವಿದ್ಯಾಧೀಶರ ಪಾದಪದ್ಮದಲಿ ಶರಣಾದೆ ।
ಬಂದು ಕಾಯ್ವರು ಎಮ್ಮ ನೆನೆದ ಮಾತ್ರದಲಿ ॥ ೩೭ ॥

॥ ಇತಿ ಶ್ರೀಪ್ರಸನ್ನಶ್ರೀನಿವಾಸದಾಸ ವಿರಚಿತ
ಶ್ರೀಪ್ರಸನ್ನವಿದ್ಯಾಧೀಶತೀರ್ಥವಿಜಯವು ಸಂಪೂರ್ಣಂ ॥

# श्रीविद्याधीशतीर्थाः



यद्विद्याधीशगुरोः शुश्रूषान्या न रोचते तस्मात् ।
अस्त्वेषा भक्तियुक्ता श्रीविद्याधीशपादयोः सेवा ॥

ಶ್ರೀ ವೇದವ್ಯಾಸಾಯ ನಮಃ

# ಅಣುವಿದ್ಯಾಧೀಶವಿಜಯಃ

**ಶ್ರೀಭೂಮಿದುರ್ಗಾಗ್ರಿಮಭಾಗಭಾಸ್ವ-**
**ದ್ಧಾಮಾ ರಮಾಲಾಲಿತಪಾದಪದ್ಮಃ ।**
**ಮುಕ್ತಾವಿಮುಕ್ತೇರಣಸರ್ಮಕರ್ಮಾ**
**ನಿರ್ಮಾತು ಮೇ ಶರ್ಮ ಚಿರಂ ಮುಕುಂದಃ ॥ ೧ ॥**

ಶ್ರೀ, ಭೂ ಮತ್ತು ದುರ್ಗಾಪ್ರದೇಶಗಳಾದ ವೈಕುಂಠಸದನಗಳಲ್ಲಿ ವಾಸವಾಗಿರುವ, ರಮಾದೇವಿಯಿಂದ ಸೇವಿತವಾದ ಚರಣಕಮಲಗಳಿರುವ, ಮುಕ್ತರೂ ಅಮುಕ್ತರೂ ಆದ ಸಕಲಜೀವರಿಗೆ ಪ್ರೇರಕನಾದ ಮುಕುಂದನು ನನಗೆ ಶಾಶ್ವತವಾದ ಸುಖವನ್ನು ದಯಪಾಲಿಸಲಿ.

**ಸದ್ದ್ವೈತರಾದ್ಧಾಂತಮಯೂಖಧಾರಾ-**
**ನಿರ್ವಾಪಿತಾದ್ವೈತಮತಾಂಧಕಾರಃ ।**
**ವಿಕಾಸಿತಾರ್ಹದ್ಧೃದಯಾರವಿಂದೋ**
**ದದ್ಯಾತ್ ಪ್ರಬೋಧಂ ಮಮ ಮಧ್ವಭಾನುಃ ॥ ೨ ॥**

ದ್ವೈತಸಿದ್ಧಾಂತಗಳ ಕಿರಣಗಳ ಧಾರೆಯಿಂದ ಅದ್ವೈತಮತವೆಂಬ ಅಂಧಕಾರವನ್ನು ನಿರ್ಮೂಲಮಾಡಿದ, ಸಜ್ಜನರ ಹೃದಯಕಮಲಗಳನ್ನು ಅರಳಿಸಿದ ಮಧ್ವಾಚಾರ್ಯರೆಂಬ ಸೂರ್ಯನು ನನಗೆ ಜ್ಞಾನವನ್ನು ದಯಪಾಲಿಸಲಿ.

**ಉತ್ತಂಸಭೂಷಾಮಣಿರುತ್ತಮಾನಾಂ**
**ಜಾಗರ್ತು ಚಿತ್ತೇ ಜಯತೀರ್ಥಯೋಗೀ ।**
**ಅನನ್ಯಲಭ್ಯಾಮಸುರಾರಿವದ್ ದ್ರಾಕ್**
**ಸುಧಾಮದಾದ್ ಯಃ ಸುಮನೋಜನೇಭ್ಯಃ ॥ ೩ ॥**

ಪರಮಾತ್ಮನು ದೇವತೆಗಳಿಗೆ ಅಮೃತವನ್ನು ಕೊಟ್ಟಂತೆ ಸಜ್ಜನರಿಗೆ 'ನ್ಯಾಯಸುಧಾ' ಎಂಬ ಅಪೂರ್ವವಾದ ಗ್ರಂಥವನ್ನು ಒದಗಿಸಿಕೊಟ್ಟ

ಉತ್ತಮರಿಗೆ ಶಿರೋರತ್ನಪ್ರಾಯರಾದ (ಸ್ವ-ತಾರತಮ್ಯಾನುಸಾರವಾಗಿ) ಶ್ರೀ ಜಯತೀರ್ಥಯೋಗಿಗಳು ಯಾವಾಗಲೂ ನನ್ನ ಮನಸ್ಸಿನಲ್ಲಿ ಜಾಗೃತರಾಗಿರಲಿ.

**ಕದಾಪಿ ನಾಪೈತು ಗುರುಃ ಸ ವಿದ್ಯಾ-**
**ಧೀಶಾಭಿಧಾನಃ ಸ್ಮೃತಿಮಾರ್ಗತೋ ಮೇ ।**
**ನಿಗೃಹ್ಯ ಯೋಽಭ್ಯಂತರವೈರಿವರ್ಗಂ**
**ವೈರಾಗ್ಯಸಾಮ್ರಾಜ್ಯಮುರೀಚಕಾರ ॥ ೪ ॥**

ಕಾಮಕ್ರೋಧಾದಿ ಅಂತಶ್ಶತ್ರುಗಳನ್ನು ನಿಗ್ರಹಿಸಿ ವೈರಾಗ್ಯಸಾಮ್ರಾಜ್ಯವನ್ನು ಅಂಗೀಕರಿಸಿದ ಶ್ರೀವಿದ್ಯಾಧೀಶತೀರ್ಥಯತಿಗಳು ಯಾವಾಗಲೂ ನನ್ನ ಸ್ಮೃತಿಪಥವನ್ನು ಅಗಲದೆ ಇರಲಿ.

**ಅಸ್ತಿ ಕ್ಷಿತೇಃ ಭೂಷಣಮಬ್ಧಿಕನ್ಯಾ-**
**ವಿಭೂಷಿತಂ ಭೂಷಿತರಾಜಮಾರ್ಗಮ್ ।**
**ಸಂಭಾವಿತಂ ಸಾಧುಜನೇನ ಪುಣ್ಯ-**
**ಸ್ತಂಭಾಭಿಧಾನಂ ನಗರಂ ಗರೀಯಃ ॥ ೫ ॥**

ಭೂಲೋಕಕ್ಕೆಲ್ಲ ಭೂಷಣಪ್ರಾಯವಾದ, ಲಕ್ಷ್ಮೀಪತಿಯು (ತ್ರಿವಿಕ್ರಮದೇವರು) ವಾಸವಾಗಿರುವ, ಸುಂದರವಾದ ರಾಜಮಾರ್ಗಗಳಿರುವ, ಸಜ್ಜನರ ಆವಾಸವಾಗಿರುವ 'ಪುಣ್ಯಸ್ತಂಭಪುರ' ಎಂಬ ಶ್ರೇಷ್ಠವಾದ ನಗರವಿದೆ (ಇದು ಈಗ ಮಹಾರಾಷ್ಟ್ರದ ಅಹಮ್ಮದ ನಗರ ಜಿಲ್ಲೆಯಲ್ಲಿ ಪುಣತಾಂಬಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಊರಿಗೆ 'ಅಂಬಾಪುರೀ' ಎಂದೂ ಹೆಸರು ಇದ್ದಂತೆ ಕಾಣುತ್ತದೆ.)

**ಗ್ರಾಮಂ ತಮಧ್ಯಾಸ್ತ ಗದಾಗ್ರಜಾಂಘ್ರಿ-**
**ಸರೋರುಹಧ್ಯಾನಸಮಾಧಿಧನ್ಯಃ ।**
**ವಾಸಿಷ್ಠಗೋತ್ರಾಂಬುಧಿಸೀತಧಾಮಾ**
**ತ್ರಿವಿಕ್ರಮಾಚಾರ್ಯ ಇತೀಡ್ಯನಾಮಾ ॥ ೬ ॥**

ಈ ನಗರದಲ್ಲಿ ವಸಿಷ್ಠಗೋತ್ರದವರಾದ ಶ್ರೀಕೃಷ್ಣನ ಚರಣಕಮಲಗಳ ಸೇವೆಯಲ್ಲಿ ನಿರತರಾದ ತ್ರಿವಿಕ್ರಮಾಚಾರ್ಯರು ಎಂಬವರಿದ್ದರು.

ತಸ್ಯಾಗ್ರಜಾತಿಪ್ರವರಸ್ಯ ತಾದೃಕ್
ಪುಣ್ಯೈೀನ ಗುಣ್ಯೋಽಜನಿ ಸೂನುರೇಕಃ ।
ತಂ ಪ್ರಾಹುರಾನಂದಿತಸಾಧುವೃಂದ-
ಮಾಚಾರ್ಯಮಾನಂದಪದಾದ್ಯಮುರ್ವ್ಯಾಮ್ ॥ ೭ ॥

ವಿಪ್ರಶ್ರೇಷ್ಠರಾದ ಈ ತ್ರಿವಿಕ್ರಮಾಚಾರ್ಯರಿಗೆ ಅವರ ಅಪರಿಮಿತವಾದ ಪುಣ್ಯದ ಬಲದಿಂದ ಸಜ್ಜನರಿಗೆಲ್ಲ ಆನಂದಕೊಡುವ ಸದ್ಗುಣಿಗಳಾದ ಆನಂದಾ-ಚಾರ್ಯರೆಂಬ ಮಕ್ಕಳಾದರು. (ಇವರೇ ಮುಂದೆ ಪ್ರಸಿದ್ಧರಾದ ಪಾಂಡುರಂಗೀ ಆನಂದಭಟ್ಟಾರಕರು. ಶ್ರೀ ವಾದಿರಾಜಸ್ವಾಮಿಗಳವರ ಸಮಕಾಲೀನರು. ನ್ಯಾಯಾಮೃತಕಂಟಕೋದ್ಧಾರ ಎಂಬ ಗ್ರಂಥವನ್ನು ಬರೆದವರು.)

ನಿಸರ್ಗಗೂಢಾನ್ ಜಯತೀರ್ಥಯೋಗಿ-
ಪ್ರಣೀತಮಧ್ವಾಗಮಪಂಚಿಕಾರ್ಥಾನ್ ।
ಆಶ್ಚರ್ಯಮಕ್ಲಿಷ್ಟಪದಾಭಿರುರ್ವ್ಯಾಂ
ಯಸ್ಟಿಪ್ಪಣೀಭಿಃ ಪ್ರಕಟೀಚಕಾರ ॥ ೮ ॥

ಈ ಆನಂದಾಚಾರ್ಯರು ತಮ್ಮ ಸುಲಭವಾದ ಟಿಪ್ಪಣಿಗಳಿಂದ ಸ್ವಭಾವತಃ ಅಗಾಧವಾದ ಅರ್ಥವಿರುವ, ಶ್ರೀಜಯತೀರ್ಥರು ರಚಿಸಿರುವ, ಶ್ರೀಮಧ್ವಾಚಾರ್ಯರ ಗ್ರಂಥಗಳ ಟೀಕಾಗ್ರಂಥಗಳನ್ನು ವಿಶದಪಡಿಸಿದರು. (ಇದರಿಂದ ಇವರು ನ್ಯಾಯಾಮೃತಕಂಟಕೋದ್ಧಾರವಲ್ಲದೆ ಕೆಲವು ಟಿಪ್ಪಣಿ ಗ್ರಂಥಗಳನ್ನು ಬರೆದಿರುವರೆಂದು ತಿಳಿದುಬರುವದು. ಆದರೆ ಪ್ರಕೃತದಲ್ಲಿ ಅವು ಉಪಲಬ್ಧವಿಲ್ಲ. ಹೆಚ್ಚಿನ ಅನ್ವೇಷಣೆ ಅಗತ್ಯವಾಗಿದೆ)

ಅರುಂಧತೀ ಶಕ್ತಿಪಿತುರ್ಯಥೈವ
ಯಥಾತ್ರಿನಾಮ್ನೋ ಯಮಿನೋಽನಸೂಯಾ ।
ತಸ್ಯಾಭವತ್ ತದ್ವದಪಂಕಶೀಲಾ
ಗಂಗೇತಿ ಭಾರ್ಯಾ ಗುಣವಾರಿರಾಶೇಃ ॥ ೯ ॥

ವಸಿಷ್ಠರಿಗೆ ಅರುಂಧತಿಯಂತೆಯೂ ಅತ್ರಿಮಹರ್ಷಿಗಳಿಗೆ ಅನಸೂಯೆಯಂತೆಯೂ ಸದ್ಗುಣಸಾಗರರಾದ ಆನಂದಾಚಾರ್ಯರಿಗೆ 'ಗಂಗಾ' ಎಂಬ ಹೆಸರಿನ ಪರಮಸಾಧ್ವಿಯಾದ ಹೆಂಡತಿಯಿದ್ದಳು.

*

ಜಾಯಾಪತೀ ತೌ ಜಗದೇಕನೇತುಃ
ಪಾದಾರವಿಂದಾರ್ಚನಯಾ ಚ ಭಕ್ತ್ಯಾ ।
ಸತ್ಯಕ್ಷಮಾದಾನದಮಾರ್ಜವಾದ್ಯೈಃ
ಗುಣೈಃ ಅಭೂತಾಂ ಗುರುಣಾಪಿ ನಂದ್ಯೌ ॥ ೧೦ ॥

ಆನಂದಾಚಾರ್ಯರು ಮತ್ತು ಗಂಗಾ ಈ ದಂಪತಿಗಳು ಜಗತ್ತಿಗೆಲ್ಲ ನಿಯಾಮಕನಾದ ಭಗವಂತನ ಪಾದಸೇವನೆಯನ್ನು ಭಕ್ತಿಯಿಂದ ಮಾಡುವದ ರಿಂದಲೂ ಸತ್ಯ ಕ್ಷಮಾ ದಾನ ಇಂದ್ರಿಯನಿಗ್ರಹ ನಿಷ್ಕಪಟವೃತ್ತಿ ಈ ಗುಣ ಗಳಿಂದಲೂ ಹಿರಿಯರೂ ಅಭಿನಂದಿಸುವ ರೀತಿಯಲ್ಲಿ ಇದ್ದರು.

ಯತ್ ಶ್ರೀನಿವಾಸಸ್ಯ ಕೃಪಾಮಹಿಮ್ನಾ
ಜಾತೋರ್ಭಕೋsಸೌ ದಿವಸೇ ಶುಭೇಂಯೌ ।
ಚಕ್ರೇ ವಿಧಿಜ್ಞೇನ ತತಶ್ಚ ಪಿತ್ರಾ
ಸ ಶ್ರೀನಿವಾಸೋಚಿತನಾಮಶಾಲೀ ॥ ೧೧ ॥

(ಈ ಆನಂದಾಚಾರ್ಯ ಮತ್ತು ಗಂಗಾ ದಂಪತಿಗಳು ಭಗವಂತನ ಅನುಗ್ರಹದಿಂದ ಮೊದಲನೆಯ ಮಗನನ್ನು ಪಡೆದರು) ಈ ಮಗುವು ಶ್ರೀನಿವಾಸ ದೇವರ ಕೃಪಾಮಹಿಮೆಯಿಂದ ಹುಟ್ಟಿದ್ದರಿಂದ ಮತ್ತು ಶ್ರೀಕರವಾದ ಶುಭ ದಿನದಲ್ಲಿ ಹುಟ್ಟಿದ್ದರಿಂದ ಧರ್ಮಶಾಸ್ತ್ರಜ್ಞರಾದ ತಂದೆ ಆನಂದಾಚಾರ್ಯರು ಇವನಿಗೆ 'ಶ್ರೀನಿವಾಸ' ಎಂಬ ಉಚಿತವಾದ ಹೆಸರನ್ನು ಇಟ್ಟರು.

ತದದ್ಯ ವಿದ್ಯಾವಿನಯಾದಿಹೃದ್ಯಂ
ಸೂನ್ವಂತರಂ ಸುಭ್ರು ಯಥಾ ಭವೇತ್ ನಃ ।
ತಥಾ ಭವಾರ್ಣೋನಿಧಿಕರ್ಣಧಾರಂ
ಶ್ರೀನಾರಸಿಂಹಂ ಶರಣಂ ವ್ರಜಾಮಃ ॥ ೧೨ ॥

(ಶ್ರೀನಿವಾಸನೆಂಬ ಮೊದಲನೆಯ ಮಗನು ಬಾಲ್ಯವನ್ನು ಕಳೆದು ದೊಡ್ಡ ವನಾದಂತೆ ಶ್ರೀ ಆನಂದಾಚಾರ್ಯರಿಗೆ ಇನ್ನೊಬ್ಬ ಮಗನನ್ನು ಪಡೆಯಬೇಕೆಂಬ ಅಪೇಕ್ಷೆಯುಂಟಾಯಿತು. ಒಂದು ಕಣ್ಣು ಕಣ್ಣಲ್ಲ, ಒಬ್ಬ ಮಗ ಮಗನಲ್ಲ ಎಂಬ ಮಾತಿನ ಅರಿವಾಯಿತು. ಆಗ ತಮ್ಮ ಧರ್ಮಪತ್ನಿಯನ್ನು ಕುರಿತು ಹೀಗೆ ಹೇಳುತ್ತಾರೆ) ಪ್ರಿಯಳೇ! ವಿದ್ಯೆ ಮತ್ತು ವಿನಯಗಳಿಂದ ಕೂಡಿದ

ಇನ್ನೊಬ್ಬ ಮಗನನ್ನು ಕೊಡು ಎಂದು ಸಂಸಾರ ಸಾಗರ ತಾರಕನಾದ ಶ್ರೀ ನರಸಿಂಹದೇವರಿಗೆ ಶರಣಾಗತರಾಗೋಣ.

ಪುಂಖಾನುಪುಂಖಪ್ರಸರತ್ಕಟಾಕ್ಷ-
ಪ್ರೇಂಖೋಲ್ಲಿತಾಪಾರಕೃಪಾರಸೌಘಃ ।
ಆಸ್ಯೇ ಮೃಗೇಂದ್ರಾಕೃತಿರಾವಿರಾಸೀತ್
ತದಗ್ರತಃ ಕೋಪಿ ಪುಮಾನುದಗ್ರಃ ॥ ೧೩ ॥

ಹೀಗೆ ತಮ್ಮ ಧರ್ಮಪತ್ನಿಯೊಡನೆ ಮಾತನಾಡಿ ಮಲಗಿದ ರಾತ್ರಿಯಲ್ಲಿಯೇ ಶ್ರೀ ಆನಂದಾಚಾರ್ಯರ ಸ್ವಪ್ನದಲ್ಲಿ ತನ್ನ ಕಟಾಕ್ಷಗಳಿಂದ ಅವಿಚ್ಛಿವಾಗಿ ಕರುಣಾರಸವನ್ನು ಹೊರಸೂಸುತ್ತ ಶ್ರೀ ನರಸಿಂಹದೇವರು ಆವಿರ್ಭೂತರಾದರು.

ಪ್ರಸಾದತೋ ಮೇ ಪರಮೇಷ್ಠಿಪೂರ್ವೈಃ
ಅಪಿ ಅರ್ಥನೀಯಾದತಿಮಾತ್ರತೇಜಾಃ ।
ಭವಿಷ್ಯತಿ ದ್ರಾಕ್ ಭಜನೀಯಮಾರ್ಯೈಃ
ಆನಂದ ತೇ ನಂದನರತ್ನಮೇಕಮ್ ॥ ೧೪ ॥

ಬ್ರಹ್ಮಾದಿಗಳೂ ಅಪೇಕ್ಷಿಸುವಂಥ ನನ್ನ ಅನುಗ್ರಹದಿಂದ ತೇಜಸ್ವಿಯೂ ಸಜ್ಜನರಿಂದ ಪೂಜ್ಯನೂ ಆದ ಪುತ್ರರತ್ನನು ನಿನಗೆ ದೊರೆಯುವನು (ಎಂದು ಶ್ರೀ ನರಸಿಂಹದೇವರು ಆನಂದಾಚಾರ್ಯರನ್ನು ಸ್ವಪ್ನದಲ್ಲಿ ಅನುಗ್ರಹಿಸಿದರು).*

ಶುಭದಗ್ರಹತಾರಯೋಗರಮ್ಯೇ
ದಿವಸೇಽಥ ದ್ವಿಜವರ್ಯವಲ್ಲಭಾ ಸಾ ।
ಸುಷುವೇ ತನಯಂ ಸುಧಾಮಯೂಖಂ
ದಿಗಿವಾಮರ್ತ್ಯಪತೇಃ ಸತಾಂ ಹಿತಾಯ ॥ ೧೫ ॥

ವಿಪ್ರಶ್ರೇಷ್ಠರಾದ ಆನಂದಾಚಾರ್ಯರ ಪತ್ನಿ ಗಂಗಾದೇವಿಯು ಶುಭಕರವಾದ ಗ್ರಹನಕ್ಷತ್ರಯೋಗಗಳಿರುವ ಒಂದು ಸುದಿನದಲ್ಲಿ ಇಂದ್ರದಿಕ್ಕು ಚಂದ್ರನಿಗೆ ಜನನವೀಯುವಂತೆ ಸಜ್ಜನರ ಹಿತಕ್ಕಾಗಿ ಪುತ್ರರತ್ನನಿಗೆ ಜನನ

* ೧ ರಿಂದ ೧೮ ರ ವರೆಗಿನ ಶ್ಲೋಕಗಳು ಮೊದಲನೆಯ ಸರ್ಗದಿಂದ ಆಯ್ದುಕೊಳ್ಳಲ್ಪಟ್ಟಿವೆ.

ವಿತ್ತಳು. (ಶ್ರೀ ನರಸಿಂಹದೇವರ ಅನುಗ್ರಹದಿಂದ ಎರಡನೆಯ ಮಗನಿಗೆ ಜನ್ಮವಿತ್ತಳು)

**ನೃಹರೇಃ ಅನುಕಂಪಯೈವ ಲಬ್ಧಂ**
**ಜನತಾಮಾನ್ಯಮಸದ್ಘಟಾಮೃಗೇಂದ್ರಮ್ ।**
**ಸ ವಿಚಿಂತ್ಯ ಕೃತೀ ತತೋಽರ್ಥವತ್ಯಾ**
**ವಿದಧೇ ನಂದನಮಾಖ್ಯಯಾ ನೃಸಿಂಹಮ್ ॥ ೧೬ ॥**

ಶ್ರೀ ನೃಸಿಂಹದೇವರ ಅನುಗ್ರಹದಿಂದ ಜನಿಸಿದ್ದರಿಂದ, ಸಕಲ ಸಜ್ಜನರಿಗೆ ಮಾನ್ಯರಾದ್ದರಿಂದ, ಮತ್ತು ದುರ್ಜನರೆಂಬ ಮತ್ತಗಜಗಳಿಗೆ ಸಿಂಹದಂತೆ ಇರುವದರಿಂದ ತಮ್ಮ ಮಗನಿಗೆ ಆನಂದಾಚಾರ್ಯರು ನರಸಿಂಹನೆಂಬ ಅನ್ವರ್ಥಕ ನಾಮವನ್ನು ಇಟ್ಟರು.

**ಹರಿರಿತ್ಯುಪಲಂ ನಿಧಾಯ ಪೀಠೇ**
**ತುಲಸೀಪತ್ರಪಯಃಕೃತೋಪಚಾರಃ ।**
**ನತಿಪೂರ್ವಮಸೌ ಮುದಾ ತದಗ್ರೇ**
**ಸವಯೋಭಿಃ ಸಹ ತಾಂಡವಾನಿ ತೇನೇ ॥ ೧೭ ॥**

ಬಾಲಕ ನರಸಿಂಹನು ಕಲ್ಲಿನ ತುಂಡನ್ನು 'ಹರಿಯು' ಎಂದು ಪೀಠದ ಮೇಲಿಟ್ಟು, ತುಲಸೀಪತ್ರಗಳಿಂದ ಪೂಜಿಸಿ, ನಮಸ್ಕರಿಸಿ, ಸಮವಯಸ್ಕರಾದ ಬಾಲಕರೊಡನೆ ಅದರೆದುರು ನರ್ತಿಸುತ್ತಿದ್ದನು.

**ಗುರುರಸ್ಮ್ಯಹಮೇವ ವೋಽಖಿಲಾನಾ-**
**ಮಿತಿ ಜಲ್ಪನ್ ಸವಯಃಕುಮಾರವರ್ಗಮ್ ।**
**ಉಪವೇಶ್ಯ ಪುರಃ ಕಿಮಪ್ಯುದಾರಂ**
**ಕಲಭಾಷೀ ಕಲಯಾಂಚಕಾರ ಶಾಸ್ತ್ರಮ್ ॥ ೧೮ ॥**

ಸಮವಯಸ್ಸಿನ ಬಾಲಕರನ್ನು ಎದುರಿಗೆ ಕೂಡಿಸಿಕೊಂಡು ನಾನು ನಿಮ್ಮ ಗುರು ಎಂದು ಹೇಳಿ ತೊದಲು ನುಡಿಯಿಂದ ಅವರಿಗೆ ಶಾಸ್ತ್ರವನ್ನು ಕಲಿಸುತ್ತಿದ್ದನು.*

---

* ೧೫ ರಿಂದ ೧೮ರ ವರೆಗಿನ ಶ್ಲೋಕಗಳು ಎರಡನೆಯ ಸರ್ಗದಿಂದ ಆಯ್ದು ಕೊಳ್ಳಲ್ಪಟ್ಟವೆ.

ತತೋ ದಶಮ್ಯಾಮಹರೀಶವಾಸರೇ
ಸ ರೇವತೀಶಾದ್ಯಖಿಲಗ್ರಹಾನಘೇ ।
ಶುಭೇ ಮುಹೂರ್ತೇ ಸುಧಿಯಾಂ ಗಣೈರ್ವೃತೋ
ಧೃತೋಪವೀತಂ ವಿಧಿವದ್ ವ್ಯಧಾತ್ ಸುತಮ್ ॥ ೧೯ ॥

ಅನಂತರ ನವಗ್ರಹಗಳೂ ಶುಭವಾಗಿರುವ ಭಾನುವಾರ ದಶಮೀ ತಿಥಿಯ ದಿನ ಆನಂದಾಚಾರ್ಯರು ದ್ವಿಜೋತ್ತಮರಿಂದ ಕೂಡಿಕೊಂಡು ಶಾಸ್ತ್ರೋಕ್ತವಾಗಿ ಮಗ ನರಸಿಂಹನಿಗೆ ಉಪನಯನವನ್ನು ಮಾಡಿದರು.

ಪಪಾಠ ಸಪ್ರಶ್ರಯಮಂತಿಕೇ ಪಿತುಃ
ಸ ಮಧ್ವಶಾಸ್ತ್ರಾದ್ಯಖಿಲಾಗಮಾನಪಿ ।
ತದೀಯದೈನಂದಿನಹೋಮಕಂದಲ.
ತ್ಕೃಶಾನುಪಕ್ವೋದನಕ್ಲೃಪ್ತಭೋಜನಃ ॥ ೨೦ ॥

ತಂದೆ ಆನಂದಾಚಾರ್ಯರು ಪ್ರಾತಃಸವನಕ್ಕಾಗಿ ಪ್ರಜ್ವಲಿಸಿದ ಹೋಮಾಗ್ನಿಯಲ್ಲಿ ಪಕ್ವವಾದ ಪವಿತ್ರವಾದ ಅನ್ನವನ್ನು ಭುಂಜಿಸಿ ಅವರಲ್ಲಿಯೇ ಮಧ್ವಶಾಸ್ತ್ರವನ್ನೂ ಇನ್ನಿತರ ಶಾಸ್ತ್ರಗಳನ್ನೂ ನರಸಿಂಹನು ಅಧ್ಯಯನ ಮಾಡಿದನು. (ಆನಂದಾಚಾರ್ಯರು ವೈತಾಸಿಕಾಗ್ನಿಯಲ್ಲಿ ಚರುವನ್ನು ಮಾಡಿ ಉಣ್ಣಿಸಿ ಮಗನಿಗೆ ಪಾಠ ಹೇಳಿಕೊಡುತ್ತಿದ್ದರೆಂದ ಆಖ್ಯಾಯಿಕೆಯಿದೆ)

ತದಾ ಮಹಾಭಾಷ್ಯವಿಶಾರದಾವುಭಾ-
ವುದಾರವಾಚಾವುರುಗರ್ವಧೂರ್ವಹೌ ।
ಸದೋಂತರಾಲೇ ಶಿವವಿಶ್ವಪಂಡಿತೌ
ವಿತೇನತುಃ ವ್ಯಾಕರಣೇಷು ನೈಪುಣೀಮ್ ॥ ೨೧ ॥

ಒಂದು ದಿನ ಪತಂಜಲಿಯ ವ್ಯಾಕರಣಭಾಷ್ಯದಲ್ಲಿ ವಿಶಾರದರಾದ ತುಂಬ ವಾಚಾಳಿಗಳಾದ ಬಹಳ ಗರ್ವಿಷ್ಠರಾದ ಶಿವಪಂಡಿತ ಮತ್ತು ವಿಶ್ವಪಂಡಿತ ಎಂಬ ಇಬ್ಬರು ಪಂಡಿತರು ಪಂಡಿತರ ಸಭೆಯಲ್ಲಿ ತಮ್ಮ ವ್ಯಾಕರಣ ಪಾಂಡಿತ್ಯವನ್ನು ಪ್ರದರ್ಶಿಸಿದರು.

ದೃಶಾ ಸ್ವತಾತೇನ ಕೃತಪ್ರಚೋದನಃ
ವಿಶಾರದಸ್ತತ್ರ ವಿಹಸ್ಯ ಬಾಲಕಃ ।
ತದುಕ್ತಸೂತ್ರಾರ್ಥಮಶೇಷಮಪ್ಯಸೌ
ಅಖಂಡಯತ್ ಯುಕ್ತಿಮತೀಭಿರುಕ್ತಿಭಿಃ ॥ ೨೨ ॥

ಆಗ ಆ ಸಭೆಯಲ್ಲಿದ್ದ ನರಸಿಂಹನು, ತಂದೆ ಆನಂದಾಚಾರ್ಯರು ನೀನು ವಾಕ್ಯಾರ್ಥಮಾಡು ಎಂದು ಕಣ್ಣಿನಿಂದ ಸೂಚಿಸಲು, ತುಸು ಮುಗುಳುನಗೆ ನಕ್ಕು ಆ ಶಿವಪಂಡಿತ ಮತ್ತು ವಿಶ್ವಪಂಡಿತರು ಹೇಳಿದ ವ್ಯಾಕರಣದ ಸೂತ್ರಾರ್ಥವನ್ನು ಖಂಡಿಸಿದರು.

ಕೃತಾಭ್ಯಸೂಯಃ ತದಮುಷ್ಯ ಭಾಷಿತಂ
ನಿಶಮ್ಯ ಗೋಲಿಂಗ ಇತಿ ದ್ವಿಜೋಽಪರಃ ।
ರುಷಾಧಿಚಿಂತಾಮಣಿವಾದಚರ್ಚಿಕಾಂ
ತತಾನ ನೈಯ್ಯಾಯಿಕತಂತ್ರಮರ್ಮವಿತ್ ॥ ೨೩ ॥

ಬಾಲಕ ನರಸಿಂಹನ ಈ ವಾಕ್ಯಾರ್ಥಕೌಶಲ್ಯವನ್ನು ನೋಡಿ ಅಸೂಯೆಗೊಳಗಾದ ಗೋಲಿಂಗ ಎಂಬ ಇನ್ನೊಬ್ಬ ಪಂಡಿತನು ನ್ಯಾಯಶಾಸ್ತ್ರನಿಪುಣನಾದ್ದರಿಂದ ನ್ಯಾಯಶಾಸ್ತ್ರದ ಚಿಂತಾಮಣಿ ಎಂಬ ಗ್ರಂಥದಲ್ಲಿ ವಾಕ್ಯಾರ್ಥವನ್ನು ಆರಂಭಿಸಿದನು.

ಜಿತೇಷು ತೇಷು ತ್ರಿಷು ತಾನಭಟ್ಟ ಇ-
ತ್ಯುದೂಢನಾಮ್ನಾ ಸ ಪುನರ್ದ್ವಿಜನ್ಮನಾ ।
ಸಹಾತನೋತ್ ಶ್ರೌತಕಲಾಭಿಮಾನಿನಾ
ಪ್ರಸಂಗಮುದ್ದಾಮವಚೋವಿಜೃಂಭಣಃ ॥ ೨೪ ॥

ಶಿವಪಂಡಿತ ವಿಶ್ವಪಂಡಿತ ಮತ್ತು ಗೋಲಿಂಗ ಪಂಡಿತರು ಪರಾಜಿತರಾದ ಮೇಲೆ ಶ್ರೌತಪ್ರಯೋಗಗಳಲ್ಲಿ ತಾನು ದೊಡ್ಡ ಪಂಡಿತನೆಂದು ತಿಳಿದುಕೊಂಡಿದ್ದ ತಾನಭಟ್ಟನೆಂಬ ಪ್ರಸಿದ್ಧ ಪಂಡಿತನೊಡನೆ ಬಾಲಕ ನರಸಿಂಹನು ವಾಕ್ಯಾರ್ಥ ಮಾಡಿದನು.

ವಿತಾನಿತೇ ತತ್ರ ಚ ತಾನಭಟ್ಟಕೇ
ನತಾನನೇ ಸಭ್ಯಜನೇ ಸವಿಸ್ಮಯೇ ।
ಅನರ್ಘ್ಯಚೀರಾಂಬರಪಾರಿತೋಷಿಕಂ
ಗೃಹಸ್ಥತಃ ಪ್ರಾಪ ಸ ತಾತಪೂರ್ವಕಮ್ ॥ ೨೫ ॥

ತಾನಭಟ್ಟನು ಪರಾಜಿತನಾಗಿ ತಲೆತಗ್ಗಿಸಿದ ಮೇಲೆ ಈ ಬಾಲಕನ ಸಕಲ ಶಾಸ್ತ್ರಪಾಂಡಿತ್ಯವನ್ನು ನೋಡಿ ಸಭೆಯಲ್ಲಿದ್ದ ಪಂಡಿತರೆಲ್ಲ ಆಶ್ಚರ್ಯಚಕಿತರಾದರು. ಈ ಸಭೆಯನ್ನು ಏರ್ಪಡಿಸಿದ ಗೃಹಸ್ಥನಿಂದ ಶ್ರೀ ಆನಂದಾಚಾರ್ಯರೂ ಬಾಲಕ ನರಸಿಂಹನೂ ಅಮೌಲ್ಯ ವಸ್ತ್ರಾಭರಣಗಳ ಪಾರಿತೋಷಕವನ್ನು ಪಡೆದರು.

ಸ ರುಕ್ಮಿಣೀತಿಪ್ರಥಿತಾಭಿಧಾನಯಾ
ದ್ವಿಜನ್ಮನಾಗ್ರ್ಯೇಯಕುಲಸ್ಯ ಕನ್ಯಯಾ ।
ಶುಭೇ ವಯೋರೂಪಗುಣಾನುರೂಪಯಾ
ವ್ಯಧತ್ತ ಲಗ್ನೇ ಗೃಹಮೇಧಿನಂ ಸುತಮ್ ॥ ೨೬ ॥

ದ್ವಿಜಶ್ರೇಷ್ಠನ ವಂಶದಲ್ಲಿ ಹುಟ್ಟಿದ 'ರುಕ್ಮಿಣೀ' ಎಂಬ ಹೆಸರಿನ ವಯೋರೂಪಗುಣಗಳಲ್ಲಿ ಅನುರೂಪಳಾದ ಕನ್ಯೆಯೊಡನೆ ನರಸಿಂಹನ ಮದುವೆ ಮಾಡಿ ತಂದೆ ಆನಂದಾಚಾರ್ಯರು ಮಗನನ್ನು ಗೃಹಸ್ಥಾಶ್ರಮಿಯನ್ನಾಗಿ ಮಾಡಿದರು.

ಸ್ವಯಂ ತತೋಧ್ಯಾಪಯದಾಗಮಾನ್ ಗುರೋ-
ರನುಜ್ಞಯಾ ಮಧ್ವಯತೀಂದ್ರನಿರ್ಮಿತಾನ್ ।
ಕ್ರಮೇಣ ಶಿಷ್ಯಾಂಶ್ಚ ಕುಶಾಗ್ರಧೀರಯಂ
ತ್ರಿವಿಕ್ರಮಾಗಾರ ಕೃತಾಸಿಕೋನ್ವಹಮ್ ॥ ೨೭ ॥

ನಂತರ ಕುಶಾಗ್ರಬುದ್ಧಿಯವರಾದ ನರಸಿಂಹಾಚಾರ್ಯರು ತಂದೆಯ ಅಪ್ಪಣೆಯಂತೆ ತ್ರಿವಿಕ್ರಮದೇವರ ಗುಡಿಯಲ್ಲಿ ಕುಳಿತು ಸ್ವತಃ ಶಿಷ್ಯರಿಗೆ ಮಧ್ವಶಾಸ್ತ್ರಗ್ರಂಥಗಳ ಪಾಠವನ್ನು ಹೇಳತೊಡಗಿದರು.

ಯದೃಚ್ಛಯಾ ತತ್ರ ಕದಾಚಿದಾಗಮ-
ಪ್ರವೀಣಭಾವಾಧಿಗತಾಧಿಕಸ್ಮಯಃ ।
ಸಮೇತ್ಯ ಶಿಷ್ಯಾವಲಿಸಂವೃತಂ ಪುರೋ
ದದರ್ಶ ತಂ ಕಶ್ಚನ ಮಾಯಿಮಸ್ಕರೀ ॥ ೨೮ ॥

ಒಮ್ಮೆ ಸಂಚಾರಕ್ರಮದಿಂದ ಪುಣ್ಯಸ್ತಂಭನಗರಕ್ಕೆ ಬಂದ ತಾವು ಶಾಸ್ತ್ರದಲ್ಲಿ ಬಹಳ ಪ್ರವೀಣರು ಎಂದು ತಿಳಿದುಕೊಂಡಿದ್ದ ತಮ್ಮ ಶಿಷ್ಯರಿಂದೊಡಗೂಡಿ ಬಂದ ಓರ್ವ ಅದ್ವೈತಸನ್ಯಾಸಿಗಳು ನರಸಿಂಹಾಚಾರ್ಯರು ತ್ರಿವಿಕ್ರಮದೇವರ ಕಟ್ಟೆಯಮೇಲೆ ಪಾಠ ಹೇಳುತ್ತಿರುವದನ್ನು ಕೇಳುತ್ತ ನಿಂತರು.

ದ್ವಿರಷ್ಟಸಂವತ್ಸರಜಾತಿಶೋಭನ-
ಪ್ರತೀಕಮಾಜಾನುಭುಜಾರ್ಗಲದ್ವಯಮ್ ।
ವದಂತಮುಚ್ಚೈರ್ವರ ಕರ್ಮನಿರ್ಣಯ-
ಪ್ರಗಲ್ಭವಾಕ್ಯಾರ್ಥವಿಶೇಷಮಂಜಸಾ ॥ ೨೯ ॥

ಹದಿನಾರುವರ್ಷ ವಯಸ್ಕರಾಗಿ ಅತಿಶೋಭಾಯಮಾನರಾದ, ಆಜಾನುಬಾಹುಗಳಾದ, ಕರ್ಮನಿರ್ಣಯದಲ್ಲಿಯ ಪ್ರೌಢವಾದ ವಾಕ್ಯಾರ್ಥವನ್ನು ಅಸ್ಖಲಿತವಾಗಿ ವಿವರಿಸುತ್ತಿದ್ದ ನರಸಿಂಹಾಚಾರ್ಯರನ್ನು ಆ ಅದ್ವೈತಯತಿಗಳು ಆಶ್ಚರ್ಯದಿಂದ ನೋಡುತ್ತ ನಿಂತರು.

ಅಯಂ ಮಹಾತ್ಮಾ ಖಲು ಕಶ್ಚಿದನ್ಯಥಾ
ಮನುಷ್ಯಮಾತ್ರಸ್ಯ ನ ಹೀದೃಶೀ ಮತಿಃ ।
ಇತಿ ಸ್ವಚಿತ್ತೇ ವಿಮೃಶನ್ ಹೃದೈವ ತಂ
ಪ್ರಣಮ್ಯ ತೂಷ್ಣೀಂ ಪ್ರಯಯೌ ಯಥಾಗತಮ್ ॥ ೩೦ ॥

ಈ ನರಸಿಂಹಾಚಾರ್ಯರು ಯಾರೋ ಮಹಾತ್ಮರಾಗಿರಬೇಕು. ಕೇವಲ ಮನುಷ್ಯರಿಗೆ ಇಂಥ ಪ್ರತಿಭೆ ಇರಲಾರದು. ಹೀಗೆಂದು ಆಲೋಚಿಸಿ, ಮನಸ್ಸಿನಲ್ಲಿಯೇ ನಮಸ್ಕಾರ ಮಾಡಿ ತಾವು ಬಂದ ಮಾರ್ಗದಿಂದ ಮೌನದಿಂದ ಮರಳಿ ಹೋದರು.

ಭಿತ್ವಾದ್ವೈತಮತಾಂಧಕಾರಮಭಿತಃ ಸದ್ವೃಂದ ಸಂಭಾವಿತಃ
ಸಂಮೋದ್ಯ ದ್ವಿಜಸಂಸದಂ ಚ ವಸುಭಿಃ ದೂರೀಕೃತಾರಿವ್ರಜಃ ।

ಆಶಾಃ ಪೂರ್ಣಕಲಾಭಿವಿಸ್ತೃತಯಶೋಜ್ಯೋತ್ಸ್ನಾಶ್ರಿಯಾ
ಶೋಧಯನ್

ಅನಂದದ್ವಿಜರಾಡಗಾತ್ ಹರಿಪದಂ ಯಜ್ವಾದಿ-
ಭೂರೂರ್ಜಿತಮ್ ॥ ೩೦ ॥

ಸುತ್ತಲೂ ಹಬ್ಬಿದ ಅದ್ವೈತಮತವೆಂಬ ಕತ್ತಲೆಯನ್ನು ಪರಿಹರಿಸಿ, ಸಜ್ಜನರಿಂದ ಮರ್ಯಾದಿಸಲ್ಪಟ್ಟು, ಬ್ರಾಹ್ಮಣರಿಗೆ ಅನೇಕ ದಾನಾದಿಗಳನ್ನು ಕೊಟ್ಟು ಸಂತೋಷಪಡಿಸಿ, ಅಂತಃಶತ್ರುಗಳಾದ ಕಾಮಕ್ರೋಧಾದಿಗಳನ್ನೂ ಬಹಿಃಶತ್ರುಗಳನ್ನೂ ದೂರವಿರಿಸಿ, ತಮ್ಮ ಪರಿಪೂರ್ಣವಾದ ವಿದ್ಯೆಯೆಂಬ ಕಲೆಗಳಿರುವ ಕೀರ್ತಿಯೆಂಬ ಬೆಳದಿಂಗಳಿಂದ ದಶದಿಕ್ಕುಗಳನ್ನು ಬೆಳಗಿ, ಯಜ್ಞಯಾಗಾದಿಗಳನ್ನು ಮಾಡುವವರಲ್ಲಿ ಪ್ರಮುಖರಾದ ಶ್ರೀ ಆನಂದಾಚಾರ್ಯರು ಚ್ಯುತಿರಹಿತವಾದ ವೈಕುಂಠ ಪದವಿಯನ್ನು ಪಡೆದರು. (ಶ್ರೀ ಆನಂದಾಚಾರ್ಯರು ತಮ್ಮ ಮಕ್ಕಳಾದ ನರಸಿಂಹಾಚಾರ್ಯರಿಗೆ ಪಾಠಪ್ರವಚನದ ಭಾರವನ್ನು ಒಪ್ಪಿಸಿ ವೃದ್ಧಾಪ್ಯದಲ್ಲಿ ತಾವು ಭಗವಂತನ ಭಜನೆಯಲ್ಲಿಯೇ ಕಾಲಕಳೆಯುತ್ತ ತಮ್ಮ ಸಾರ್ಥಕ ಜೀವನವನ್ನು ಮುಗಿಸಿ ವೈಕುಂಠವಾಸಿಗಳಾದರು ಎಂದು ಇಲ್ಲಿ ಹೇಳಿದ್ದಾರೆ.)*

ಪಾಪಿನಾ ಯವನಭೂಭುಜಾ ಕ್ಷಿತೌ
ಈಶ್ವರೋऽಹಮಿತಿ ಹಂತ ಜಾನತಾ ।
ಗ್ರಾಮಸಂತತಿರಭೂದಪಾರ್ಥಿತಾ
ಸಂಕರೇಣ ನಿಗಮಾವಲಿರ್ಯಥಾ ॥ ೩೧ ॥

ಪಾಪಿಯಾದ ಯವನರಾಜನೋರ್ವನು ಈ ಭೂಲೋಕಕ್ಕೆಲ್ಲ ತಾನೇ ಒಡೆಯನು ಎಂಬ ದುರಹಂಕಾರದಿಂದ ಸಂಕರನು ಶ್ರುತಿಸೂತ್ರಗಳಿಗೆ ಅಪಾರ್ಥವನ್ನು ಮಾಡಿದಂತೆ ಪುಣ್ಯಸ್ತಂಭಪುರದ ಸುತ್ತಲಿನ ಗ್ರಾಮಗಳಲ್ಲಿ ದಾಳಿಮಾಡಿದನು. (ಪುಣ್ಯಸ್ತಂಭಪುರದ ಕಡೆಗೂ ಧಾವಿಸಿ ಬಂದನು)

---

* ೧೯ ರಿಂದ ೩೧ರ ವರಗಿನ ಶ್ಲೋಕಗಳು ಮೂರನೆಯ ಸರ್ಗದಿಂದ ಆಯ್ದುಕೊಳ್ಳಲ್ಪಟ್ಟವೆ.

ತಾಮುವನ್ ಪಥಿ ಸ ಭೂಮಿಭೃದ್ಧೃತೀಃ
ಗೌತಮೀಪ್ರಥಿತಮಾತೃಕಾಲಯಮ್ ।
ಪ್ರಾಪ ನೀಪಪರಿಶೋಭಿ ನಾಸಿಕಾ-
ತ್ರ್ಯಂಬಕಾಖ್ಯನಗರಂ ಮನೋಹರಮ್ ॥ ೩೩ ॥

ಯವನರಾಜನ ದಾಳಿಗೆ ಗುರಿಯಾದ ಆ ಗ್ರಾಮಗಳ ಮತ್ತು ಪುಣ್ಯಸ್ತಂಭಪುರದ ಪ್ರಜೆಗಳನ್ನೆಲ್ಲ ಕರೆದುಕೊಂಡು, ದಾರಿಯಲ್ಲೆಲ್ಲ ಅವರನ್ನು ಅನ್ನಪಾನಾದಿಗಳಿಂದ ರಕ್ಷಿಸುತ್ತ, ಪರ್ವತಸದೃಶ ಧೈರ್ಯಶಾಲಿಗಳಾದ ನರಸಿಂಹಾಚಾರ್ಯರು ಗೋದಾವರಿಯ ಉಗಮಸ್ಥಾನವಾದ, ನೀಪವೃಕ್ಷಗಳಿಂದ ಶೋಭಿಸುವ, 'ನಾಸಿಕಾತ್ರ್ಯಂಬಕ' ನಗರಕ್ಕೆ ಬಂದರು.

ಶೇಖರೀಕೃತರಮಾಧಿಪಪದಾ-
ಪ್ಲಾವಪಾವನ ಧುನೀಪಯೋಭರಮ್ ।
ತಂ ಪ್ರಣಮ್ಯ ಶಿವಮಾದರಾದಸೌ
ತತ್ರ ವಾಸಮತನೋತ್ ಶರದ್ವಯಮ್ ॥ ೩೪ ॥

ರಮಾಪತಿಯಾದ ವಿಷ್ಣುವಿನ ಪಾದವನ್ನು ತೊಳೆದು ಪವಿತ್ರಳಾದ ಭಾಗೀರಥಿಯನ್ನು ತಲೆಯಮೇಲಿಟ್ಟುಕೊಂಡ ನಾಸಿಕಾತ್ರ್ಯಂಬಕನಗರದಲ್ಲಿಯ ಶಿವನನ್ನು ಆದರದಿಂದ ನಮಸ್ಕರಿಸುತ್ತ ನರಸಿಂಹಾಚಾರ್ಯರು ಆ ನಗರದಲ್ಲಿ ಎರಡು ವರ್ಷಕಾಲ ವಾಸವಾಗಿದ್ದರು.

ತತ್ಪುರೇ ಸ್ಥಿತಮುಥಾಕಲಯ್ಯ ತಂ
ನಾಗನಾಥಸುತದತ್ತಪಂಡಿತಃ ।
ಸಂಗಮೋಪಪದನೀರನಾಮಕ
ಗ್ರಾಮಮಾನಯದುದಂಚಿತೋತ್ಸವಃ ॥ ೩೫ ॥

ನಾಸಿಕಾತ್ರ್ಯಂಬಕನಗರದಲ್ಲಿ ವಾಸವಾದ ಇವರ ಪ್ರಭಾವವನ್ನು ಕೇಳಿ ನಾಗನಾಥನ ಮಗನಾದ ದತ್ತೋಜಿಪಂತನೆಂಬ ಸರದಾರನು ಇವರನ್ನು ತನ್ನ ಸ್ಥಳವಾದ ಸಂಗಮನೀರ ಎಂಬ ಗ್ರಾಮಕ್ಕೆ ಕರಿಸಿಕೊಂಡನು. (ಈ ನಾಗನಾಥ ದತ್ತಪಂಡಿತನು ಶಿವಾಜಿಯ ತಂದೆಯಾದ ಶಹಾಜಿಯ ಸರದಾರರಲ್ಲಿ ಒಬ್ಬನಾಗಿದ್ದನೆಂದು ತಿಳಿದುಬರುತ್ತದೆ.)

ಇತ್ಯನರ್ಘ್ಯತರ ಭೂಷಣಾದಿಕಂ
ದತ್ತವಂತಮಥ ದತ್ತಪಂಡಿತವಮ್ ।
ಯೋಽಭಿನಂದ್ಯ ಸುಜನಾವಲೀವೃತಃ
ಪೈಠಣೀಪುರಮಗಾದಗಾಧಹೃತ್ ॥ ೩೬ ॥

ಅಮೌಲ್ಯವಾದ ವಸ್ತ್ರಾಭರಣಗಳನ್ನು ಕೊಟ್ಟು ತಮ್ಮನ್ನು ಗೌರವಿಸಿದ ದತ್ತಪಂಡಿತನನ್ನು ಅಭಿನಂದಿಸಿ ಸಜ್ಜನರಿಂದ ಕೂಡಿಕೊಂಡು ಅಗಾಧಹೃದಯರಾದ ನರಸಿಂಹಾಚಾರ್ಯರು (ದತ್ತಪಂಡಿತನ ಸೂಚನೆಯಂತೆ) ಪೈಠಣೀಪುರಕ್ಕೆ ಹೋದರು.

ತತ್ರ ಸಾಧುರಚಿತೇ ಮಠಾಂತರೇ
ಚಿತ್ರವಾಕ್ಯರಚಿತಾನತಿವಿಸ್ಮಿತಾನ್ ।
ಸತ್ರಪಾಂಶ್ಚ ರಚಯನ್ ಸ ವಾದಿನಃ
ಸೂತ್ರಭಾಷ್ಯಮುವದತ್ ಸುಧೀಜನೇ ॥ ೩೭ ॥

ಪೈಠಣೀಪುರದಲ್ಲಿ ಪೂರ್ವಯತಿಗಳು ನಿರ್ಮಿಸಿದ ಮಠದಲ್ಲಿ ತಮ್ಮ ವಿದ್ವತ್ಪೂರ್ಣವಾದ ಪ್ರವಚನಗಳಿಂದ ವಾದಿಗಳಿಗೆ ಆಶ್ಚರ್ಯವನ್ನುಂಟು ಮಾಡುತ್ತ ಹಾಗೂ ಅವರಿಗೆ ಲಜ್ಜೆಯುಂಟಾಗುವಂತೆ ಮಾಡುತ್ತ ಶ್ರೀನರಸಿಂಹಾಚಾರ್ಯರು ಸಜ್ಜನರಿಗೆ ಸೂತ್ರಭಾಷ್ಯದ ಪಾಠವನ್ನು ಹೇಳಿದರು. (ಇದರಿಂದ ಆ ಕಾಲದಲ್ಲಿಯೇ ಪೈಠಣದಲ್ಲಿ ಮಧ್ವಸಂಪ್ರದಾಯದ ಮಠದ ಕಟ್ಟಡವೊಂದು ಇದ್ದಿತೆಂದು ತಿಳಿದುಬರುತ್ತದೆ. ಆನಂದಾಚಾರ್ಯರು ಇಲ್ಲಿ ಹೋಗಿ ಆಗಾಗ ಪ್ರವಚನ ಮಾಡುತ್ತಿದ್ದಂತೆ ಕಾಣುತ್ತದೆ. ಒಂದೆರಡು ತಲೆಮಾರುಗಳ ಹಿಂದಿನವರೆಗೂ 'ಆನಂದಮಠ'ವೆಂದು ಪ್ರಸಿದ್ಧವಾಗಿ ಈ ಮಠವು ಇದ್ದಿತೆಂದು ಹಿರಿಯರು ಹೇಳುತ್ತಿದ್ದರು.)

ವತ್ಸರಾರ್ಧಮುಷಿತಃ ಸ ತತ್ಪುರೇ
ಭರ್ತ್ಸಿತಾಖಿಲವಿಪಕ್ಷರೌಹಿಷಃ ।
ಮೇರುಕಂದರಮಿವಾಥ ಕೇಸರೀ
ಪಾಂಡುರಂಗಮುಗಮತ್ ಬುಧಾಶ್ರಯಮ್ ॥ ೩೮ ॥

ಪೈಠಣೀಪುರದಲ್ಲಿ ಆರುತಿಂಗಳ ಕಾಲವಿದ್ದು ವಾದಿಗಳನ್ನೆಲ್ಲ ನಿಗ್ರಹಿಸಿ ಸಿಂಹವು ಮೇರುಪರ್ವತದ ಕಂದರಕ್ಕೆ ಹೋಗುವಂತೆ ನರಸಿಂಹಾಚಾರ್ಯರು ವಿದ್ವಜ್ಜನರಿಗೆ ಆಶ್ರಯಸ್ಥಾನವಾದ ಪಂಢರಪುರಕ್ಕೆ ಹೋದರು.

ಪ್ರತ್ಯಹಂ ಪ್ರಣತಿಪೂರ್ವಕೈಃ ಸ್ತವೈ-
ರಿತ್ಯನನ್ಯಮನಸಾಽಮುನಾ ಹರಿಃ ।
ತೋಷಿತೋಽಭವದುದಾರಶೀಲತೋಽ-
ಶೇಷದೇಶವಿದುಷಾಮಪಿ ವ್ರಜಃ ॥ ೩೯ ॥

ಪ್ರತಿನಿತ್ಯವೂ ನರಸಿಂಹಾಚಾರ್ಯರು ಅನನ್ಯಚಿತ್ತದಿಂದ ಸಮರ್ಪಿಸುವ ಸ್ತುತಿ ಮತ್ತು ನಮಸ್ಕಾರಗಳಿಂದ ಶ್ರೀಪಾಂಡುರಂಗನು ಸಂತುಷ್ಟನಾದನು. ಇವರ ಉದಾರ ವರ್ತನೆಯಿಂದ ವಿದ್ವಜ್ಜನರು ಸಂತುಷ್ಟರಾದರು.

ಮಧ್ವಯೋಗಿಚರಣಾಬ್ಜಮಾರ್ದವಾ-
ಭಿಜ್ಞಭೂತಲತಯಾತಿಪಾವನಮ್ ।
ಪ್ರಾಕ್ತನಂ ಮಠಮಸಾವಕಾರಯತ್
ತತ್ರ ನೂತ್ನಮಿವ ಚಿತ್ರದಾರುಭಿಃ ॥ ೪೦ ॥

ಶ್ರೀ ಪಂಢರಪುರ ಕ್ಷೇತ್ರದಲ್ಲಿ ಶ್ರೀಮಧ್ವಾಚಾರ್ಯರ ಪಾದಕಮಲಗಳ ಸ್ಪರ್ಶದಿಂದ ಪವಿತ್ರವಾದ ಪ್ರಾಚೀನಮಠವನ್ನು ಹೊಸದಾಗಿ ಕಾಣುವಂತೆ ಶ್ರೀ ನರಸಿಂಹಾಚಾರ್ಯರು ಜೀರ್ಣೋದ್ಧಾರ ಮಾಡಿಸಿದರು. (ಈಗ ಪಂಢರಪುರದಲ್ಲಿ ಇರುವ ಮಠದಲ್ಲಿ ಶ್ರೀ ವೇದನಿಧಿತೀರ್ಥರ ಮತ್ತು ಶ್ರೀ ಸತ್ಯಧ್ಯಾನತೀರ್ಥರ ಮೂಲವೃಂದಾವನಗಳಿರುವವು. ಶ್ರೀ ವೇದಸಿಧಿತೀರ್ಥರು ಶ್ರೀ ವಿದ್ಯಾಧೀಶರ ಶಿಷ್ಯರು. ಅವರ ನಂತರ ಪಟ್ಟಕ್ಕೆ ಬಂದವರು. ಇಲ್ಲಿಯ ಈ ಉಲ್ಲೇಖದಿಂದ ಶ್ರೀ ವೇದನಿಧಿತೀರ್ಥರಿಗಿಂತ ಮೊದಲೂ ಈ ಮಠವು ಇದ್ದಿತೆಂದು ತಿಳಿದು ಬರುವದು. ಶ್ರೀಮಧ್ವಾಚಾರ್ಯರ ಪದಕಮಲಗಳಿಂದ ಪವಿತ್ರವಾದ ಎಂದು ಹೇಳಿದ್ದರಿಂದ ಅವರ ಕಾಲದಲ್ಲಿಯೇ ಈ ಮಠವು ಇದ್ದಿತೆಂದು ತಿಳಿದುಬರುತ್ತದೆ. ಶ್ರೀಮಧ್ವಾಚಾರ್ಯರು ಮೊದಲನೆಯ ಸಲ ಬದರಿಕಾಶ್ರಮಯಾತ್ರೆಯನ್ನು ಮುಗಿಸಿ ತಿರುಗಿ ಬರುವಾಗ ಶ್ರೀ ಪದ್ಮನಾಭತೀರ್ಥರು ಅವರ ಶಿಷ್ಯರಾಗಿ, ಎರಡನೆಯ ಸಲ ಅವರು ಬದರಿಕಾಶ್ರಮಕ್ಕೆ ಹೋಗುವಾಗ ಈ ಮಠದಲ್ಲಿ

ಅವರನ್ನು ಬರಮಾಡಿಕೊಂಡಿರಬೇಕು. ಆದ್ದರಿಂದ ಇದು ಶ್ರೀಪದ್ಮನಾಭ ತೀರ್ಥರು ಕಟ್ಟಿಸಿದ ಮಠವೆಂದು ಊಹಿಸಬಹುದು. ಚಂದ್ರಭಾಗಾನದಿಗೆ ಆಗಾಗ ಮಹಾಪೂರಗಳು ಬರುತ್ತಿದ್ದು ಜೀರ್ಣವಾದ ಈ ಮಠವನ್ನು ಶ್ರೀ ನರಸಿಂಹಾಚಾರ್ಯರು ಜೀರ್ಣೋದ್ಧಾರ ಮಾಡಿಸಿದ ಉಲ್ಲೇಖ ಇಲ್ಲಿ ಬಂದಿದೆ. ಪದ್ಮನಾಭತೀರ್ಥರು, ಅಕ್ಷೋಭ್ಯತೀರ್ಥರು ಹೀಗೆ ಶ್ರೀಮಧ್ವಾ-ಚಾರ್ಯರ ಸಾಕ್ಷಾತ್ ಶಿಷ್ಯರ ಕಾಲದಲ್ಲಿ ಇದು ಒಂದು ಕೇಂದ್ರಸ್ಥಾನವಾಗಿದ್ದಂತೆ ಕಾಣುತ್ತದೆ. ಪೂರ್ವಾಶ್ರಮದಲ್ಲಿ ಗೋದಾವರೀತೀರದವರಾದ ಶ್ರೀ ಪದ್ಮನಾಭ ತೀರ್ಥರು ಇಲ್ಲಿ ಬಂದು ಮಠಕಟ್ಟಿ ನೆಲೆಸಿರಬಹುದು. ಅಥವಾ ಇದು ಅವರು ಆಗಾಗ ಬಂದು ಹೋಗಲು ಕಟ್ಟಿಸಿಕೊಂಡ ಮಠವಾಗಿರಬಹುದು. ಅಂತೂ ಪಂಢರಪುರದ ಮಠವು ಶ್ರೀಮಧ್ವಾಚಾರ್ಯರ ಕಾಲದಿಂದಲೂ ಇದ್ದ ಪ್ರಾಚೀನ ಮಠವೆಂಬುದೂ ಅದನ್ನು ಶ್ರೀ ನರಸಿಂಹಾಚಾರ್ಯರು (ಅಂದರೆ ಶ್ರೀ ವಿದ್ಯಾ-ಧೀಶರು ಪೂರ್ವಾಶ್ರಮದಲ್ಲಿಯೇ) ಜೀರ್ಣೋದ್ಧಾರ ಮಾಡಿದರೆಂಬುದೂ ಮಹತ್ವವಾದ ಅಂಶಗಳು.)

ವಾದತಃ ಸದಸಿ ದುರ್ಜನೋಽಮುನಾ
ನಿರ್ಜಿತಃ ಸ ವಿಜಯಾಪುರಾಸಿಕಮ್ ।
ಲಿಂಗಯಾಖ್ಯಮಭಜತ್ ದ್ವಿಜಂ ಭಿಯಾ
ಗೂಢಮಾಹಿತಪಲಾಯನೋ ನಿಶಿ ॥ ೪೧ ॥

ಪಂಢರಪುರದಲ್ಲಿ ಶ್ರೀ ನರಸಿಂಹಾಚಾರ್ಯರಿಂದ ವಾದದಲ್ಲಿ ಪರಾಜಿತನಾದ 'ನರಸ' ಎಂಬ ಪಂಡಿತನು ಗುಪ್ತವಾಗಿ ಓಡಿಹೋಗಿ ವಿಜಾಪುರದಲ್ಲಿಯ 'ಲಿಂಗೋಜೀ' (ಅಧಿಕಾರಿ ಮತ್ತು ವ್ಯಾಪಾರಿಯಾದ) ಎಂಬ ಬ್ರಾಹ್ಮಣನನ್ನು ಆಶ್ರಯಿಸಿದನು.

ವೈಷ್ಣವಾಗ್ರಿಮಮಮುಂ ಸಶಿಷ್ಯಕಂ
ಪ್ರೇಷಿತಾಪ್ತಜನವಾಹನಾದಿತಃ ।
ಆನಿನಾಯ ವಿಜಯಾಪುರಂ ಮುದಾ
ಲಕ್ಷ್ಮಪಂಡಿತವರೋ ಯದೃಚ್ಛಯಾ ॥ ೪೨ ॥

ನಂತರ, ವಿಜಾಪುರದಲ್ಲಿಯ ಲಕ್ಷ್ಮಣಪಂಡಿತನೆಂಬ ವೈಷ್ಣವ ಮಂತ್ರಿಯು ಸ್ವಜನರನ್ನೂ ಪಲ್ಲಕ್ಕಿಯನ್ನೂ ಕಳಿಸಿಕೊಟ್ಟು ವೈಷ್ಣವಶ್ರೇಷ್ಠರಾದ ನರಸಿಂಹಾಚಾರ್ಯರನ್ನು ಶಿಷ್ಯಸಮೇತವಾಗಿ ವಿಜಾಪುರಕ್ಕೆ ಕರೆಯಿಸಿಕೊಂಡನು.

ತತ್ಸಭಾಜಿತಮಮುಂ ಸದಗ್ರಿಮಂ
ಪ್ರಾಗ್ಜಿತೋಽಪಿ ಪರಿಚಾರಕಾನ್ವಯಃ ।
ಅಭ್ಯಧತ್ತ ನರಸೋಽಭ್ಯಸೂಯಯಾ
ಜೃಂಭಿತಾಗ್ರಹನಿರಾಕೃತತ್ರಪಃ ॥ ೪೩ ॥

ಪರಿಚಾರಕಕುಲದ ನರಸಪಂಡಿತನೆಂಬವನು ಪಂಢರಪುರದಲ್ಲಿ ಒಮ್ಮೆ ಪರಾಜಿತನಾಗಿದ್ದರೂ ವಿಜಾಪುರದಲ್ಲಿ ತನಗೆ ಆಶ್ರಯಕೊಟ್ಟ ಲಿಂಗಯಪಂಡಿತನು ನರಸಿಂಹಾಚಾರ್ಯರಿಗೆ ಮರ್ಯಾದೆ ಮಾಡಿದ್ದನ್ನು ಸಹಿಸಲಾರದೆ ಮತ್ತೆ ದುರಾಗ್ರಹದಿಂದ ನಿರ್ಲಜ್ಜನಾಗಿ ವಾದ ಹೂಡಿದನು.

ಕೇನ ಸೃಷ್ಟಮಖಿಲಂ ಚರಾಚರಂ
ಕೇನ ವಾ ಪ್ರತಿದಿನಂ ಪ್ರಬೋಧವತ್ ।
ಬ್ರಹ್ಮ ಕೇನ ಸಮುಪೈತಿ ಸಜ್ಜನೋ
ವೇತ್ಸಿ ಚೇದಿಹ ವದೈಕಮುತ್ತರಮ್ ॥ ೪೪ ॥

ಈ ಚರಾಚರ ಜಗತ್ತನ್ನು ಯಾರು ಸೃಷ್ಟಿಸಿದರು? ಪ್ರತಿದಿನವೂ ಯಾರು ಎಚ್ಚರಿಸುವರು? ಸಜ್ಜನರು ಯಾರೊಡನೆ ಪರಮಾತ್ಮನನ್ನು ಪಡೆಯುವರು? ಈ ಮೂರೂ ಪ್ರಶ್ನೆಗಳಿಗೂ ಒಂದೇ ಉತ್ತರವನ್ನು ಕೊಡಬೇಕು ಎಂದು ನರಸಪಂಡಿತನು ಪ್ರಶ್ನೆ ಮಾಡಿದನು.

ಕದ್ವದ ಶೃಣು ಸಮೀರಿತಂ ತ್ವಯಾ
ಕೇನ ವೇತಿ ವಿಷಯತ್ರಯೇಽಪಿ ಯತ್ ।
ಕಿಂ ತದೇವ ಪದಮತ್ರ ನೋತ್ತರಂ
ವಾಗಧೀಶ ಮರುದರ್ಕವಾಚಕಮ್ ॥ ೪೫ ॥

ದುರ್ವಾದಿಯೇ! ನೀನು ಈ ಮೂರು ಪ್ರಶ್ನೆಗಳನ್ನು ಕೇಳುವಾಗ ಉಪಯೋಗಿಸಿದ ' ಕೇನ ' ಎಂಬ ಪದವೇ ಬ್ರಹ್ಮ ಸೂರ್ಯ ಮತ್ತು ವಾಯು

ವಾಚಕವಾದ್ದರಿಂದ ನಿನ್ನ ಮೂರೂ ಪ್ರಶ್ನೆಗಳಿಗೆ ಒಂದೇ ಉತ್ತರವಾಗಿದೆ ಎಂದು ನರಸಿಂಹಾಚಾರ್ಯರು ಹೇಳಿದರು. (ಕಿವಮ್ ಶಬ್ದವು ಅನೇಕಾರ್ಥಕವಾಗಿದ್ದು ಬ್ರಹ್ಮ, ಸೂರ್ಯ, ವಾಯು ಎಂಬ ಮೂರೂ ಅರ್ಥಗಳೂ ಆ ಶಬ್ದಕ್ಕೆ ಇರುವವು. ಬ್ರಹ್ಮನು ಚರಾಚರ ಸೃಷ್ಟಿಕರ್ತನು. ಸೂರ್ಯನು ಎಚ್ಚರಿಸುವವನು. ಮುಕ್ತಜೀವರು ವಾಯುದೇವರೊಡನೆ ಪರಮಾತ್ಮನನ್ನು ಪಡೆಯುವರು. ಆದ್ದರಿಂದ 'ಕೇನ' ಎಂಬ ಪದದಿಂದಲೇ ಬ್ರಹ್ಮನಿಂದ, ಸೂರ್ಯನಿಂದ, ವಾಯುವಿನಿಂದ ಎಂಬ ಅರ್ಥಗಳು ಹೊರಟು ಮೂರೂ ಪ್ರಶ್ನೆಗಳ ಉತ್ತರ ದೊರೆಯುವದು.)

ತತ್ರಾಮಾತ್ಯಘಟಾ ಸಮರ್ಪಿತಮಹಾಭೂಷಾಂಬರಾಂದೋಲಿಕಾ
ಶ್ವೇತಚ್ಛತ್ರತುರಂಗಚಾಮರಮುಖಶ್ರೀಸಾರಲಬ್ಧೋನ್ನತಿಃ ।
ವೇದವ್ಯಾಸಗುರುಪ್ರಮೋದಕಲನಾನಿಸ್ತಂದ್ರಶೀಲಃ ಕ್ಷಿತೌ
ವಿದ್ಯಾಕರ್ಮತನೂಭವೈರಯಮಭೂನ್ನಿರ್ಜಿತ್ಯ
ಲೋಕತ್ರಯಮ್ ॥ ೪೬ ॥

ವಿಜಾಪುರದಲ್ಲಿ ನರಸಿಂಹಾಚಾರ್ಯರು ಅನೇಕ ಮಂತ್ರಿಗಳಿಂದ ಅಮೌಲ್ಯವಾದ ವಸ್ತ್ರಾಭರಣ ಪಲ್ಲಕ್ಕಿ ಶ್ವೇತಚ್ಛತ್ರ ಕುದುರೆ ಚಾಮರಾದಿ ಐಶ್ವರ್ಯದಿಂದ ಮರ್ಯಾದಿತರಾಗಿ ವೇದವ್ಯಾಸದೇವರಿಗೂ ಗುರುಗಳಾದ ವೇದವ್ಯಾಸತೀರ್ಥ ಯತಿಗಳಿಗೂ ತಮ್ಮ ಪಾಠಪ್ರವಚನಾದಿ ಜ್ಞಾನಕಾರ್ಯಗಳಿಂದ ಸಂತೋಷಪಡಿಸುತ್ತ ವಿದ್ಯೆ ಕರ್ಮಾನುಷ್ಠಾನ ಮತ್ತು ಸಂತಾನಪ್ರಾಪ್ತಿಯಿಂದ ದೇವ ಪಿತೃ ಮನುಷ್ಯಲೋಕಗಳನ್ನು ಜಯಿಸಿದರು. *

ಇತ್ಥಂ ದಿಗಂತರನಿರೂಢಯಶೋಂಕುರಂ ತ-
ಮಾಸೇವಿತಂ ಗುಣವದಂಜಲಿಮಂಜರೀಭಿಃ ।
ಆಕರ್ಣ್ಯ ಸಮ್ಮದವಶಾತ್ ಪ್ರಜಿಘಾಯ ವೇದ-
ವ್ಯಾಸಾಭಿಧಾನಗುರುರಸ್ಯ ಕೃತೇಂಬರಾಣಿ ॥ ೪೭ ॥

* ೩೨ ರಿಂದ ೪೬ರ ವರೆಗಿನ ಶ್ಲೋಕಗಳು ನಾಲ್ಕನೆಯ ಸರ್ಗದಿಂದ ಆಯ್ದು ಕೊಳ್ಳಲ್ಪಟ್ಟಿವೆ.

2

ಹೀಗೆ ನರಸಿಂಹಾಚಾರ್ಯರ ಯಶಸ್ಸು ಎಲ್ಲ ದಿಕ್ಕುಗಳಲ್ಲಿ ಹರಡಿದ್ದನ್ನೂ ಸಕಲಸಜ್ಜನರಿಗೂ ಅವರು ಪ್ರಿಯರಾದುದನ್ನೂ ಕೇಳಿ ಆಗಿನ ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀವೇದವ್ಯಾಸತೀರ್ಥರು ಹರ್ಷಪುಲಕಿತರಾಗಿ ಅವರಿಗೆ ವಸ್ತ್ರಗಳ ಮರ್ಯಾದೆಯನ್ನು ಕಳಿಸಿಕೊಟ್ಟರು.

**ದೈವಾತ್ತತೋ ಮಣಿಪುರಂ ಸಮುಪೇತ್ಯ ಯೋಗಿ-**
**ಚಂದ್ರೇದೃಶಾಂ ನಯನನಂದಥುಮಾದಧಾನೇ ।**
**ತದ್ದರ್ಶನೋತ್ಸುಕತಯಾ ತದಗಾದಯಂ ದ್ರಾಕ್**
**ಚೇತೋಽಪಿ ಸರ್ವವಿದುಷಾಂ ಪ್ರಮದಾತಿರೇಕಃ ॥ ೪೮ ॥**

ನಂತರ, ದೈವಯೋಗದಿಂದ ಯೋಗಿವರ್ಯರಾದ ಶ್ರೀ ವೇದವ್ಯಾಸ ತೀರ್ಥರು ಭಕ್ತರ ಕಣ್ಣುಗಳಿಗೆ ಆನಂದಕೊಡುತ್ತ ಮಣಿಪುರ ಗ್ರಾಮಕ್ಕೆ (ಇಂದಿನ ವಿಜಾಪುರ ಜಿಲ್ಲೆಯಲ್ಲಿಯ ಮಣೂರು) ಬಂದರು. ಆಗ ನರಸಿಂಹಾ ಚಾರ್ಯರು ಅವರ ದರ್ಶನಾಭಿಲಾಷೆಯಿಂದ ಅಲ್ಲಿಗೆ ಹೋದರು. ಈ ಸಮಾಗಮ ದಿಂದ ಸಜ್ಜನರೆಲ್ಲರೂ ಸಂತೋಷಪಟ್ಟರು.

**ಶ್ರೀಮಧ್ವಯೋಗಿಮತರಕ್ಷಣರಾಜ್ಯಭಾರ-**
**ಮಾಧಾಯ ವತ್ಸ ಭವತಿ ಪ್ರಕಟಾನುಭಾವೇ ।**
**ಚೇತಃಶ್ರಮಂ ಮಮ ಚಿರಾಯ ನಿನೀಷತೀತಿ**
**ವ್ಯಾಚಷ್ಟ ಸಂಸದಿ ನೃಸಿಂಹಮಮುಂ ಯತೀಂದ್ರಃ ॥೪೯॥**

ವತ್ಸ ನರಸಿಂಹ! ನಿನ್ನ ಯೋಗ್ಯತೆಯನ್ನು ಈಗಾಗಲೇ ವ್ಯಕ್ತಪಡಿಸಿದ ನಿನ್ನಲ್ಲಿ ಮಧ್ವಮತ ಸಾಮ್ರಾಜ್ಯರಕ್ಷಣೆಯ ಭಾರವನ್ನು ಒಪ್ಪಿಸಿ ನಮ್ಮ ಮನಸ್ಸು ವಿಶ್ರಾಂತಿಯನ್ನು ಪಡೆಯಬೇಕೆನ್ನುತ್ತದೆ—ಎಂದು ಶ್ರೀವೇದವ್ಯಾಸ ತೀರ್ಥರು ವಿದ್ವಜ್ಜನರ ಸಭೆಯಲ್ಲಿ ನರಸಿಂಹಾಚಾರ್ಯರಿಗೆ ಹೇಳಿದರು.

**ಲಗ್ನೇ ಶುಭೇ ತದನು ತಸ್ಯ ವಿಧಾಯ ವಿದ್ಯಾ-**
**ಧೀಶಾಭಿಧಾನಮಭಿಹೃದ್ಯ ಗುಣಾನುರೂಪಮ್ ।**
**ಭೂಮಾವಶೇಷಸದನುಗ್ರಹಯೌವರಾಜ್ಯ-**
**ಪಟ್ಟಾಭಿಷಿಕ್ತಮಪಿ ತಂ ಗುರುರಾಡತಾನೀತ್ ॥ ೫೦ ॥**

ನಂತರ, ಗುರುಶ್ರೇಷ್ಠರಾದ ಶ್ರೀವೇದವ್ಯಾಸತೀರ್ಥರು ಶುಭಮುಹೂರ್ತದಲ್ಲಿ ' ವಿದ್ಯಾಧೀಶ ' ಎಂಬ ಅನುರೂಪವಾದ ಅಭಿಧಾನವನ್ನಿಟ್ಟು ಲೋಕದಲ್ಲಿಯ ಸಕಲಸಜ್ಜನರ ಅನುಗ್ರಹಕ್ಕಾಗಿ ಶ್ರೀನರಸಿಂಹಾಚಾರ್ಯರಿಗೆ ಶ್ರೀಮಧ್ವಮತ ಸಾಮ್ರಾಜ್ಯಪೀಠದ ಯುವರಾಜಪಟ್ಟಕ್ಕೆ ಅಭಿಷೇಕ ಮಾಡಿದರು.

ಇಕ್ಷ್ವಾಕುವಂಶಜನುಷಃ ಪ್ರತಿಮಾಂ ಮುರಾರೇಃ
ದ್ವೈಪಾಯನಸ್ಯ ಚ ಪುರಾತನ ಪುಣ್ಯಲಭ್ಯಾನ್ ।
ಬಿಂಬಾನಪೂಜಯದಸೌ ಗುರುಶಾಸನೇನ
ಶ್ರೀಶೋಽಪಿ ತುಷ್ಟಿಮಭಜತ್ ತದುಪಾಸನೇನ ॥ ೫೧ ॥

ಆಶ್ರಮವನ್ನು ಸ್ವೀಕರಿಸಿದ ನಂತರ ಶ್ರೀವಿದ್ಯಾಧೀಶರು ಗುರುಗಳ ಅಪ್ಪಣೆಯಂತೆ ಶ್ರೀ ಮೂಲರಾಮದೇವರ ಪ್ರತಿಮೆಯನ್ನೂ ವ್ಯಾಸಮುಷ್ಟಿಗಳನ್ನೂ ಪೂಜಿಸಿದರು. ಇವರ ಉಪಾಸನೆಯಿಂದ ಪರಮಾತ್ಮನು ಸಂತುಷ್ಟನಾದನು.

ಜಯತು ಜಯತು ಸಾಧುಕ್ಷೇಮಕಾರ್ಯಾತ್ತದೀಕ್ಷಃ
ಜಯತು ಜಯತು ಕಾರುಣ್ಯಾಪಗಾಂಚತ್ಕಟಾಕ್ಷಃ ।
ಜಯತು ಜಯತು ತಾದೃಕ್ ಸದ್ಗುಣಸ್ತೋಮಸಾಂದ್ರಃ
ಜಯತು ಜಯತು ವಿದ್ಯಾಧೀಶಯೋಗೀಂದ್ರಚಂದ್ರಃ * ॥೫೨॥

ಶ್ರೀವಿದ್ಯಾಧೀಶರು ಯುವರಾಜ ಪಟ್ಟಾಭಿಷೇಕ ಪಡೆದು ಪೂಜೆ ಮಾಡಿದ ಈ ಸಂದರ್ಭದಲ್ಲಿ ನೆರೆದ ಜನಸ್ತೋಮವು ಸಜ್ಜನರ ಯೋಗಕ್ಷೇಮದ ದೀಕ್ಷೆ ವಹಿಸಿದ ಶ್ರೀವಿದ್ಯಾಧೀಶರಿಗೆ ಜಯಜಯಕಾರವು; ತಮ್ಮ ಕಟಾಕ್ಷಗಳಿಂದ ಕಾರುಣ್ಯದ ನದಿಯನ್ನೇ ಹರಿಸುತ್ತಿರುವ ಶ್ರೀವಿದ್ಯಾಧೀಶ ಯೋಗಿಗಳಿಗೆ ಜಯಜಯಕಾರವು; ಅಪರಿಮಿತವಾದ ಸದ್ಗುಣಗಳ ನಿಧಿಯಾದ ಶ್ರೀವಿದ್ಯಾಧೀಶ ಯೋಗಿಗಳಿಗೆ ಜಯಜಯಕಾರವು ಎಂದು ಜಯಜಯಕಾರವನ್ನು ಮಾಡಿದರು.

---

* ೪೭ ರಿಂದ ೫೨ ರ ವರೆಗಿನ ಶ್ಲೋಕಗಳು ಐದನೆಯ ಸರ್ಗದಿಂದ ಆಯ್ದುಕೊಳ್ಳಲ್ಪಟ್ಟಿವೆ.

*

**ಅಥ ಸಂಗಲಿಕಾಮಸೌ ಪುರೀ-**
**ಮಧಿರೂಢಾಗ್ರಿಮದಂತಿಘೋರಣಃ ।**
**ಧವಲಾಬ್ಜಗಭೀರಘುಂಘುಮ-**
**ಧ್ವನಿಸಂಭಿನ್ನದಿಗಂತರೋ ಯಯೌ ॥ ೫೩ ॥**

ನಂತರ, ಶ್ರೀವಿದ್ಯಾಧೀಶಯತಿಗಳು ದಿಗ್ವಿಜಯವನ್ನು ಆರಂಭಿಸಿ ಶ್ರೇಷ್ಠವಾದ ಮತ್ತು ವಿಶಾಲವಾದ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಎದುರಿಗೆ ದಿಗಂತ ವ್ಯಾಪಿಯಾದ ಶಂಖಧ್ವನಿಯು ಮೊಳಗುತ್ತಿದ್ದಂತೆ ಸಾಂಗಲೀ ನಗರಕ್ಕೆ ಹೋದರು.

**ಅಭಿಗಮ್ಯ ಪದಾಂಬುಜಾನತೈಃ**
**ಕೃತಿಭಿಃ ತತ್ರ ಯತೀಂದುರಂಜಿತಃ ।**
**ನಿಯಮಾದವಸತ್ ವರಾಶ್ರಮ-**
**ಪ್ರಥಮಂ ಮಾಸಚತುಷ್ಟಯಂ ಮುದಾ ॥ ೫೪ ॥**

ಸಾಂಗಲೀನಗರದ ವಿದ್ವಜ್ಜನರು ಹಾಗೂ ಸಜ್ಜನರು ಅವರನ್ನು ಎದುರುಗೊಂಡು ಸತ್ಕರಿಸಿದರು. ಶ್ರೀವಿದ್ಯಾಧೀಶರು ತಮ್ಮ ಆಶ್ರಮದ ನಂತರದ ಮೊದಲನೆಯ ಚಾತುರ್ಮಾಸ್ಯವನ್ನು ಅಲ್ಲಿಯೇ ಕಳೆದರು.

**ಕರವೀರಪುರೀಮಿತಸ್ತತೋ**
**ಮಘವನ್ಮುಖ್ಯಮರುದ್ಭಿರಾದೃತೇ ।**
**ಸ್ಫುಟಪಂಚಸರಿತ್ಸಮಾಗಮೇ**
**ಪಟುಧೀರಾಪ್ಲವಕರ್ಮ ನಿರ್ಮಮೇ ॥ ೫೫ ॥**

ಬಳಿಕ ಕರವೀರಪುರಕ್ಕೆ ಹೋಗಿ ಇಂದ್ರಾದಿದೇವತೆಗಳೂ ಶ್ಲಾಘಿಸುವಂಥ ಪಂಚನದಿಗಳ ಸಂಗಮಸ್ಥಾನದಲ್ಲಿ ಸ್ನಾನ ಮಾಡಿದರು.

**ಬಹುಪುಣ್ಯಸರಿತ್ಸು ಮಜ್ಜನಂ**
**ಕಲಯನ್ ಸಜ್ಜನಕಾಮಿತಾರ್ಥದಃ ।**
**ಕರಹಾಟಮಗಾತ್ ಸ ನೀವೃತಂ**
**ಶ್ರಿತಕೃಷ್ಣಾಸರಿದೂರ್ಮಿಮಾರುತಮ್ ॥ ೫೬ ॥**

ಸಜ್ಜನರ ಇಷ್ಟಾರ್ಥವನ್ನು ಪೂರೈಸುತ್ತಿದ್ದ ಶ್ರೀವಿದ್ಯಾಧೀಶರು ಅನೇಕ ಪುಣ್ಯನದಿಗಳಲ್ಲಿ ಸ್ನಾನಮಾಡುತ್ತ ಕೃಷ್ಣಾನದಿಯ ತರಂಗಗಳ ಮೇಲೆ ಹಾಯ್ದು ಬರುವ ಗಾಳಿಯಿದ್ದ ಕರಹಾಟದೇಶಕ್ಕೆ ಬಂದರು.

**ಕ್ವಚನೋಪನಿಷದ್ವಿಜೃಂಭಣೈಃ**
**ಕ್ವಚಿದಾಮ್ನಾಯಪದಕ್ರಮೇರಣೈಃ ।**
**ಕ್ವಚಿದೂರ್ಜಿತತರ್ಕವಿದ್ಯಯಾ**
**ಕುಹಚಿತ್ ಪಾಣಿನಿಸೂತ್ರಚರ್ಚಯಾ ॥ ೫೭ ॥**

ಕೆಲವು ಸ್ಥಳಗಳಲ್ಲಿ ಉಪನಿಷತ್ತುಗಳ ಮೇಲೆ ಉಪನ್ಯಾಸಮಾಡಿ, ಕೆಲವು ಸ್ಥಳಗಳಲ್ಲಿ ಪದ, ಕ್ರಮ, ಜಟಾ, ಘನಾಂತವಾಗಿ ವೇದಪಾರಾಯಣವನ್ನು ಮಾಡಿಸಿ, ಕೆಲವು ಸ್ಥಳಗಳಲ್ಲಿ ತರ್ಕಶಾಸ್ತ್ರದಲ್ಲಿಯ ಪ್ರೌಢಿಮೆಯನ್ನು ತೋರಿಸಿ, ಮತ್ತೆ ಕೆಲವು ಸ್ಥಳಗಳಲ್ಲಿ ಪಾಣಿನಿಯ ಸೂತ್ರಗಳನ್ನು ಚರ್ಚಿಸಿ ದಿಗ್ವಿಜಯ ವನ್ನು ಮುಂದುವರೆಸಿದರು.

**ಬೃಹದದ್ರಿಪುರೀಂ ಗರೀಯಸೀಂ**
**ಗುರುಣಾ ಸಾಕಮಥಾಯಮೇಯಿವಾನ್ ।**
**ನಿಗಮಾಗಮವಿದ್ಭಿರಂಚಿತಾ-**
**ಮಗಮತ್ ವೆಂಕಟನಾಥ ಸಂಸದಮ್ ॥ ೫೮ ॥**

ದಿಗ್ವಿಜಯವನ್ನು ಮುಗಿಸಿಕೊಂಡು ಬಂದ ಶ್ರೀವಿದ್ಯಾಧೀಶರು ತಮ್ಮ ಗುರುಗಳಾದ ಶ್ರೀ ವೇದವ್ಯಾಸತೀರ್ಥರೊಡನೆ ಬೃಹದದ್ರಿಪುರಿಗೆ (ಇಂದಿನ ಪೆನುಗೊಂಡಾಕ್ಕೆ) ಹೋದರು ಅಲ್ಲಿ ಶ್ರೀವಿದ್ಯಾಧೀಶರೂ ವೇದಶಾಸ್ತ್ರಪಾರಂ ಗತರಾದ ಪಂಡಿತರಿಂದ ಕೂಡಿದ ವೆಂಕಟಪತಿರಾಯನ ವಿದ್ವತ್ಸಭೆಗೆ ಬಹುಮಾನ ಪೂರ್ವಕವಾಗಿ ಆಮಂತ್ರಿತರಾಗಿ ಹೋದರು.

**ಧರಣೀಪರಿಣೀರಮುಷ್ಯಧೀ**
**ಸುಗುಣಗ್ರಾಮಸಮಗ್ರನಂದಥುಃ**
**ಸುಲಭೇಕ್ಷುರಸಾಲಶಾಲಿಕಾ-**
**ಚಣಕಾಂ ಗ್ರಾಮಚತುಷ್ಟಯೀಮದಾತ್ ॥ ೫೯ ॥**

ವೆಂಕಟಪತಿದೇವರಾಯನು ಶ್ರೀವಿದ್ಯಾಧೀಶಯತಿಗಳ ಪಾಂಡಿತ್ಯ ಸದ್ಗುಣ ಮತ್ತು ಪ್ರಭಾವಗಳಿಂದ ಪರಮಸಂತುಷ್ಟನಾಗಿ ಕಬ್ಬು, ಮಾವು, ಬತ್ತ ಮತ್ತು ಕಡಲೆಗಳು ವಿಪುಲವಾಗಿ ಬೆಳೆಯುವ ನಾಲ್ಕು ಗ್ರಾಮಗಳನ್ನು ಮಠಕ್ಕೆ ದತ್ತಿಯಾಗಿ ಕೊಟ್ಟನು.

**ಸ ದಿಶಂ ಗುರುಶಾಸನಾತ್ತತಃ**
**ಕಲಶೀನಂದನಕಲ್ಪಿತಾಶ್ರಯಾಮ್ ।**
**ಅಗಮತ್ ಪಥಿ ರಾಜಮಂಡಲೀ**
**ಮುಕುಟೀಲಾಲಿತಪಾದಪಂಕಜಃ ॥ ೬೦ ॥**

ಬಳಿಕ ಶ್ರೀವಿದ್ಯಾಧೀಶರು ಗುರುಗಳ ಅಪ್ಪಣೆಯಂತೆ, ಮಾರ್ಗದಲ್ಲಿ ಅನೇಕ ರಾಜರ ಸತ್ಕಾರವನ್ನು ಸ್ವೀಕರಿಸುತ್ತ ದಕ್ಷಿಣದಿಕ್ಕಿನಲ್ಲಿ ದಿಗ್ವಿಜಯ ಮಾಡ ತೊಡಗಿದರು.

**ಸಲಿಲಾಕರಸೇತುಮಾವ್ರಜನ್**
**ಕಪಿಸೇನಾಕರನೈಪುಣೀವದಮ್ ।**
**ವಿಹಿತಸ್ನಪನೋ ವಿಭುಃ ಸತಾ-**
**ಮನಮತ್ತತ್ರ ಚ ರಾಮನಾಮಕಮ್ ॥ ೬೧ ॥**

ವಾನರ ಸೈನಿಕರ ನೈಪುಣ್ಯದ ಸ್ಮಾರಕವಾದ ಸಮುದ್ರಸೇತುವಿಗೆ ಹೋಗಿ ಅಲ್ಲಿ ಸ್ನಾನಮಾಡಿ ಶ್ರೀರಾಮೇಶ್ವರನಿಗೆ ನಮಸ್ಕಾರ ಮಾಡಿದರು.

**ಪಥಿ ಪಾಂಡ್ಯಮಹೀಪತಿಂ ಶಿವಾ-**
**ಗಮನುರ್ಮಜ್ಞತಯಾ ದುರಾಗ್ರಹಮ್ ।**
**ಸ ಚರನ್ ಸುಚಿರಂ ಯದೃಚ್ಛಯಾ**
**ವೃತಪಾಷಂಡಗಣಂ ವ್ಯಲೋಕಯತ್ ॥ ೬೨ ॥**

ತಮ್ಮ ಸಂಚಾರಕ್ರಮದಲ್ಲಿ, ಅಕಸ್ಮಾತ್ತಾಗಿ ಒಮ್ಮೆ, ಪಾಷಂಡರಿಂದ ಕೂಡಿದ, ಸ್ವತಃ ತಾನು ಶಿವಾಗಮಗಳನ್ನು ಚೆನ್ನಾಗಿ ತಿಳಿದುಕೊಂಡಿರುವೆನೆಂಬ ಅಹಂಕಾರವಿರುವ ಪಾಂಡ್ಯರಾಜನನ್ನು (ಮಣಲೂರು ಎಂಬ ಗ್ರಾಮದ ಪಾಂಡ್ಯ ರಾಜನನ್ನು) ಶ್ರೀವಿದ್ಯಾಧೀಶರು ನೋಡಿದರು.

ನಿಜಪೂರ್ಣಸುಖೇತಿಪದ್ಯಗಂ
ಬಹುಧಾರ್ಥಶ್ರುತಿಸಿದ್ಧಮೀರಯನ್ ।
ಅತಿವಿಸ್ಮಿತಚೇತಸಸ್ತತೋಽ-
ಪ್ಯಭಜಚ್ಛಾಯಮನೂನಮಾನನಾಮ್ ॥ ೬೩ ॥

ದ್ವಾದಶಸ್ತೋತ್ರದಲ್ಲಿಯ 'ನಿಜಪೂರ್ಣಸುಖ' ಇತ್ಯಾದಿಯಾದ ಶ್ಲೋಕದ ಅರ್ಥವನ್ನು ಶ್ರುತಿಪ್ರಮಾಣಪ್ರಮಿತವಾಗಿ ಅನೇಕ ರೀತಿಯಿಂದ ವಿವರಿಸಿದ್ದನ್ನು ಕೇಳಿ ಆಶ್ಚರ್ಯಚಕಿತನಾದ ಅವನಿಂದಲೂ ಬಹಳ ಮರ್ಯಾದೆಯನ್ನು ಪಡೆದರು.

ಕೃತಭೂಮಿಭೃದಾಶ್ರಯಂ ಕ್ವಚಿತ್
ಪಥಿ ಕಾಲಜ್ಞಮಪಾರ್ಥಭಾಷಿಣಮ್ ।
ವರಮಾನಸಗೋಚರೈಃ ವಚೋ-
ವಿಭವೈರೇಷ ಜಿಗಾಯ ಹಂಸರಾಟ್ ॥ ೬೪ ॥

ತಮ್ಮ ಸಂಚಾರದಲ್ಲಿ ಇನ್ನೊಂದು ಕಡೆಗೆ ರಾಜಾಶ್ರಯವನ್ನು ಪಡೆದು ಅಪಾರ್ಥವಾಗಿ ಜ್ಯೋತಿಷ್ಯವನ್ನು ಹೇಳುತ್ತಿದ್ದ ಜ್ಯೋತಿಷಿಯನ್ನು 'ಲಘು-ಮಾನಸ' ಎಂಬ ಜ್ಯೋತಿಷ್ಯ ಗ್ರಂಥದಲ್ಲಿಯ ಶ್ಲೋಕಗಳನ್ನು ಉದಾಹರಿಸಿ ಖಂಡಿಸಿದರು.

ಅಖಿಲಾನ್ಯಮತಾಬ್ಧಿಮಂಥನಾತ್
ಜನಿತಾಂ ದಕ್ಷಿಣದಿಗ್ಜಯಶ್ರಿಯಮ್ ।
ಹರಯೇಽರ್ಪಯಿತುಂ ಕುತೂಹಲೀ
ಸ ಪುರಂ ರಾಜತಪೀಠಮಾಸದತ್ ॥ ೬೫ ॥

ಅನ್ಯಮತಗಳೆಂಬ ಸಮುದ್ರವನ್ನು ಮಥನಮಾಡಿ ಹೊರಗೆ ತೆಗೆದ ದಿಗ್ವಿಜಯಶ್ರೀಯನ್ನು ಶ್ರೀಹರಿಗೆ ಒಪ್ಪಿಸಬೇಕೆಂಬ ಕುತೂಹಲದಿಂದ ಶ್ರೀವಿದ್ಯಾ-ಧೀಶಯೋಗಿಗಳು ರಜತಪೀಠಪುರಕ್ಕೆ ತೆರಳಿದರು.

ತುಲಸೀದಲಕೋಟಿಭಿಃ ಮುದಾ
ಕಲಶೇ ಸಂಭೃತಪಾವನಾಂಬುಭಿಃ ।
ವಿಧಿವತ್ ಶುಚಿರೇಷ ವಿಗ್ರಹಂ
ಯತಿರಾಡರ್ಚಿಚದಚ್ಯುತಾಸ್ಪದಮ್ ॥ ೬೬ ॥

ಯತಿಶ್ರೇಷ್ಠರಾದ ಶ್ರೀವಿದ್ಯಾಧೀಶರು ಕಲಶಗಳಲ್ಲಿ ತುಂಬಿದ ಪವಿತ್ರವಾದ ಉದಕದಿಂದಲೂ ಕೋಟಿತುಲಸೀದಲಗಳಿಂದಲೂ ಶ್ರೀಕೃಷ್ಣನ ಪ್ರತಿಮೆಯನ್ನು ಅರ್ಚಿಸಿದರು.

ನಿಜಪೂಜನತುಷ್ಟನೀರಧಿ-
ಪ್ರಭವೇಶಾತ್ತಕೃಪಾಸ್ರಗಂಚಿತಃ ।
ಸ ತಪೋನಿಧಿರಾಡುಪೈತ್ತತಃ
ಪರಮಿಕ್ಕೇರಿರಿತೀರಿತಂ ಪುರಮ್ ॥ ೬೭ ॥

ತಮ್ಮ ಪೂಜೆಯಿಂದ ಸಂತುಷ್ಟನಾದ ಶ್ರೀಕೃಷ್ಣನ ಕೃಪಾಮಾಲಿಕೆಯಿಂದ ಭೂಷಿತರಾಗಿ ತಪಸ್ವಿಗಳಾದ ಶ್ರೀವಿದ್ಯಾಧೀಶಯತಿಗಳು ಇಕ್ಕೇರಿಯೆಂಬ ನಗರಕ್ಕೆ ಬಂದರು.

ಮಹಿಪೇನ ಸ ಮಾನಿತೋನ್ವಹಂ
ಶ್ರವಣಾಗಂತುಕಿತಾತ್ಮಕೀರ್ತಿನಾ ।
ಮುದಮಾರಚಯನ್ ಮನೀಷಿಣಾಂ
ನ್ಯವಸತ್ತತ್ರ ದಿನಾನಿ ಕಾನಿಚಿತ್ ॥ ೬೮ ॥

ತಮ್ಮ ಕೀರ್ತಿಯನ್ನು ಕೇಳಿ ಸಂತುಷ್ಟನಾದ ಇಕ್ಕೇರಿಯ ರಾಜನಿಂದ ಸನ್ಮಾನಿತರಾಗಿ ವಿದ್ವಜ್ಜನರಿಗೆ ಸಂತೋಷವನ್ನುಂಟುಮಾಡುತ್ತ ಶ್ರೀವಿದ್ಯಾಧೀಶರು ಕೆಲಕಾಲ ಇಕ್ಕೇರೀ ನಗರದಲ್ಲಿಯೇ ಇದ್ದರು.

ದನುಜೋಽವನಿದೇವವೇಷಭೃತ್
ಪ್ರಥಮಃ ಕಶ್ಚನ ವೇದವಿದ್ವಿಷಾಮ್ ।
ಅಜನಿಷ್ಟ ವಿಶಿಷ್ಟದೂಷಕೋ
ಭುವಿ ರಂಗೋಜಿರಿತಿ ಪ್ರತೀತಿಭಾಕ್ ॥ ೬೯ ॥

ಶ್ರುತಿಗಳಿಗೆ ಅಪಾರ್ಥವನ್ನು ಕಲ್ಪಿಸುವದರಲ್ಲಿ ಧುರೀಣನಾದ ಸಜ್ಜನ ದ್ವೇಷಿಯಾದ ರಂಗೋಜೀಭಟ್ಟನೆಂಬ ಮಾಯಾವಾದಿಯು ಆ ನಗರದಲ್ಲಿ ಇದ್ದನು.

**ಅಧಿಭಾಗವತಂ ಪ್ರಪಂಚಯ-**
**ತ್ಯಥನೋ ಶ್ರೀಧರವಾಕ್ಯಮಾರ್ಗಣಾನ್ ।**
**ವಿಜಯಧ್ವಜಪಂಚಿಕಾಸಿನಾ**
**ಮಹತಾ ಖಂಡಯದೇಷ ಮೌನಿರಾಟ್ ॥ ೭೦ ॥**

ಈ ರಂಗೋಜೀಭಟ್ಟನು ಭಾಗವತಕ್ಕೆ ಅದ್ವೈತಪರವ್ಯಾಖ್ಯಾನಕಾರನಾದ ಶ್ರೀಧರನ ವಾಕ್ಯಗಳೆಂಬ ಬಾಣಗಳನ್ನು ಬಿಡಲು ಶ್ರೀವಿದ್ಯಾಧೀಶರು ಶ್ರೀವಿಜಯ ಧ್ವಜತೀರ್ಥರ ವ್ಯಾಖ್ಯಾನವೆಂಬ ಖಡ್ಗದಿಂದ ಅವನ್ನು ತುಂಡರಿಸಿ ಹಾಕಿದರು.

**ಪುನರುದ್ಗಿರತಿ ಸ್ಫುರತ್ಪ್ರಭಾ-**
**ಕರಸಿದ್ಧಾಂತಮಹಾಸ್ತ್ರಮಲ್ಪಕೇ ।**
**ಸರಸಂ ಸ್ವಯಮಸ್ತ್ರಮಾದದೇ**
**ಯತಿರಾಜೋ ಘನತರ್ಕತಾಂಡವಮ್ ॥ ೭೧ ॥**

ಅಲ್ಪಜ್ಞನಾದ ಆ ರಂಗೋಜೀಭಟ್ಟನು ಪ್ರಭಾಕರಸಿದ್ಧಾಂತವೆಂಬ ಮಹಾಸ್ತ್ರವನ್ನು ಎಸೆಯಲು ಯತಿಶ್ರೇಷ್ಠರಾದ ಶ್ರೀವಿದ್ಯಾಧೀಶರು ಸರಸವಾದ ತರ್ಕತಾಂಡವವೆಂಬ ಅಸ್ತ್ರವನ್ನು ತೆಗೆದುಕೊಂಡರು.

**ಅಥ ಜಾತು ಖಲೇ ಪ್ರಯಾಗಭು-**
**ವ್ಯಪವರ್ಗೋಽಸುಮುಚಾಮಿತೀರಿಣಿ ।**
**ಅಪರೋಕ್ಷಚಿದೇವ ಹೇತುರಿ-**
**ತ್ಯವದತ್ ಸಂಸದಿ ತಂ ಸದಗ್ರಣೀಃ ॥ ೭೨ ॥**

ಇನ್ನೊಮ್ಮೆ ರಂಗೋಜೀಭಟ್ಟನು 'ಕೇವಲ ಪ್ರಯಾಗಮರಣದಿಂದಲೇ ಮೋಕ್ಷಪ್ರಾಪ್ತಿಯಾಗುವದು' ಎಂದು ವಾದಹೂಡಲು, ಶ್ರೀವಿದ್ಯಾಧೀಶರು 'ಅಪರೋಕ್ಷಜ್ಞಾನದಿಂದಲೇ ಮೋಕ್ಷಪ್ರಾಪ್ತಿಯು. ಪ್ರಯಾಗಮರಣವು ಪರಂಪರೆಯಿಂದ ನೆರವಾಗುವದು' ಎಂದು ಪ್ರತಿಪಾದಿಸಿ ಅವನನ್ನು ಸೋಲಿಸಿದರು.

ಇತಿ ತತ್ರ ಯತೀಂದ್ರಮಾಯಿನೋಃ
ಲಿಖಿತಾನ್ಯೋನ್ಯವಿಚಿತ್ರಪತ್ರಿಕಮ್ ।
ವ್ಯಗಲತ್ ಪ್ರಸಭಂ ವಿವಾದಿನೋ-
ರ್ಗತ ಮಾಸತ್ರಿತಯಂ ದಿನೋಪಮಮ್ ॥ ೭೩ ॥

ಹೀಗೆ ಪರಸ್ಪರರ ವಾದಗಳನ್ನು ಲಿಖಿತಗೊಳಿಸಲ್ಪಡುತ್ತ ವಾದಮಾಡುತ್ತಿದ್ದ ಶ್ರೀವಿದ್ಯಾಧೀಶರು ಮತ್ತು ರಂಗೋಜೀಭಟ್ಟರ ಮೂರು ತಿಂಗಳ ಕಾಲ ನಡೆದ ವಾದವು ಮೂರು ದಿನಗಳಂತೆ ಕಳೆದುಹೋಯಿತು.

ಇತ್ಥಂ ರಂಗಾಭಿಖ್ಯಮಾಖ್ಯಾತಕೀರ್ತಿಃ
ನಿರ್ಜಿತ್ಯ ದ್ರಾಕ್ ಸೌಗತ್ಯೈಃ ಬದ್ಧಸಖ್ಯಮ್ ।
ಪ್ರಾತರ್ಧನ್ಯೋಽಪೂಜಿ ರಾಜನ್ಯಮುಖ್ಯೈಃ
ಸಂಖ್ಯಾವದ್ಭಿಃ ಸೌಖ್ಯತೀರ್ಥಾರ್ಯಶಿಷ್ಯಃ ॥ ೭೪ ॥

ಹೀಗೆ ಬೌದ್ಧಮತದೊಡನೆ ಸಖ್ಯವಿರುವ ರಂಗೋಜೀಭಟ್ಟನನ್ನು ಜಯಿಸಿ ಕೀರ್ತಿಶಾಲಿಗಳಾದ ಶ್ರೀವಿದ್ಯಾಧೀಶರು ಇಕ್ಕೇರೀರಾಜನಿಂದಲೂ ಆ ನಗರದ ಎಲ್ಲ ಪಂಡಿತರಿಂದಲೂ ಪೂಜಿಸಲ್ಪಟ್ಟರು.

ಪುನರಪಿ ಕೃತಮುಂಗೀಗ್ರಾಮಗೂಢಪ್ರಚಾರಮ್
ನರಪತಿಭಟಕ್ಲೃಪ್ತಾಕರ್ಷಣಂ ಪಾದನಮ್ರಮ್ ।
ಯತಿಪತಿರನುಕಂಪಾಕ್ಲಿನ್ನಚಿತ್ತೋಽತ್ಯಜತ್ ತಮ್
ಸಪದಿ ಗಲಿತಮಾನಃ ಸೋಽಪಿ ತಂ ದೇಶಮೇವ ॥ ೭೫ ॥

ವಾದದಲ್ಲಿ ಪರಾಜಿತನಾಗಿ ಮುಂಗೀಗ್ರಾಮ ಎಂಬ ಊರಲ್ಲಿ ಅಡಗಿಕೊಂಡಿದ್ದ ರಂಗೋಜೀಭಟ್ಟನನ್ನು ರಾಜದೂತರು ಹಿಡಿದು ತಂದರು. ಅವನು ಯತಿಶ್ರೇಷ್ಠರಾದ ಶ್ರೀವಿದ್ಯಾಧೀಶರ ಪಾದಕ್ಕೆ ಎರಗಲು ದಯಾರ್ದ್ರಹೃದಯರಾದ ಅವರು ಅವನನ್ನು ಬಿಟ್ಟರು. ಅವನೂ ಆ ದೇಶವನ್ನೇ ಬಿಟ್ಟು ಹೋದನು.

**ವಾದೀಂದ್ರನಾಮ ಯತಿರೇತ್ಯ ದುರಾಗ್ರಹೇಣ**
**ತಂ ಜಾತು ಕಶ್ಚನ ಜಗದ್ಗುರುಸಾರ್ವಭೌಮಮ್ ।**
**ವಾದೇ ಜಿತಃ ಪ್ರಬಲಭೀತಿಹಯಾಧಿರೂಢಃ**
**ಸಾದೀಂದ್ರ ಏವ ಭವತಿ ಸ್ಮ ಪಲಾಯಮಾನಃ * || ೭೬ ||**

ವಾದೀಂದ್ರ ಎಂಬ ಅದ್ವೈತಯತಿಯು ದುರಾಗ್ರಹದಿಂದ ಶ್ರೀವಿದ್ಯಾಧೀಶರೊಡನೆ ವಾದಮಾಡಲು ಬಂದು ಪರಾಜಿತನಾದನು. ಇವನು ಪ್ರಬಲವಾದ ಭೀತಿಯೆಂಬ ಕುದುರೆಯನ್ನು ಏರಿ ಓಡಿಹೋದದ್ದರಿಂದ ವಾದೀಂದ್ರನು ಹೋಗಿ ಸಾದೀಂದ್ರ ಅಂದರೆ ಕುದುರೆಯ ಸವಾರನಾದನು.

**ತತಃ ಸಂಧ್ಯಾವಲೀ ನಾಮ ಗ್ರಾಮಮಾಪ ಯತೀಶ್ವರಃ**
**ರಥ್ಯಾಹೇಲದ್ಭೀಮರಥ್ಯಾಲೋಲಕಲ್ಲೋಲಮಾರುತಮ್ ||೭೭||**

ಬಳಿಕ, ಯತಿಶ್ರೇಷ್ಠರಾದ ಶ್ರೀವಿದ್ಯಾಧೀಶರು ಭೀಮರಥೀನದಿಯ ತರಂಗಗಳ ಮೇಲಿಂದ ಹಾಯ್ದು ಬರುವ ಗಾಳಿಯಿಂದ ಪವಿತ್ರವಾದ ಬೀದಿಗಳಿರುವ 'ಸಂಧ್ಯಾವಲೀ' ಎಂಬ ಗ್ರಾಮಕ್ಕೆ ಬಂದರು.

**ತತಸ್ತೇನ ಶ್ರುತಿಸ್ತೇನಗರ್ವಸರ್ವಸ್ವನಾಶಿನಾ ।**
**ಸಮಟೀಕಿ ಸುಧೀವಾಟೀರಮಣೀಯಂ ಮಣೀಪುರಮ್ ||೭೮||**

ಬಳಿಕ, ಶ್ರುತಿಗೆ ಅಪಾರ್ಥವನ್ನು ಕಲ್ಪಿಸುವವರ ಗರ್ವನಾಶಿಗಳಾದ ಶ್ರೀವಿದ್ಯಾಧೀಶರು ಬಹುವಿದ್ವಜ್ಜನರಿಂದ ರಮಣೀಯವಾದ ಮಣಿಪುರ ಎಂಬ ಗ್ರಾಮಕ್ಕೆ (ಇಂದಿನ ವಿಜಾಪುರ ಜಿಲ್ಲೆಯ ಮಣೂರು ಗ್ರಾಮಕ್ಕೆ) ತೆರಳಿದರು.

**ತತ್ರ ಛಾತ್ರಾಲಿಭಿಃ ಸತ್ರಾ ದ್ವಿತ್ರಾನ್ ಘಸ್ರಾನಯಂ ನಯನ್ ।**
**ಉರುಭೂಭೃತ್ಪುರೀಮರ್ಷೀತ್ ಪರಭೂಭೃದ್ದುರಾಸದಮ್ ||೭೯**

ಮಣಿಪುರದಲ್ಲಿ ಶಿಷ್ಯರೊಡನೆ ಎರಡು ಮೂರು ದಿನವಿದ್ದು ಶತ್ರುಗಳಿಂದ ಆಕ್ರಮಿಸಲು ಕಷ್ಟವಾದ ಉರುಭೂಭೃತ್‌ಪುರಿಗೆ (ಪೆನುಗೊಂಡಾ ನಗರಕ್ಕೆ) ಬಂದರು.

---

* ೫೩ ರಿಂದ ೭೬ ರ ವರೆಗಿನ ಶ್ಲೋಕಗಳು ಆರನೆಯ ಸರ್ಗದಿಂದ ಎತ್ತಿಕೊಳ್ಳಲ್ಪಟ್ಟವೆ.

ಪರಸ್ಪರೋತ್ಕಂಠವಮಾನಮನಸೋಃ ಪ್ರಸಮೀಕ್ಷಣೇ ।
ತಯೋಃ ಸಮೇತಯೋರಾಸೀತ್ ತತ್ಕ್ಷಣೋ
ಮಹಿತಕ್ಷಣಃ ॥ ೮೦ ॥

ಪರಸ್ಪರರ ದರ್ಶನಕ್ಕೆ ಉತ್ಕಂಠಿತರಾದ ಗುರುಶಿಷ್ಯರಾದ ಶ್ರೀವೇದವ್ಯಾಸ ತೀರ್ಥ ಮತ್ತು ಶ್ರೀವಿದ್ಯಾಧೀಶತೀರ್ಥರ ಪರಸ್ಪರ ಸಮಾಗಮದ ಆ ಕ್ಷಣವು ಪರಮಸಂಭ್ರಮದ ಕ್ಷಣವಾಗಿತ್ತು.

ಚೈತ್ರಕಾರ್ಜುನಪಕ್ಷೀಯ ದ್ವಿತೀಯಾಯಾಂ ಪದಾಂಬುಜಮ್ ।
ಹಾರ್ಷೀಕೇಶಮಸಾವಾರ್ಷೀತ್ ವೇದವ್ಯಾಸಗುರೂತ್ತಮಃ ॥೮೧

ಮುಂದೆ ಕೆಲಕಾಲವಾದ ನೇಲೆ ಚೈತ್ರಶುಕ್ಲದ್ವಿತೀಯಾದ ದಿನ ಶ್ರೀವೇದ ವ್ಯಾಸತೀರ್ಥರು ಹೃಷೀಕೇಶನ ಪಾದಕಮಲಗಳನ್ನು ಸೇರಿ ವೃಂದಾವನಸ್ಥ ರಾದರು.

ವಿಮನಾಃ ಸ ಮನಾಗ್ ಭೂಯೋ ಬೋಧಲಬ್ಧಧೃತಿಸ್ತದಾ ।
ತುರ್ಯಾಶ್ರಮೋಚಿತಂ ತಸ್ಯ ಕಾರ್ಯಮಾರ್ಯೈ-
ರಚೀಕರತ್ ॥ ೮೨ ॥

ಗುರುಗಳ ವಿರಹದಿಂದ ಮೊದಲು ತುಸು ಖಿನ್ನರಾದರೂ ಜ್ಞಾನಿಗಳಾದ ಅವರು ಧೈರ್ಯವನ್ನು ತಂದುಕೊಂಡು ಚತುರ್ಥಾಶ್ರಮಯೋಗ್ಯವಾದ ರೀತಿ ಯಲ್ಲಿ ಗುರುಗಳ ವೃಂದಾವನ ಸ್ಥಾಪನೆ ಸಮಾರಾಧನೆ ಇತ್ಯಾದಿ ಕಾರ್ಯ ಗಳನ್ನು ನೆರವೇರಿಸಿದರು.

ಸ್ವರ್ಣಾನಿ ಷಟ್‌ದ್ವಾದಶಾಷ್ಟೌ ತನ್ಮುಖಾಬ್ಜಾತ್
ದ್ವಿಜೋತ್ತಮಾಃ ।
ಪರಂ ನ ಪ್ರಾಪುರೇಕೈಕೇ ತತ್ಕರಾಂಭೋರುಹಾದಪಿ ॥ ೮೩ ॥

ಸಮಾರಾಧನೆಗೆ ಬಂದ ವಿಪ್ರಶ್ರೇಷ್ಠರು ಶ್ರೀವಿದ್ಯಾಧೀಶಯತಿಗಳ ಮುಖ ಕಮಲದಿಂದ ಷಡಕ್ಷರ ಅಷ್ಟಾಕ್ಷರ ಮತ್ತು ದ್ವಾದಶಾಕ್ಷರ ಮಂತ್ರಗಳ ಉಪದೇಶ ವನ್ನು ಪಡೆದದ್ದಲ್ಲದೆ ಅವರವರ ಪಾಂಡಿತ್ಯಕ್ಕೆ ತಕ್ಕಂತೆ ಆರು ಎಂಟು ಮತ್ತು

ಹನ್ನೆರಡು ಸುವರ್ಣನಾಣ್ಯಗಳ ದಕ್ಷಿಣೆಯನ್ನೂ ಅವರ ಕರಕಮಲಗಳಿಂದ ಪಡೆದರು.

**ಅಯಂ ಸಹಸ್ರದೀನಾರಾನ್ ಪಂಚ ಪಂಚಾಯುಧಪ್ರಿಯಃ ।**
**ಪ್ರಾದಾತ್ ಮೋದಾತ್ ದ್ವಿಜಾತಿಭ್ಯಃ ದಿಙ್ಮುಖೇಭ್ಯಃ**
**ಅಮಿತಂ ಯಶಃ ॥ ೮೪ ॥**

ಶ್ರೀವಿದ್ಯಾಧೀಶರು ಸಮಾರಾಧನೆಗೆ ಎಲ್ಲ ದಿಕ್ಕುಗಳಿಂದಲೂ ಬಂದ ಬ್ರಾಹ್ಮಣರಿಗೆ ಐದು ಸಾವಿರ ದೀನಾರಗಳ ದಕ್ಷಿಣೆಯನ್ನು ಕೊಟ್ಟರು. ಎಲ್ಲ ದಿಕ್ಕುಗಳಿಗೆ ತಮ್ಮ ಕೀರ್ತಿಯನ್ನೂ ಕೊಟ್ಟರು.

**ದ್ವಿತ್ರಾನಸೌ ವಸನ್ ಮಾಸಾನ್ ತತ್ರಾನೇಕಬುಧಾವೃತಃ ।**
**ಶ್ರೀಜಾನೇರಕರೋದ್ ಭಕ್ತ್ಯಾ ಪೂಜಾಮಾಜಾನಪಾವನಃ॥೮೫॥**

ಮುಂದೆ ಪೆನುಗೊಂಡೆಯಲ್ಲಿ ಎರಡು ಮೂರು ತಿಂಗಳುಕಾಲ ಅನೇಕ ವಿಪ್ರಶ್ರೇಷ್ಠರೊಡನೆ ವಾಸವಾಗಿದ್ದು ಭಕ್ತಿಪೂರ್ವಕವಾಗಿ ಪರಮಾತ್ಮನ ಪೂಜೆಯನ್ನು ಮಾಡಿದರು.

**ಯತೀಂದೋಃ ಪ್ರಾಗಗ್ರಜನ್ಮತನಯೋ ವಿನಯೋಜ್ಜ್ವಲಃ ।**
**ಕೇಶವಾಚಾರ್ಯ ನಾಮಾಭೂತ್ ಶ್ರೀಶಾರಾಧನತತ್ಪರಃ ॥೮೬॥**

ಯತಿಶ್ರೇಷ್ಠರಾದ ಶ್ರೀವಿದ್ಯಾಧೀಶರ ಪೂರ್ವಾಶ್ರಮದ ದೊಡ್ಡಪ್ಪನ ಮಕ್ಕಳಾದ ವಿನಯಶೀಲರಾದ ಪರಮಾತ್ಮನ ಸೇವೆಯಲ್ಲಿ ತತ್ಪರರಾದ ಕೇಶವಾಚಾರ್ಯರು ಎಂಬವರಿದ್ದರು. (ಶ್ರೀವಿದ್ಯಾಧೀಶರ ಪೂರ್ವಾಶ್ರಮದ ತಂದೆಯವರು ಆನಂದಭಟ್ಟರು ಅವರ ಅಣ್ಣಂದಿರು ತಿಮ್ಮಣ್ಣಭಟ್ಟರು. ಈ ತಿಮ್ಮಣ್ಣಭಟ್ಟರ ಮಕ್ಕಳೇ ಕೇಶವಾಚಾರ್ಯರು. ಇವರೇ ಮುಂದೆ ಗುರುರಾಜರೆಂದು ಪ್ರಸಿದ್ಧರಾದರು.)

**ತದಾಸಾವಮಾನ್ಯಕಾರುಣ್ಯಪಾತ್ರಂ ಚಿತ್ರಚರಿತ್ರಭೂಃ ।**
**ವಿಜ್ಞಾತಾಖಿಲಶಾಸ್ತ್ರಾರ್ಥಃ ಪ್ರಜ್ಞಾವನ್ಮೌಲಿಭೂಷಣಮ್ ॥೮೭॥**

ಈ ಕೇಶವಾಚಾರ್ಯರು ಶ್ರೀವಿದ್ಯಾಧೀಶರ ಅಸಾಧಾರಣಕಾರುಣ್ಯಕ್ಕೆ ಪಾತ್ರರಾಗಿದ್ದರು. ಅದ್ಭುತ ಕಾರ್ಯಶಾಲಿಗಳಾಗಿದ್ದರು. ಸಕಲಶಾಸ್ತ್ರವನ್ನು

ಬಲ್ಲವರಾಗಿದ್ದರು. ವಿದ್ವಾಂಸರಲ್ಲಿ ಶಿರೋರತ್ನಪ್ರಾಯರಾಗಿದ್ದರು. (ಇವರೇ ಮುಂದೆ ಶೇಷವಾಕ್ಯಾರ್ಥಚಂದ್ರಿಕಾ ಇತ್ಯಾದಿ ಅನೇಕ ಗ್ರಂಥಗಳನ್ನು ಬರೆದರು. ಇವರು ತಮ್ಮ ಗ್ರಂಥಗಳಲ್ಲೆಲ್ಲ 'ಗುರುರಾಜೋಕ್ತಮಾರ್ಗತಃ' ಗುರುಶ್ರೇಷ್ಠ ರಾದ ಶ್ರೀವಿದ್ಯಾಧೀಶರು ಉಪದೇಶಿಸಿದ ಮಾರ್ಗವನ್ನನುಸರಿಸಿ ಎಂದು ಹೇಳಿದ್ದ ರಿಂದ ಇವರ ಟಿಪ್ಪಣೀ ಗ್ರಂಥಗಳಿಗೆ 'ಗುರುರಾಜೀಯ' ಎಂಬ ಹೆಸರು ಪ್ರಚಲಿತ ವಾಗಿ, ಮುಂದೆ ಇವರಿಗೇ ಗುರುರಾಜರು ಎಂಬ ಹೆಸರು ರೂಢಿಯಲ್ಲಿ ಬಂದಿತು.)

**ಸ್ತಾವಂ ಸ್ತಾವಮಿತಿ ಪ್ರೇಮ್ಣಾ ಸ್ಮಾರಂ ಸ್ಮಾರಂ ಗುರುಂ ಸ್ವಕಮ್ ।**
**ಸುಧಿಯಾ ನಂದಿತಸ್ತೇನ ರೌಪ್ಯಪೀಠಮಥಾಗಮತ್ ॥ ೪೮ ॥**

ಶ್ರೀವಿದ್ಯಾಧೀಶರು ತಮ್ಮ ಗುರುಗಳ ಮಹಿಮೆಯನ್ನು ಶ್ರೀ ಕೇಶವಾ-ಚಾರ್ಯರ ಮುಂದೆ ಅನೇಕರೀತಿಯಿಂದ ಹೊಗಳಿದರು ಮತ್ತು ಸ್ಮರಿಸಿ ಕೊಂಡರು. ಬಳಿಕ ಕೇಶವಾಚಾರ್ಯರಿಂದ ಅನುಮೋದಿತರಾಗಿ ರಜತಪೀಠಪುರಕ್ಕೆ (ಉಡುಪಿಗೆ) ತೆರಳಿದರು.

**ತತ್ರ ಶ್ರೀಕೃಷ್ಣಸೇವಾಯಾಂ ನಿಷ್ಣಾತಧಿಷಣೋ ಯತಿಃ ।**
**ಅವಸಚ್ಚತುರೋ ಮಾಸಾನ್ ಚತುರೋ ಮತರಕ್ಷಣೇ ॥ ೪೯ ॥**

ಶ್ರೀಕೃಷ್ಣನ ಸೇವೆಯಲ್ಲಿಯೂ ಮಧ್ವಮತದ ರಕ್ಷಣೆಯಲ್ಲಿಯೂ ನಿಪುಣರಾದ ಶ್ರೀವಿದ್ಯಾಧೀಶರು ರಜತಪೀಠಪುರದಲ್ಲಿ ನಾಲ್ಕು ಮಾಸಗಳನ್ನು ಕಳೆದರು. (ಈಗ ಉಡುಪಿಯಲ್ಲಿರುವ ಶ್ರೀ ಉತ್ತರಾದಿಮಠವನ್ನು ಶ್ರೀವಿದ್ಯಾ-ಧೀಶರೇ ಈ ನಾಲ್ಕು ತಿಂಗಳ ಕಾಲ ಇದ್ದಾಗ ಕಟ್ಟಿಸಿದರು. ಶ್ರೀವಾದಿರಾಜರ ಕಾಲದವರೆಗೆ ಅಷ್ಟಮಠದ ಯತಿಗಳು ಶ್ರೀಕೃಷ್ಣನುಂದಿರದಲ್ಲಿರುವ ಕೋಣೆ ಗಳಲ್ಲಿಯೇ ಇರುತ್ತಿದ್ದರು. ಒಂದೂವರೆ ತಿಂಗಳಿಗೊಮ್ಮೆ ಪರ್ಯಾಯ ಮಾಡು ತ್ತಿದ್ದರು. ಶ್ರೀವಾದಿರಾಜರು ಶ್ರೀಕೃಷ್ಣಮಂದಿರದ ಹೊರಗೆ ಈಗಿರುವ ಅಷ್ಟಮಠಗಳನ್ನು ಕಟ್ಟಿಸುವ ಏರ್ಪಾಡು ಮಾಡಿದರು. ಇದಾದ ಕೆಲ ವರ್ಷ ಗಳಲ್ಲಿಯೇ ಉಡುಪಿಗೆ ಹೋದ ಶ್ರೀವಿದ್ಯಾಧೀಶರು ಈಗಿರುವ ಉತ್ತರಾದಿಮಠ ವನ್ನು ಕಟ್ಟಿಸಿದರು. ನಂತರ ಶ್ರೀಸತ್ಯಸಂಧರ ಕಾಲದಲ್ಲಿ ಇದರ ಜೀರ್ಣೋದ್ಧಾರ ವಾಯಿತು.)

**ತೇವನೇನ ಚರಾಮೀತಿ ಸಂಕಲ್ಪ್ಯ ಪ್ರೀತಯೇ ಹರೇಃ ।**
**ತತ್ಯಾಜ ತತ್ರ ಶಿಬಿಕಾಂ ಚಾಮರೇ ಚಾಮರೇಡಿತಃ ॥ ೯೦ ॥**

'ಇನ್ನುಮೇಲೆ ಪಾದಚಾರಿಯಾಗಿಯೇ ಇರುವೆನು' ಎಂದು ಸಂಕಲ್ಪ ಮಾಡಿ ಶ್ರೀಕೃಷ್ಣನ ಪ್ರೀತ್ಯರ್ಥವಾಗಿ ಶ್ರೀವಿದ್ಯಾಧೀಶರು ಪಲ್ಲಕ್ಕಿಯನ್ನೂ ಚಾಮರಗಳನ್ನೂ ಬಿಟ್ಟುಬಿಟ್ಟರು.

**ಪೀತವಾಸೋಭೃತಂ ದೇವಮವಲಂಬ್ಯ ಸದಾ ಹೃದಿ ।**
**ವಿನಾಲಮಲ್ಲಕಾದನ್ಯದ್ವಾಸೋ ನಾಧತ್ತ ವಿತ್ತಮಃ ॥ ೯೧ ॥**

ಪೀತಾಂಬರಧಾರಿಯಾದ ಶ್ರೀಕೃಷ್ಣನನ್ನು ಯಾವಾಗಲೂ ಹೃದಯದಲ್ಲಿ ಧ್ಯಾನಿಸುತ್ತ 'ಕೌಪೀನ'ವನ್ನು ಬಿಟ್ಟು ಇನ್ನುಳಿದ ವಸ್ತ್ರಗಳನ್ನು ಧರಿಸುವದನ್ನು ಬಿಟ್ಟುಬಿಟ್ಟರು.

**ಮಠೀಯವಿದುಷಾಂ ಸ್ಥಾನೇ ಪೃಥಕ್‌ಪಾಕಕೃತಾಮಸೌ ।**
**ದ್ವಿತ್ರಾಣಾಮಚರತ್ ಭಿಕ್ಷಾಂ ಶಿಕ್ಷಾಕೃದ್ಯತಿನಾಮಿವ ॥ ೯೨ ॥**

ಯತಿಗಳಿಗೂ ಯತಿಚರ್ಯೆಯನ್ನು ತಿಳಿಸಿಕೊಡುವಷ್ಟು ದೃಢವ್ರತರಾದ ಶ್ರೀವಿದ್ಯಾಧೀಶಯತಿಗಳು ಸ್ವಯಂಪಾಕಿಗಳಾದ ಇಬ್ಬರು ಮೂವರು ಮಠದ ವಿದ್ವಾಂಸರಲ್ಲಿ ಭಿಕ್ಷಾವೃತ್ತಿಯನ್ನು ಮಾಡುತ್ತಿದ್ದರು.

**ಹರಿಪಾದಾರ್ಪಿತೈಃ ನಿತ್ಯಂ ತುಲಸೀದಲಮಾತ್ರಕೈಃ ।**
**ಉಪದಂಶವದಂಧಾಶ್ನನ್ನಿಂಧೇ ಸ್ಮ ಯತಿಸಿಂಧುರಃ ॥ ೯೩ ॥**

ಘೃತ ಸೂಪ ಶಾಕಾದಿ ಉಪದಂಶಗಳನ್ನು ತ್ಯಜಿಸಿ ಶ್ರೀಕೃಷ್ಣನ ಪಾದಗಳಲ್ಲಿ ಅರ್ಪಿತವಾದ ತುಲಸೀದಲಗಳನ್ನು ಮಾತ್ರ ಉಪದಂಶವನ್ನಾಗಿ ಸ್ವೀಕರಿಸುತ್ತಿದ್ದರು. ಯತಿಶ್ರೇಷ್ಠರು ಕಾಂತಿಯುಕ್ತರಾಗಿ ಕಾಣುತ್ತಿದ್ದರು.

**ಪ್ರತಿಸಂಧ್ಯಂ ವ್ಯಧಾತ್ ವಿಷ್ಣೋಃ ಅಷ್ಟೋತ್ತರಶತಂ ನತೀಃ ।**
**ತತೋಽಪಿ ದ್ವಿಗುಣೀಭೂತ ಪ್ರದಕ್ಷಿಣ ಪುರಸ್ಸರಮ್ ॥ ೯೪ ॥**

ಪ್ರತಿ ಸಾಯಂಕಾಲವೂ ಶ್ರೀಕೃಷ್ಣನಿಗೆ ನೂರಎಂಟು ನಮಸ್ಕಾರಗಳನ್ನೂ ಅದರ ಎರಡರಷ್ಟು ಪ್ರದಕ್ಷಿಣೆಗಳನ್ನೂ ಹಾಕುತ್ತಿದ್ದರು.

ಸ ಸುಧಾವಿವೃತಿಂ ತೇನೇ ವಸುಧಾವಲಯೇಽದ್ಭುತಾಮ್ ।
ನ ಸುಧಾಮಪ್ಯಾದ್ರಿಯಂತೇ ಸಂತೋ ಯತ್ಪಾನ-
ನಿರ್ವೃತಾಃ ॥ ೯೫ ॥

ಶ್ರೀವಿದ್ಯಾಧೀಶಯತಿಗಳು 'ನ್ಯಾಯಸುಧಾ' ಗ್ರಂಥಕ್ಕೆ 'ವಾಕ್ಯಾರ್ಥ ಚಂದ್ರಿಕಾ' ಎಂಬ ಅಪೂರ್ವವಾದ ಟಿಪ್ಪಣಿಯನ್ನು ಬರೆದರು. ಈ ಟಿಪ್ಪಣಿ ಯನ್ನು ಓದಿ ಸಂತುಷ್ಟರಾದ ಸಜ್ಜನರು ಅಮೃತವನ್ನೂ ಅಲಕ್ಷಿಸುವಂತಾ ಯಿತು. (ಶ್ರೀವಿದ್ಯಾಧೀಶರ ಈ ವಾಕ್ಯಾರ್ಥಚಂದ್ರಿಕಾ ಟಿಪ್ಪಣಿಯು ನ್ಯಾಯ ಸುಧಾದ ಮೊದಲಿನ ಐದು ಅಧಿಕರಣಗಳಿಗೆ ಮಾತ್ರವಿದೆ. ಶ್ರೀವಿದ್ಯಾಧೀಶರ ಅಪ್ಪಣೆಯಂತೆಯೇ ಅವರ ತಮ್ಮಂದಿರಾದ ಕೇಶವಾಚಾರ್ಯರು (ಗುರುರಾಜರು) ಮುಂದಿನ ಭಾಗಕ್ಕೆ ಶೇಷವಾಕ್ಯಾರ್ಥಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆದಿ ದ್ದಾರೆ. ಇವರು ಸುಧಾ ವಾಕ್ಯಾರ್ಥವಿನೋದ ಎಂಬ ಇನ್ನೊಂದು ಟಿಪ್ಪಣಿ ಯನ್ನೂ ಬರೆದಿದ್ದಾರೆ. ಇವೆರಡೂ ಟಿಪ್ಪಣಿಗಳ ಮೇಲೆ ಗುರುರಾಜರ ಮಕ್ಕಳಾದ ಪಾಂಡುರಂಗಿ ನರಸಿಂಹಾಚಾರ್ಯರು ವಾಕ್ಯಾರ್ಥರತ್ನಮಾಲಾ ಎಂಬ ಟಿಪ್ಪಣಿ ಯನ್ನು ಬರೆದಿದ್ದಾರೆ.)

ನಿರ್ವಿಶೇಷಂ ಗುಣೈಃ ಸ್ವೀಯೈಃ ವೇದನಿಧ್ಯಾಖ್ಯಯೋಗಿನಮ್ ।
ಪ್ರಾಹಿಣೋತ್ ದಿಕ್ಷು ಲಕ್ಷ್ಮೀಶದ್ವೇಷಿಣೋ
ಜೇತುಮುನ್ಮನಾಃ ॥ ೯೬ ॥

ತಾವು ತೀರ್ಥಯಾತ್ರೆಯನ್ನು ಕೈಕೊಳ್ಳಬೇಕೆಂದು ಆಲೋಚಿಸಿ ತಮ್ಮಷ್ಟೇ ಗುಣವುಳ್ಳವರೂ ವಿದ್ವಾಂಸರೂ ಆದ ವೇದನಿಧಿತೀರ್ಥರೆಂಬ ತಮ್ಮ ಶಿಷ್ಯರನ್ನು ನಾರಾಯಣದ್ವೇಷಿಗಳನ್ನು ಜಯಿಸಲು ದಿಗ್ವಿಜಯಕ್ಕಾಗಿ ಕಳಿಸಿ ಕೊಟ್ಟರು.

ತತಃ ಸ್ವಯಂ ನಾಸಿಕಾದ್ಯತ್ರ್ಯಂಬಕಾಚಲಮೇಯಿವಾನ್ ।
ಯತ್ರ ಗೋದಾತಟಿನ್ಯಾಸೀತ್ ಜಟಾಟೀರಜಟೋದಿತಾ ॥೯೭॥

ಬಳಿಕ, ತಾವು ಗೋದಾವರಿಯು ಉಗಮಸ್ಥಾನವಾದ ನಾಸಿಕತ್ರ್ಯಂಬಕ ಗಿರಿಗೆ ಬಂದರು. ಆಗ ಗೋದಾವರಿಗೆ ಭಾಗೀರಥಿಯು ಬಂದಿದ್ದಳು.

**ಪ್ರದಕ್ಷಿಣೀಚಕಾರಾಸೌ ತಾಮುತಾಮುಸವೃತ್ತಿಭಿಃ ।**
**ಸುಧೀಭಿಃ ಶತಸಂಖ್ಯಾಕೈಃ ಸತ್ರಾ ವಿತ್ರಾಸಯನ್ ಖಲಾನ್ ॥೯೮**

ನೂರುಜನ ಸಾತ್ವಿಕದ್ವಿಜಶ್ರೇಷ್ಠರಿಂದ ಕೂಡಿಕೊಂಡು ಮಾರ್ಗದಲ್ಲಿಯ ದುರ್ಜನರನ್ನು ಶಿಕ್ಷಿಸುತ್ತ ಶ್ರೀವಿದ್ಯಾಧೀಶಯತಿಗಳು ಗೋದಾವರಿಯ ಪ್ರದಕ್ಷಿಣೆಯನ್ನು ಆರಂಭಿಸಿದರು.

**ಅಂಸೇ ವಹನ್ ರಘೂತ್ತಂಸ ಪ್ರತಿಮಾಮತಿಮಾನುಷಃ ।**
**ವಿನತಾನಂದನೋ ರೇಜೇ ಚರಿತ್ರ್ಯೈಃ ಪಕ್ಷಿರಾಡಿವ ॥ ೯೯ ॥**

ಅತಿಮಾನುಷಚರಿತರಾದ ಮತ್ತು ಪ್ರಣತರಾದವರಿಗೆ ಆನಂದಕೊಡುವ ಯತಿಶ್ರೇಷ್ಠರಾದ ಶ್ರೀವಿದ್ಯಾಧೀಶರು ಶ್ರೀ ಮೂಲರಾಮದೇವರ ಪೆಟ್ಟಿಗೆಯನ್ನು ಹೆಗಲಮೇಲೆ ಹೊತ್ತುಕೊಂಡು ಶ್ರೀವಿಷ್ಣುವಿನ ವಾಹನವಾದ ಗರುಡನಂತೆ ಶೋಭಿಸಿದರು.

**ವಿದ್ರಾವ್ಯ ಯತಿಸಿಂಹೋಽನ್ಯಕ್ಷುದ್ರಾನೇಕಪಯೂಥಪಾನ್ ।**
**ಭದ್ರಾಚಲಮಿತೋ ರಾಮಭದ್ರಾಯ ನತಿಮಾತನೋತ್ ॥೧೦೦**

ಯತಿಸಿಂಹರು ಮಾರ್ಗದಲ್ಲಿ ಕ್ಷುದ್ರರಾದ ಪರವಾದಿಗಳೆಂಬ ಗಜಗಳನ್ನು ಓಡಿಸುತ್ತ ಭದ್ರಾಚಲವನ್ನು ಮುಟ್ಟಿ ಅಲ್ಲಿಯ ಶ್ರೀರಾಮಚಂದ್ರನಿಗೆ ನಮಸ್ಕಾರ ಮಾಡಿದರು.

**ಕೋನಸೀಮಾಮಸೌ ಪ್ರಾಪ ಮಾನಸೀ ಮಾಪತೇರಿವ ।**
**ವಿಭಾತಿ ಸೃಷ್ಟಿರ್ಯಾ ವಿದ್ವತ್ಸಭಾತಿಶಯಶೋಭಿತಾ ॥ ೧೦೧ ॥**

ಬಳಿಕ, ಲಕ್ಷ್ಮೀಪತಿಯ ಮಾನಸಸೃಷ್ಟಿಯಂತಿದ್ದ ವಿದ್ವತ್ಸಭೆಗಳಿಂದ ಶೋಭಿತವಾದ ಕೋನಸೀಮಾಪ್ರದೇಶಕ್ಕೆ ಹೋದರು.

**ಸೋಂತರ್ವೇದಿಮಗಾದಂತರ್ವಾಣಿ ಶ್ರೇಣಿಭಿರಾವೃತಃ ।**
**ವಾಸಿಷ್ಠಗೋದಾಸ್ಸಪ್ರೇಷ್ಠ ಸಂಗಸಾಂಕೇತಿಕಸ್ಥಲೀಮ್॥೧೦೨॥**

ಶಾಸ್ತ್ರಜ್ಞರಿಂದ ಪರಿವೃತರಾದ ಶ್ರೀವಿದ್ಯಾಧೀಶರು ಗೋದಾವರೀ ಮತ್ತು ಸಮುದ್ರಗಳ ಸಂಗಮಸ್ಥಾನದ ಹತ್ತಿರವಿದ್ದ 'ಅಂತರ್ವೇದಿ' ಎಂಬ ಶ್ರೀನರಸಿಂಹ ಕ್ಷೇತ್ರವನ್ನು ತಲುಪಿದರು.

**ಲವಣೋದಕಕಚ್ಛೇಷು ಯಾನ್ಯಂಬೂನಿ ನಿಸರ್ಗತಃ ।**
**ಕೀಟಾನ್ಯಪಿ ಸ್ವದಂತೇಸ್ಮ ಮಹಿಮ್ನೈವ ಯತೀಶತುಃ ॥ ೧೦೩ ॥**

ಸಮುದ್ರತೀರದ ಆ ಪ್ರದೇಶದಲ್ಲಿ ಉಪ್ಪುನೀರಿನ ಸ್ಥಳವಲ್ಲಿ ಶ್ರೀವಿದ್ಯಾಧೀಶ ಯತಿವರ್ಯರ ಮಹಿಮೆಯಿಂದ ಸಿಹಿನೀರು ದೊರೆತವು.

**ನಿರೀಯ ಸ ಗರೀಯಸ್ಯಾಃ ಗೋದಾಯಾಃ ಸಪ್ತಧಾಂಬುಧಿಮ್ ।**
**ಪ್ರವಿಶಂತ್ಯಾಃ ತತಸ್ತೇನೇ ಪಾರಕಾಂಕ್ಷೀ ಪ್ರದಕ್ಷಿಣಮ್ ॥೧೦೪॥**

ತಪಸ್ವಿಶ್ರೇಷ್ಠರಾದ ಯತಿಗಳು ಅಂತರ್ವೇದಿಯಿಂದ ಹೊರಟು ಸಪ್ತಮುಖವಾಗಿ ಸಮುದ್ರವನ್ನು ಸೇರುವ ಗೋದಾವರಿಯ ಪ್ರದಕ್ಷಿಣೆಯನ್ನು ಮಾಡಿದರು.

**ಆಗತ್ಯ ಧರ್ಮನಗರೀಂ ನೃಹರೀಂದ್ರಮುಚ್ಚೈ-**
**ರಾನಮ್ಯ ಸಮ್ಯಗಧಿಗತ್ಯ ಕೃಪಾಂ ತದೀಯಾಮ್ ।**
**ಸ ತ್ರ್ಯಂಬಕಾಚಲಮವಾಪ ಭವಾಪಹೋದ್ಯ-**
**ದ್ವಿಜ್ಞಾನಶೇವಧಿತೃಣೀಕೃತಲೌಕಿಕಾರ್ಥಃ ॥ ೧೦೫ ॥**

ಬಳಿಕ, ತಮ್ಮ ಭವವಿಮೋಚಕಜ್ಞಾನಬಲದಿಂದ ಲೌಕಿಕ ವಿಷಯಗಳನ್ನು ತೃಣಪ್ರಾಯವಾಗಿ ಭಾವಿಸಿದ ಯತಿಶ್ರೇಷ್ಠರು ಪವಿತ್ರಕ್ಷೇತ್ರವಾದ ಧರ್ಮಪುರಿಗೆ ಬಂದು ಶ್ರೀನರಸಿಂಹದೇವರ ಅನುಗ್ರಹವನ್ನು ಸಂಪಾದಿಸಿ ತ್ರ್ಯಂಬಕಾಚಲಕ್ಕೆ ತಿರುಗಿ ಬಂದು ತಮ್ಮ ಗೋದಾವರೀ ಪ್ರದಕ್ಷಿಣೆಯನ್ನು ಮುಗಿಸಿದರು.*

**ಅಥ ಜಾತುಚಿತ್ ಸದಸಿ ಸಂಯಮಿನಾಂ**
**ಅವತಂಸಭೂಷಣಮಣಿಃ ಕೃತಿನಃ ।**
**ಅವಲೋಕ್ಯ ಕೇಶವಸುಧೀಪ್ರಮುಖಾ-**
**ನವದತ್ ಸುಧಾರಸಕಿರಾಂ ಸ ಗಿರಮ್ ॥ ೧೦೬ ॥**

ತ್ರ್ಯಂಬಕಾಚಲಕ್ಕೆ ಬಂದಮೇಲೆ ಒಂದುದಿನ ಯತಿಗಳಿಗೆ ಅಲಂಕಾರದಂತಿದ್ದ ಶ್ರೀವಿದ್ಯಾಧೀಶರು ತಮ್ಮ ಪೂರ್ವಾಶ್ರಮದ ತಮ್ಮಂದಿರಾದ ಕೇಶವಾಚಾರ್ಯರೇ ಮೊದಲಾದ ಪಂಡಿತಶ್ರೇಷ್ಠರನ್ನು ಉದ್ದೇಶಿಸಿ ಅಮೃತವನ್ನು ಸುರಿಸುವ ಈ ಕೆಳಗಿನ ಮಾತುಗಳನ್ನು ಹೇಳಿದರು.

---

* ೭೭ ರಿಂದ ೧೦೫ ವರೆಗಿನ ಶ್ಲೋಕಗಳು ಏಳನೆಯ ಸರ್ಗದಿಂದ ಆಯ್ದುಕೊಳ್ಳಲ್ಪಟ್ಟಿವೆ.

ಬಹುಶಃ ಕಿಲಾಂಧ್ರವಿಷಯೇಷು ಪರೇ
ವಿದುಷೊ ದ್ವಿಷಃ ಶ್ರುತಿತತೇಃ ಸಮುದಾಃ ।
ವಿಜಿತಾ ಭವದ್ಭಿರಜಿತೋಪಿ ಚಿರಾತ್
ಪರಿತೋಷಿತೋ ದಶಮುನೀಷಿಪತಿಃ ॥ ೧೦೭ ॥

ಆಂಧ್ರದೇಶದಲ್ಲಿಯ, ಶ್ರುತಿಗಳಿಗೆ ಅಪಾರ್ಥವನ್ನು ಕಲ್ಪಿಸುವ, ತಾವೇ ಪಂಡಿತರೆಂಬ ಅಹಂಕಾರವುಳ್ಳ, ಎಲ್ಲ ಪಂಡಿತರನ್ನೂ ನೀವು ಜಯಿಸಿದಿರಿ. ಹೀಗೆ ಅವರನ್ನು ಜಯಿಸಿ ಶ್ರೀಮಧ್ವಾಚಾರ್ಯರನ್ನೂ ಅವರ ಸ್ವಾಮಿಯಾದ ಅಜಯ್ಯನಾದ ಶ್ರೀಹರಿಯನ್ನೂ ಸಂತೋಷಪಡಿಸಿರುವಿರಿ.

ಅಧಿಚೋಲದೇಶಮಧಿಕಸ್ಮಯಭಾಕ್
ನಿಗಮಾಗಮಾರ್ಥನಿಪುಣಃ ಕೃತಿಮಾನ್ ।
ನಿಕರೋऽಸ್ಮದೀಯಮತಭೇದಕರಃ
ವಸತೀತಿ ನಃ ಶ್ರುತಮಸತ್ಪ್ರಥಮಃ ॥ ೧೦೮ ॥

ಚೋಳದೇಶದಲ್ಲಿ ಶ್ರುತ್ಯರ್ಥವನ್ನು ತಿಳಿದುಕೊಂಡವರು ನಾವೇ ಪಂಡಿತರು ಎಂಬ ಅಹಂಕಾರವಿರುವ, ನಮ್ಮ ಮತವನ್ನು ಖಂಡಿಸುವ ಪ್ರಯತ್ನಮಾಡುವ ದುಷ್ಟ ಪಂಡಿತರ ಗುಂಪು ಇರುವದೆಂದು ನಾವು ಕೇಳಿರುವೆವು.

ತದಖರ್ವಗರ್ವಧುತಿಪೂರ್ವಮಹೀ-
ಶ್ವರಶೈಲರಂಗನಗರಾದಿ ಜುಷಃ ।
ಕಮಲಾಧಿನೇತುರವಲೋಕನತಃ
ಕಲಯಾಮ ನಃ ಫಲಿದೃಶೋರ್ಜನನಮ್ ॥ ೧೦೯ ॥

ಈ ಅಹಂಕಾರಿಗಳಾದ ಪಂಡಿತರ ಅಹಂಕಾರವನ್ನು ಕಡಿಮೆಮಾಡುತ್ತ ಶೇಷಾಚಲ ಶ್ರೀರಂಗ ಇತ್ಯಾದಿ ಕ್ಷೇತ್ರಗಳಲ್ಲಿದ್ದ ಲಕ್ಷ್ಮೀಪತಿಯ ದರ್ಶನವನ್ನು ಮಾಡುತ್ತ ನಮ್ಮ ಕಣ್ಣುಗಳನ್ನು ಸಾರ್ಥಕಪಡಿಸಿಕೊಳ್ಳೋಣ.

ಅಗಣೇಯ ಪುಸ್ತಕಸಮಗ್ರಭರಃ
ಸ್ತಿಮಿತಾನಿಲೋಲಗಲಕಂಬಲಕಃ ।
ಸಮುದಗ್ರಶೃಂಗ ಶಿಖರಃ ಪ್ರಯಯೌ
ತರಸೋತ್ಕಟಃ ತದನು ಭದ್ರಗಣಃ ॥ ೧೧೦ ॥

ಬಳಿಕ, ಅಸಂಖ್ಯಪುಸ್ತಕಗಳ ಭಾರವನ್ನು ಹೊತ್ತ, ಆ ಭಾರದಿಂದ ನಿಶ್ಚಲವಾದ ಗಂಗೆದೊಗಲಿರುವ, ಎತ್ತರವಾದ ಕೋಡುಗಳಿರುವ (ಮಠದ ಚಕ್ಕಡಿಗಳನ್ನು ಎಳೆಯುವ) ಎತ್ತುಗಳ ಗುಂಪೇ ಪ್ರಯಾಣವನ್ನು ಆರಂಭಿಸಿತು.

**ಶನಕೈಃ ತತಃ ಕತಿಪಯೈರ್ದಿನಸ್ಯೈ-**
**ರಧಿಗತ್ಯ ವೆಂಕಟಗಿರೀಂದ್ರಪತಿಮ್ ।**
**ನತಿಮಾರಚಯ್ಯ ಯತಿರಾಟ್ಪುರತೋ**
**ಬಹುಧಾ ನುನಾವ ವಿಬುಧಾಲಿನುತಮ್ ॥ ೧೧೧ ॥**

ಮುಂದೆ ಕ್ರಮೇಣ ಪ್ರಯಾಣವನ್ನು ಕೈಕೊಂಡು ತಿರುಪತಿಯನ್ನು ಮುಟ್ಟಿ ಅನೇಕ ಸುಜನರಿಂದ ಸ್ತುತನಾದ ಶ್ರೀವೆಂಕಟೇಶ್ವರನಿಗೆ ಸ್ತೋತ್ರ ಮತ್ತು ನಮಸ್ಕಾರಗಳನ್ನು ಸಮರ್ಪಿಸಿದರು.

**ಪಥಿ ಕಾಲಹಸ್ತಿನಗರಾಧಿಪತಿಂ**
**ಪ್ರಣಮಯ್ಯ ಕಾಂಚ್ಯಭಿಧಯೋಲ್ಲಸಿಕಾಮ್ ।**
**ನಗರೀಮವಾಪ ನಗರೀತಿಕನ-**
**ದ್ಘನಗೋಪುರಾಮನುಗತಃ ಸುಜನೈಃ ॥ ೧೧೨ ॥**

ಶ್ರೀವಿದ್ಯಾಧೀಶರು ಸಜ್ಜನರಿಂದ ಹಿಂಬಾಲಿಸಲ್ಪಟ್ಟವರಾಗಿ ತಮ್ಮ ಪ್ರಯಾಣವನ್ನು ಮುಂದುವರಿಸಿ ಮಾರ್ಗದಲ್ಲಿ ಕಾಲಹಸ್ತಿಗೆ ಹೋಗಿ ಅಲ್ಲಿಯ ಕಾಲಹಸ್ತೀಶ್ವರನಿಗೆ ನಮಸ್ಕರಿಸಿ ಪರ್ವತಗಳಂತೆ ಎತ್ತರವಾದ ಗೋಪುರಗಳಿರುವ ಕಾಂಚೀನಗರವನ್ನು ತಲುಪಿದರು.

**ಘನನಾರಿಕೇಲ ಪನಸಕ್ರಮುಕಾ-**
**ಮಲ ಕಾಮ್ರಭಾಸಿನಿ ತದೀಯತಟೇ ।**
**ಪೃತನಾಂ ನಿವೇಶ್ಯ ಸಹಿತಾಪ್ತಜನಃ**
**ವರರಂಗನಾಮಪುರಮಾಪ ಗುರುಃ ॥ ೧೧೩ ॥**

ಕಾಂಚೀನಗರದಿಂದ ತಮ್ಮ ಪ್ರಯಾಣವನ್ನು ಮುಂದುವರಿಸಿ ತೆಂಗು, ಹಲಸು, ಅಡಿಕೆ, ಮಾವು ಇತ್ಯಾದಿ ವೃಕ್ಷಗಳ ತೋಟಗಳಿಂದ ಶೋಭಿಸುತ್ತಿದ್ದ ಕಾವೇರೀನದಿಯ ದಂಡೆಯಮೇಲೆ ತಮ್ಮನ್ನು ಹಿಂಬಾಲಿಸಿ ಬಂದ ಬ್ರಾಹ್ಮಣರ

ಸಮೂಹವನ್ನು ಇರಲು ಹೇಳಿ ತಾವು ಕೆಲವು ಆಪ್ತಜನರೊಡಗೂಡಿ ಶ್ರೀರಂಗ ನಗರಕ್ಕೆ ಹೋದರು.

**ತಮುಪಾಗತಂ ಸಮುಪಕರ್ಣ್ಯ ಮುದಾ**
**ತ್ರಿಶಿರಃ ಪುರಾತ್ ತಿರುಮಲಃ ಕ್ಷಿತಿಪಃ ।**
**ಅಭಿಗಮ್ಯ ತತ್ರ ಚತುರಂಗ ಚಮೂಂ**
**ಸಹಿತೋಽನಮತ್ ಸಕಲರಾಜನುತಮ್ ॥ ೧೧೪ ॥**

ಶ್ರೀವಿದ್ಯಾಧೀಶರು ಬಂದದ್ದನ್ನು ತಿಳಿದು ತಿರುಮಲ ಎಂಬ ರಾಜನು ತ್ರಿಶಿರಃಪುರದಿಂದ (ತ್ರಿಚನಾಪಳ್ಳಿಯಿಂದ) ಚತುರಂಗ ಸೈನ್ಯಸಮೇತನಾಗಿ ಬಂದು ಅನೇಕ ರಾಜರಿಂದ ನಮಸ್ಕರಿಸಲ್ಪಟ್ಟು ಅವರಿಗೆ ನಮಸ್ಕಾರ ಮಾಡಿದನು.

**ಸ್ವಗುರೋಃ ಶುಭಂಯುನಿ ದಿನೇಽಥ ಗುರುಃ**
**ಸ ತದಂತರಾಪಿಕರಮೇಶಮುದೇ ।**
**ಧರಣೀಸುಪರ್ವನಿಸರಾನ್ ಸುಘೃತ-**
**ಪ್ಲುತಮನ್ನಮಾರಭತ ಭೋಜಯಿತುಮ್ ॥ ೧೧೫ ॥**

ಬಳಿಕ, ಶ್ರೀರಂಗಕ್ಷೇತ್ರದಲ್ಲಿ ತಮ್ಮ ಗುರುಗಳಾದ ಶ್ರೀವೇದವ್ಯಾಸತೀರ್ಥರ ಆರಾಧನಾದಿನದಂದು ಅವರ ಅಂತರ್ಯಾಮಿಯಾದ ಪರಮಾತ್ಮನ ಪ್ರೀತಿಗಾಗಿ ಬ್ರಾಹ್ಮಣರಿಗೆ ತುಪ್ಪದಲ್ಲಿ ಕರಿದ ಭಕ್ಷ್ಯಗಳಿಂದ ಭೋಜನ ಮಾಡಿಸಿದರು.

**ಇತ್ಥಂ ದಿನತ್ರಯಮಸೌ ಯತಿಸಾರ್ವಭೌಮಃ**
**ಭೂಮೀಸುರಾನ್ ರುಚಿರಮಷ್ಟಸಹಸ್ರಸಂಖ್ಯಾನ್ ।**
**ಮೃಷ್ಟಾನ್ನಮನ್ವಹಮಭೋಜಯದಾದರೇಣ**
**ವಿಶ್ವಂಭರೋಽಪ್ಯಧಿತ ತೃಪ್ತಿಮದೋಂತರಸ್ಥಃ ॥ ೧೧೬ ॥**

ಯತಿಸಾರ್ವಭೌಮರಾದ ಶ್ರೀವಿದ್ಯಾಧೀಶರು ಆರಾಧನೆಯ ಮೂರೂ ದಿನಗಳಲ್ಲಿ ಎಂಟುಸಹಸ್ರಜನ ಬ್ರಾಹ್ಮಣರಿಗೆ ಮೃಷ್ಟಾನ್ನಭೋಜನ ಮಾಡಿಸಿದರು. ಇದರಿಂದ ಈ ಬ್ರಾಹ್ಮಣರಲ್ಲಿ ಅಂತರ್ಯಾಮಿಯಾದ ವಿಶ್ವಂಭರನಾಮಕ ಪರಮಾತ್ಮನೂ ತೃಪ್ತನಾದನು.

ಹಸ್ತಾಂಬುಜೇ ಮಕರಕಚ್ಛಪಪದ್ಮಶಂಖಾನ್
ರೇಖಾಚ್ಛಲೇನ ಸ ವಹನ್ ಹೃದಯೇ ಮುಕುಂದಮ್ ।
ತ್ರಿಂಶತ್ಸಹಸ್ರಗಣಿತಾನ್ ವ್ಯದಿಶತ್ ದ್ವಿಜಾನಾಮ್
ದೀನಾರಕಾನಿತಿ ಯದತ್ರ ಕಿಮದ್ಭುತಂ ತತ್ ॥ ೧೧೭ ॥

ತಮ್ಮ ಕೈಯಲ್ಲಿ ರೇಖಾರೂಪದಿಂದ ಮಕರ, ಕಚ್ಛಪ, ಪದ್ಮ, ಶಂಖ ಎಂಬ ನವನಿಧಿಗಳಲ್ಲಿಯ ಕೆಲವು ನಿಧಿಗಳನ್ನೂ ಹೃದಯದಲ್ಲಿ ಮುಕುಂದ ಎಂಬ ನಿಧಿಯನ್ನೂ ಧರಿಸಿದ ಆವರು ಈ ಸಮಾರಾಧನೆಯ ಕಾಲದಲ್ಲಿ ಬ್ರಾಹ್ಮಣರಿಗೆ ಮೂವತ್ತುಸಾವಿರ ದೀನಾರಕಗಳನ್ನು ಕೊಟ್ಟದ್ದರಲ್ಲಿ ಆಶ್ಚರ್ಯವೇನೂ ಇಲ್ಲ.

ಶ್ರೀರಂಗಾತ್ ಸ ನಿರೀಯ ತಂಜನಗರೀರಮ್ಯೋಪವನ್ಯಾಮಿತಃ
ತತ್ರತ್ಯೈಃ ರಘುನಾಥಪಾರ್ಥಿವಮುಖ್ಯೈರಭ್ಯರ್ಚಿತಃ ಸಾದರಮ್ ।
ಸಂಭಾವ್ಯಾಥ ಸುಧೀಂದ್ರಯೋಗಿ ತಿಲಕಂ ಶ್ರೀಕುಂಭಕೋಣಾದಿಕ
ಗ್ರಾಮೇಷ್ವಾನಮದಿಂದಿರಾಪ್ರಣಮಿನಂ ನೋದೇನ ನಾಣೀಯಸಾ ॥

ಬಳಿಕ ಶ್ರೀವಿದ್ಯಾಧೀಶರು ಶ್ರೀರಂಗದಿಂದ ಹೊರಟು ರಮ್ಯವಾದ ಉಪವನಗಳಿರುವ ತಂಜಾವೂರಿಗೆ ಬಂದು ಅಲ್ಲಿಯ ರಾಜನಾದ ರಘುನಾಥ ನಾಯಕನಿಂದ ಸನ್ಮಾನಿತರಾಗಿ, ಕುಂಭಕೋಣಕ್ಕೆ ಬಂದು ಅಲ್ಲಿದ್ದ ಸುಧೀಂದ್ರತೀರ್ಥರನ್ನು ಗೌರವಿಸಿ ಅಲ್ಲಿಯ ಶಾರ್ಙ್ಗಪಾಣಿದೇವರಿಗೆ ಬಹಳ ಭಕ್ತಿಯಿಂದ ನಮಸ್ಕರಿಸಿದರು.*

ತದನಂತರಂ ತನುಭೃತಾಂ ಗುರೂತ್ತಮೋ
ಹಿತಮಾಚರನ್ ವಿಹಿತಕಾರ್ಯಧೂರ್ವಹಃ ।
ಮಧುರಾಮವಾಪ ಮಧುರಾಂ ಸ ಸಂಪದಾ
ಮಧುಭಿತ್ಪದಾಬ್ಜ ಮಧುನಾಭೃತಾಶಯಃ ॥ ೧೧೯ ॥

ಬಳಿಕ, ಸಕಲಪ್ರಾಣಿಗಳ ಹಿತಕ್ಕಾಗಿಯೇ ತಮ್ಮ ಕಾರ್ಯವನ್ನು ಕೈಕೊಂಡ ಗುರುಶ್ರೇಷ್ಠರು ಮಧುನಾಮಕದೈತ್ಯನನ್ನು ಸಂಹರಿಸಿದ ಪರಮಾತ್ಮನ ಪಾದ ಕಮಲಗಳ ಸೇವೆಯೆಂಬ ಮಧುವಿನಿಂದ ತುಂಬಿದವರಾಗಿ ಸಂಪದ್ಭರಿತವಾದ ಮಧುರಾನಗರಕ್ಕೆ ಬಂದರು.

* ೧೦೩ ರಿಂದ ೧೧೮ ರ ವರೆಗಿನ ಶ್ಲೋಕಗಳು ಎಂಟನೆಯ ಸರ್ಗದಿಂದ ಆಯ್ದು ಕೊಳ್ಳಲ್ಪಟ್ಟಿವೆ.

ತಟಿನೀಮಿತಸ್ತದನು ತಾಮ್ರಪರ್ಣಿಕಾಂ
ನ ದಿಶಾಂ ಮುಖಾನಿ ಸ ಯಶೋಭಿರಾತ್ಮನಃ ।
ಅಕರೋದಲಂ ಪರಮುಶೀಷಧೀಮತಾ-
ಮಪಿ ತದ್ಭವೈರಮಲಮೌಕ್ತಿಕೋತ್ಕರೈಃ ॥ ೧೨೦ ॥

ಬಳಿಕ, ಮಧುರಾನಗರದಿಂದ ತಾಮ್ರಪರ್ಣೀನದಿಯತೀರಕ್ಕೆ ಹೋದರು. ಅಲ್ಲಿ ತಮ್ಮ ಕೀರ್ತಿಯಿಂದ ದಿಕ್ಕುಗಳನ್ನು ತುಂಬಿದ್ದಲ್ಲದೇ ತಾಮ್ರಪರ್ಣಿಯಲ್ಲಿ ದೊರೆಯುವ ಮುತ್ತುಗಳಿಂದ ವಿದ್ವಾಂಸರ ಮುಖಗಳು ಶೋಭಿಸುವಂತೆ (ಕರ್ಣಕುಂಡಲಾದಿಗಳಿಂದ) ಮಾಡಿದರು.

ಅಥ ಸೇತುಬಂಧಮತಿಬಂಧುರೋಲ್ಲಲ-
ತ್ಕಪಿ ಬಾಹುಸಂಧಿತಮಹೇಂಧನಾನಲಮ್ ।
ಅಧಿಗತ್ಯ ಸಿಂಧುಸಲಿಲೇ ಕೃತಾಪ್ಲವಃ
ಸ ಬಬಂಧ ತತ್ರ ರಘುಸಿಂಧುರೇ ಮತಿಮ್ ॥ ೧೨೧ ॥

ಬಳಿಕ, ಕಪಿಗಳ ಬಲಿಷ್ಠವಾದ ಬಾಹುಗಳಿಂದ ನಿರ್ಮಿತವಾದ ಸರ್ವಪಾಪ ನಾಶಕವಾದ ಸೇತುಬಂಧವನ್ನು ತಲುಪಿ ಸಮುದ್ರಸ್ನಾನಮಾಡಿ ಶ್ರೀರಾಮ ಚಂದ್ರನ ಪಾದಧ್ಯಾನಮಗ್ನರಾದರು.

ಬದರೀಂ ಕ್ರಮೇಣ ನಿಬರೀಶಸಿಂಧುಜಾ-
ಹಿತಸನ್ನಿಧಾನಮಹಿತಾಂ ಜಗದ್ಗುರುಃ ।
ವವಲೇ ಯಿಯಾಸುರಖಿಲೈಃ ಸುಧೀಜನೈ-
ರಪಿ ಧರ್ಮನಾಮನಗರೀಂ ಗರೀಯಸೀಮ್ ॥ ೧೨೨ ॥

ಮುಂದೆ, ಶ್ರೀಮನ್ನಾರಾಯಣನ ಸನ್ನಿಧಾನದಿಂದ ಪರಮಪವಿತ್ರವಾದ ಬದರಿಗೆ ಹೋಗಬೇಕೆಂಬ ಸಂಕಲ್ಪದಿಂದ ತಮ್ಮೊಡನಿದ್ದ ಎಲ್ಲ ವಿದ್ವಜ್ಜನರೊಡನೆ ಧರ್ಮಪುರಿಗೆ ತಿರುಗಿ ಬಂದರು.

ಅವಕರ್ಣ್ಯ ಕರ್ಣಮಧುರಾಂ ತದಾಗತಿಂ
ವರಪೂರ್ಣಬೋಧಬುಧ ಪೂರ್ವಸೂರಯಃ ।
ಅಭಿಜಗ್ಮುರಂಚಿತಮುದಸ್ತಮಾದರಾ-
ದಪಿ ವಾಸುದೇವಯತಿರಾಟ್ ಪುರಸ್ಸರಾಃ ॥ ೧೨೩ ॥

ಶ್ರೀವಿದ್ಯಾಧೀಶರು ದಕ್ಷಿಣದೇಶದ ಯಾತ್ರೆಯನ್ನು ಮುಗಿಸಿಕೊಂಡು ಬಂದ ಕರ್ಣಮಧುರವಾದ ವಾರ್ತೆಯನ್ನು ಕೇಳಿ ಪೂರ್ಣಬೋಧಾಚಾರ್ಯರೇ ಮೊದಲಾದ ಪಂಡಿತರು ಮತ್ತು ವಾಸುದೇವಯತಿಗಳು ಭಕ್ತಿಯಿಂದ ಅವರನ್ನು ಎದುರುಗೊಂಡರು.

ವಿವಿಧಾನಿ ತಸ್ಯ ಚ ವಿರಾಗಿತಾವನೇಃ
ಚರಿತಾನನ್ಯಸು ಕರಾಣ್ಯಹರ್ದಿವಮ್ ।
ಭುವಿ ಕೇ ಪ್ರಜಲ್ಪಿತುಮಿಹೇಶತೇ ತಥಾ-
ಪ್ಯಹಮೀರಯಾಮಿ ಚಪಲೋ ಯಥಾಮತಿ ॥೧೨೪॥

ಪರಮವೈರಾಗ್ಯಸಂಪನ್ನರಾದ ಶ್ರೀವಿದ್ಯಾಧೀಶರ ಚರಿತ್ರೆಯು ಬಹುಮುಖವಾದುದು. ಅದನ್ನು ಯಾರೂ ವರ್ಣಿಸಲು ಸಮರ್ಥರಲ್ಲ. ಆದರೂ ಯಥಾಶಕ್ತಿ ವರ್ಣಿಸಲು ಪ್ರಯತ್ನಿಸುವೆನು. (ಇದು ಕವಿವಚನವು)

ಉಷಸಿ ಪ್ರಶಸ್ತಮುಭಯೋರ್ದ್ವಿಜನ್ಮನೋಃ
ಮುಖತೋಽವಧಾರಿತಮುರಾರ್ದನಶ್ರುತಿಃ ।
ಸ ಸಮುತ್ಥಿತೋಽಥ ವವೃತೇಽಂತರೇ ಬಹಿ-
ರ್ದ್ವಿವಿಧೇನ ಶೌಚವಿಧಿನಾ ಸಮುಜ್ಜ್ವಲಃ ॥ ೧೨೫ ॥

ಶ್ರೀಗಳವರು ಉಷಃಕಾಲದಲ್ಲಿ ಎದ್ದು ಇಬ್ಬರು ದ್ವಿಜಶ್ರೇಷ್ಠರ ಮುಖದಿಂದ ಗಜೇಂದ್ರಮೋಕ್ಷಾದಿ ಹರಿಯ ಮಾಹಾತ್ಮ್ಯವನ್ನು ಶ್ರವಣಮಾಡಿ ಮೃಜ್ಜಲಗಳಿಂದ ಬಾಹ್ಯಶೌಚವನ್ನೂ ಹರಿಚಿಂತನರೂಪವಾದ ಅಂತಃಶೌಚವನ್ನೂ ಮಾಡಿಕೊಳ್ಳುತ್ತಿದ್ದರು.

ಮಹಿತಾಂ ತದಂಘ್ರಿಕರಮರ್ದಿತೋಜ್ಝಿತಾಂ
ಮೃದಮಾಕಲಯ್ಯ ವಪುಷಿಸ್ವಯಂಜನಃ ।
ಕ್ಷಯಕುಷ್ಠಕೋಷ್ಠ ಗದದುರ್ದನುಗ್ರಹೈಃ
ಸಹಸೋಜ್ಝಿತಾಶ್ಚ ಸುಖಿನೋಽಭವನ್ಮಹೋ ॥ ೧೨೬ ॥

ಯತಿಶ್ರೇಷ್ಠರಾದ ಶ್ರೀವಿದ್ಯಾಧೀಶರ ಕರಚರಣಸ್ಪರ್ಶದಿಂದ ಪವಿತ್ರವಾದ ಮೃತ್ತಿಕೆಯನ್ನು ಶರೀರಕ್ಕೆ ಲೇಪನಮಾಡಿಕೊಂಡು ಭಕ್ತಜನರು ಕ್ಷಯ ಕುಷ್ಠ

ಕುಕ್ಷಿಬಾಧೆ ಮೊದಲಾದ ರೋಗಗಳಿಂದಲೂ ದುಸ್ಸಹವಾದ ಪಿಶಾಚಾದಿ ಬಾಧೆಗಳಿಂದಲೂ ಮುಕ್ತರಾಗುತ್ತಿದ್ದರು.

**ಕರದೀಪಿಕಾಲಿಕಲಿತಾಧ್ವನಾ ಶನೈಃ**
**ನಿಯಮೀಂದುರೇತ್ಯ ನಿರಯಪ್ರಮಾಥಿನಿ ।**
**ವಿಶದೇ ಮಮಜ್ಜ ವಿಧಿವತ್ ಸ ಗೌತಮೀ**
**ಪಯಸಿ ದ್ಯುಸಿಂಧುಪಯಸೀಭರಾಡಿವ ॥ ೧೨೭ ॥**

ನಸುಕಿನಲ್ಲಿಯೇ ಕೈದೀವಟಿಗೆಯವರಿಂದ ದಾರಿಯನ್ನು ತೋರಿಸಿಕೊಳ್ಳುತ್ತ ಯತಿವರ್ಯರು ಐರಾವತವು ಗಂಗೆಯಲ್ಲಿ ಮಜ್ಜನಮಾಡುವಂತೆ ಪವಿತ್ರವಾದ ಗೋದಾವರಿಯಲ್ಲಿ ಸ್ನಾನಮಾಡುತ್ತಿದ್ದರು.

**ಮುನಿರಾಟ್ ಕೃತಾಚಮನಮುಖ್ಯಸತ್ಕ್ರಿಯಾ**
**ದಿವಿ ಭಾನುಬಿಂಬಭುವಿ ಭಾವಯನ್ ಹರಿಮ್ ।**
**ಶನಕೈರ್ಜಜಾಪ ಜನಕೈರವೇಶಿತಾ**
**ಪ್ರಣವಂ ಮಹಾಘಗಣವಂಚಕಂ ಮುಹುಃ ॥ ೧೨೮ ॥**

ಸಜ್ಜನಕುಮುದಚಂದ್ರರಾದ ಯತಿಶ್ರೇಷ್ಠರು ಗೋಪೀಚಂದನಧಾರಣ ಆಚಮನಾದಿ ಸತ್ಕ್ರಿಯೆಗಳನ್ನು ಮುಗಿಸಿ ಸೂರ್ಯಬಿಂಬಸ್ಥನಾದ ಪರಮಾತ್ಮನ ಧ್ಯಾನಮಾಡುತ್ತ ಪ್ರಣವ ಜಪಾನುಷ್ಠಾನ ಮಾಡುತ್ತಿದ್ದರು.

**ಸುಚಿರಂ ಯತೀಂದುರಿಹ ರಾಮಸೂರಿಣಾ**
**ಶ್ರವಣಾವತಂಸಕೃತ ಶಾರ್ಙ್ಗಭೃತ್ಕಥಃ ।**
**ಪ್ರಚಚಾಲ ವೇತ್ರಕರವಾರಿತಾಗ್ರತೋ**
**ಜನತಾವಿಮರ್ದವಿಶದೀಕೃತಾಯನಃ ॥ ೧೨೯ ॥**

ಯತಿಶ್ರೇಷ್ಠರು ಗೋದಾವರಿಯ ದಂಡೆಯ ಮೇಲೆಯೇ ಶ್ರೀರಾಮಾಚಾರ್ಯ ಎಂಬವರಿಂದ ಭಾಗವತವನ್ನು ಶ್ರವಣಮಾಡಿ ವೇತ್ರಪಾಣಿಗಳಾದ ಮಠದ ಪರಿಚಾರಕರು ನೆರೆದ ಜನಸಮ್ಮರ್ದದಲ್ಲಿ ದಾರಿಮಾಡಿಕೊಟ್ಟ ಮೇಲೆ ಮಠಕ್ಕೆ ಮರಳುತ್ತಿದ್ದರು.

ಸ ಮಠೇ ತತೋ ರಘೂಪತೇಃ ದೃಢವ್ರತೋ
ಬಹುಧಾ ಪ್ರದಕ್ಷಿಣವಿಧಾನಮಾಚರನ್ ।
ಪ್ರಮದೇನ ಸಾಷ್ಟಶತಸಂಖ್ಯಯಾ ನತೀ-
ರತನೋಚ್ಚ ಮಾಂಗಲಿಕದೀಪಿಕಾರ್ಪಣಮ್ ॥ ೧೩೦ ॥

ಬಳಿಕ, ಮಠದಲ್ಲಿ ಶ್ರೀ ಮೂಲರಾಮದೇವರಿಗೆ ಅನೇಕ ಪ್ರದಕ್ಷಿಣೆಗಳನ್ನು ಹಾಕಿ ೧೦೮ ನಮಸ್ಕಾರಗಳನ್ನು ಮಾಡಿ ಮಂಗಳಾರತಿಯನ್ನು ಸಮರ್ಪಿಸುತ್ತಿದ್ದರು.

ಅಧಿಸಂಸದಂಚತಿ ಕುಶಾಸನಂ ಯತಿ-
ಪ್ರವರೇಥ ವೇದನಿಧಿಯೋಗಿಪೂರ್ವಕಾಃ ।
ಅಪಿ ಕೇಶವಾರ್ಯಬುಧಸತ್ಯಪೂರ್ವಕ-
ವ್ರತಯೋಗಿನಾರಣವಿಪಶ್ಚಿದಾಹ್ವಯಾಃ ॥ ೧೩೧ ॥

ಮಂಗಳಾರತಿಯನ್ನು ಮುಗಿಸಿಕೊಂಡು ಯತಿವರ್ಯರು ಸಭಾಮಂಟಪದಲ್ಲಿ ದರ್ಭಾಸನವನ್ನಲಂಕರಿಸಿದ ಮೇಲೆ ಶ್ರೀವೇದನಿಧಿತೀರ್ಥರು ಶ್ರೀಸತ್ಯವ್ರತತೀರ್ಥರು ಶ್ರೀಗಳವರ ಪೂರ್ವಾಶ್ರಮದ ತಮ್ಮಂದಿರಾದ ಪಾಂಡುರಂಗಿ ಕೇಶವಾಚಾರ್ಯರು ನಾರಾಯಣಾಚಾರ್ಯರೇ ಮೊದಲಾದವರು ವಿನಯದಿಂದ ನಮಸ್ಕರಿಸಿ ಸಭೆಯನ್ನಲಂಕರಿಸುತ್ತಿದ್ದರು.

ಯದುಪತ್ಯನಂತ ನರಸಿಂಹ ರೊಟ್ಟಿವೇಂ-
ಕಟಭೀಮ ರಾಮಹರಿಧರ್ಮಸೂರಯಃ ।
ಬಹವಃ ಪ್ರಣಮ್ಯ ಸುಧಿಯಃ ತಥೇತರೇ
ವಿನಯಾತ್ತದೋಪವಿವಿಶುರ್ಯಥಾಕ್ರಮಮ್ ॥ ೧೩೨ ॥

ಯಾದವಾರ್ಯರು ಶ್ರೀಮುಷ್ಣಂ ಅನಂತಾಚಾರ್ಯರು ನರಸಿಂಹಾಚಾರ್ಯರು ರೊಟ್ಟಿ ವೆಂಕಟಭೀಮರು ರಾಮಹರಿ ಮತ್ತು ಧರ್ಮ ಇತ್ಯಾದಿ ಅನೇಕ ಪಂಡಿತರು ತಮ್ಮ ತಮ್ಮ ಯೋಗ್ಯತಾನುಸಾರವಾದ ಸ್ಥಳಗಳನ್ನು ಅಲಂಕರಿಸುತ್ತಿದ್ದರು.

ಸಹ ತೈಃ ಸುಧಾಬ್ಧಿರಚಿತಾವಗಾಹನಃ
ಪ್ರಹರದ್ವಯೇಽಪ್ಯತಿಯತಿ ಪ್ರಭುಃ ಸತಾಮ್ ।
ಅವಗಾಹ್ಯ ಸಿಂಧುಸಲಿಲೇಽಥ ಪೂರ್ವವ-
ದ್ಧರಿಮಾರಿರಾಧಯಿಷತಿ ಸ್ಮ ಸಾದರಮ್ ॥ ೧೩೩ ॥

ಈ ಎಲ್ಲ ವಿದ್ವಾಂಸರಿಗೆ ಎರಡು ಪ್ರಹರಗಳ ಕಾಲ 'ನ್ಯಾಯಸುಧಾ' ಪ್ರವಚನವನ್ನು ಮಾಡಿ ಮತ್ತೆ ಗೋದಾವರಿಯಲ್ಲಿ ಸ್ನಾನಮಾಡಿ ಶ್ರೀಹರಿಯ ಅರ್ಚನೆಯಲ್ಲಿ ತೊಡಗುತ್ತಿದ್ದರು.

ವಿಪುಲಪ್ರಭಾಲಿ ನಿವೃತಾಂಚಲಸ್ಫುರನ್ನ-
ವರತ್ನದೀಪ್ತಿನಟದಿಂದ್ರಕಾರ್ಮುಕೇ ।
ರಮಣೀಯವಿಷ್ಟರತಲೇ ರಘೂತ್ತಮ-
ಪ್ರತಿಮಾಂ ತಪೋನಿಧಿರಭಿನ್ಯವೀವಿಶತ್ ॥ ೧೩೪ ॥

ವಿಶಾಲವಾದ ಪ್ರಭಾವಳಿಯಲ್ಲಿ ಕೆತ್ತಿದ ನವರತ್ನಗಳ ಕಾಂತಿಯಿಂದ ಇಂದ್ರಧನುಸ್ಸನ್ನು ಮೀರಿದಂತಿರುವ ಸುಂದರವಾದ ಪೀಠದ ಮೇಲೆ ಶ್ರೀ ಮೂಲರಾಮದೇವರ ಪ್ರತಿಮೆಯನ್ನಿಟ್ಟು ಪೂಜಿಸುತ್ತಿದ್ದರು.

ವರಧೂಪದೀಪಮುಕುರಪ್ರಕೀರ್ಣಕ
ವ್ಯಜನಾರ್ಪಣಾದಿವಿಭವೈಃ ಪರಿಕ್ರಮೈಃ ।
ನತಿಭಿಃ ಪ್ರಶಸ್ತನುತಿಭಿಃ ಪ್ರಸೇದಿವಾ-
ನಮುನಾ ವ್ಯಧಾಯಿ ಕಿಮು ನಾಜಭೂಸುತಃ ॥ ೧೩೫ ॥

ಸುಗಂಧಪೂರಿತವಾದ ಧೂಪ ದೀಪ ನೈವೇದ್ಯಸಮರ್ಪಣ ಚಾಮರ ಸೇವಾದಿಗಳಿಂದಲೂ ಸ್ತೋತ್ರ ನಮಸ್ಕಾರಗಳಿಂದಲೂ ಅಜನ ಮೊಮ್ಮಗನಾದ (ದಶರಥನ ಮಗನಾದ) ಶ್ರೀರಾಮನನ್ನು ನಿತ್ಯವೂ ಸಂತೋಷಪಡಿಸುತ್ತಿದ್ದರು.

ಇಹ ಭೈಕ್ಷ್ಯಕ ತ್ರಿತಯಮಾತ್ರಮಾರಚನ್
ವಿನಿವೇದ್ಯ ದೇವವಿಮತಾಹಿತಾಯ ತತ್ ।
ಅಧಿಪಂಕ್ತಿ ಭಕ್ತಮತಿಮೃಷ್ಟಮಶ್ನತಾಂ
ಬಭುಜೇಽನ್ನಸಾಧನಿತಭಾರತೀದಲಃ ॥ ೧೩೬ ॥

ಬಳಿಕ ಶಿಷ್ಯವೃಂದಕ್ಕೆ ತೀರ್ಥ ವಿತರಣೆ ಮಾಡಿ, ವೃದ್ಧಗಂಗೆಯಲ್ಲಿ ಸ್ನಾನ ಮಾಡಿ, ಸ್ವಯಂಪಾಕಿಗಳಾದ ಮೂರುಜನ ಮಠದ ವಿದ್ವಾಂಸರಲ್ಲಿ ಭಿಕ್ಷೆಮಾಡಿ, ಅದನ್ನು ಭಗವಂತನಿಗೆ ನಿವೇದನೆ ಮಾಡಿ, ಶಿಷ್ಯವೃಂದಕ್ಕೆ ಮೃಷ್ಟಾನ್ನ ಭೋಜನ ಮಾಡಿಸುತ್ತ, ತಾವು ತುಲಸೀಮಾತ್ರ ಸಾಧನದಿಂದ ಸ್ವೀಕರಿಸುತ್ತಿದ್ದರು.

ಅಥ ಸಾಯಮಾಪ್ಲವನ ಪೂರ್ವಕರ್ಮಕೃ-
ದ್ಧರಯೇಽರ್ಪಿತಾನತಿಶತಃ ಸ ದೀಪಿಕಾಮ್ ।
ಪರಿಕಲ್ಪ್ಯ ಸಂಸದಿ ಸಮಾಸದತ್ ವೃಷೀ-
ಮುರರೀಕೃತಾಖಿಲ ವಿಪಶ್ಚಿದಾನತಿಃ ॥ ೧೩೭ ॥

ಮತ್ತೆ ಸಾಯಂಕಾಲ ಸ್ನಾನ, ಅಷ್ಟೋತ್ತರ ನಮಸ್ಕಾರ, ಮಂಗಲಾರತಿಗಳನ್ನು ಪೂರೈಸಿಕೊಂಡು ಸಕಲ ವಿದ್ವಜ್ಜನರಿಂದ ನಮಸ್ಕಾರಗಳನ್ನು ಸ್ವೀಕರಿಸುತ್ತ ಸಭಾಮಂಟಪದಲ್ಲಿ ದರ್ಭಾಸನದಲ್ಲಿ ಆಸೀನರಾಗುತ್ತಿದ್ದರು.

ಸ್ತಾವಂ ಸ್ತಾವಮಸೌ ಗುಣಾನ್ನಿಜಗುರೋಃ ಸಾಕಂ ಸುಧೀತಲ್ಲಜೈಃ
ನೀತ್ವಾ ಚ ಪ್ರಹರದ್ವಯಂ ನಿಶಿ ತತಃ ಕ್ಲೃಪ್ತಾಗಮಾಲೋಕನಃ
ಸರ್ವಾಂಸ್ತಾನುಮಾನ್ಯ ಮಾನ್ಯಚರಿತಃ ತತ್ತದ್ಗೃಹಾವಾಪ್ತಯೇ
ಶೇತೇ ದರ್ಭಕಟೇ ಸ್ವಯಂ ಸ್ಮ ಮನಸಾ ಧ್ಯಾಯನ್
ಭುಜಂಗೇಶಯಮ್ ॥ ೧೩೮ ॥

ಬಳಿಕ ಯತಿಶ್ರೇಷ್ಠರು ತಮ್ಮ ಗುರುಗಳನ್ನು ಸ್ತುತಿಸಿ, ಎರಡು ಪ್ರಹರಗಳ ಕಾಲ ವಿದ್ವಾಂಸರೊಡನೆ ಶಾಸ್ತ್ರಚರ್ಚೆಯಲ್ಲಿ ಕಳೆದು, ವಿದ್ವಾಂಸರಿಗೆಲ್ಲ ಮನೆಗೆ ಹೋಗಲು ಅಪ್ಪಣೆಕೊಟ್ಟು, ತಾವೊಬ್ಬರೇ ಶಾಸ್ತ್ರಾವಲೋಕನವನ್ನು ಮಾಡಿ ಶೇಷಶಾಯಿಯಾದ ಭಗವಂತನನ್ನು ಸ್ಮರಿಸುತ್ತ ದರ್ಭಶಯ್ಯೆಯಲ್ಲಿ ಮಲಗುತ್ತಿದ್ದರು.*

* ೧೧೯ ರಿಂದ ೧೩೮ ರ ವರೆಗಿನ ಶ್ಲೋಕಗಳು ಒಂಭತ್ತನೆಯ ಸರ್ಗದಿಂದ ಆಯ್ದು ಕೊಳ್ಳಲ್ಪಟ್ಟವೆ.

ಶರ್ಮಾಭಿಯೋಗಾಯ ಚ ಸಜ್ಜನಾನಾಂ
ಶರ್ಮೇತರಾರ್ಥಾಚ ದುರ್ಜನಾನಾಮ್ ।
ಅಂಚನ್ನಿವಾಸಂ ಜಗತಾಂ ತ್ರಯಾಣಾ-
ಮುವಾಸ ಮಾಸಾಂಶ್ಚತುರಃ ಸ ಯೋಗೀ ॥ ೧೩೯ ॥

ಸಜ್ಜನರನ್ನು ಸಂತೋಷಪಡಿಸಲು ಮತ್ತು ದುರ್ಜನರ ಶಾಸನಮಾಡಲು ಮೂರು ಲೋಕಗಳ ಒಡೆಯನಾದ ಶ್ರೀಹರಿಯನ್ನು ಪೂಜಿಸುತ್ತ ಶ್ರೀವಿದ್ಯಾಧೀಶರು ಆ ವರ್ಷದ ಚಾತುರ್ಮಾಸದಲ್ಲಿ ಧರ್ಮಪುರಿಯಲ್ಲಿಯೇ ಇದ್ದರು.

ಪುರಿ ತೇ ಪರಿತೋ ವಿಮೃಗ್ಯ ಯತ್ನಾತ್
ಚಿರಮುದ್ರಾಕ್ಷುರುಪೇತ್ಯ ಕಾಮದೇವಮ್ ।
ತಮುದಭ್ರಭಯೇನ ರಾಮಭದ್ರಾ-
ಶ್ರಮಿ ಭಿಕ್ಷೋಃ ಗೃಹಕುಕ್ಷಿಮುತ್ಕಜಂತಮ್ ॥ ೧೪೦ ॥

(ಶ್ರೀಗಳವರ ಚಾತುರ್ಮಾಸ್ಯಕಾಲದಲ್ಲಿ ಕಾಮದೇವ ಎಂಬ ಓರ್ವ ಪಂಡಿತನು ಜಗತ್ತು ಸತ್ಯ ಎಂದು ಹೇಳಲು ಪ್ರಮಾಣಗಳೇ ಇಲ್ಲ ಎಂದು ಅಪಪ್ರಚಾರ ಮಾಡತೊಡಗಿದನು. ಅವನೊಡನೆ ವಾದಮಾಡಲು ನರಹರಿ ಆಚಾರ್ಯ ಎಂಬವರನ್ನು ಶ್ರೀಗಳು ಕಳಿಸಿದರು. ಕಾಮದೇವನು ಅಡಗಿಕೊಂಡು ಕುಳಿತನು) ಶ್ರೀಗಳ ಶಿಷ್ಯರು ಧರ್ಮಪುರಿಯಲ್ಲಿ ಎಲ್ಲ ಕಡೆಗೂ ಹುಡುಕಿ ರಾಮಭದ್ರಾಶ್ರಮಿ ಎಂಬ ಅದ್ವೈತಯತಿಯ ಮನೆಯಲ್ಲಿ ಭೀತಿಯಿಂದ ಅಡಗಿಕೊಂಡ ಕಾಮದೇವನನ್ನು ಕಂಡುಹಿಡಿದರು.

ಸ ವಿಹಾಯ ಧರ್ಮನಗರೀಮಧಿಕ್ಷಪಂ
ಯತಿರಾಜಮಾಂತ್ರಿಕ ಭಯಾಕುಲಾಶಯಃ ।
ದ್ರವತಿ ಸ್ಮ ಸತ್ವರಮಲಕ್ಷಿತೋ ಜನೈ-
ರಪಿ ಕಾಮದೇವಖಲದುರ್ದಮಗ್ರಹಃ ॥ ೧೪೧ ॥

ಯತಿಶ್ರೇಷ್ಠರೆಂಬ ಮಾಂತ್ರಿಕರ ಭಯದಿಂದ ಕಾಮದೇವನೆಂಬ ಪಿಶಾಚಗ್ರಸ್ತಪುರುಷನು ಯಾರಿಗೂ ಕಾಣದಂತೆ ರಾತ್ರಿಯಲ್ಲಿಯೇ ಧರ್ಮನಗರಿಯನ್ನು ಬಿಟ್ಟು ಓಡಿಹೋದನು.

ವಿಧಾಯ ಲೋಕೇ ವಿವಿಧೋಕ್ತಿಜಾಲೈಃ
ಮುಧಾ ಮತಾನ್ಯೇವ ಮುಹುಃ ಪರೇಷಾಮ್ ।
ವ್ಯಧಾನ್ಮನಾಃ ವಾರಣಸೀಪ್ರಯಾಣೇ
ಸುಧಾರಸಾಸ್ವಾದ ಸುಖೈಕಭೂಮಿಃ ॥ ೧೪೨ ॥

ನಿತ್ಯವೂ ಶ್ರೀಮನ್ನ್ಯಾಯಸುಧಾ ಗ್ರಂಥದ ರಸಾಸ್ವಾದನೆಯಿಂದ ಪರಮಾನಂದವನ್ನು ಹೊಂದುತ್ತಿದ್ದ ಶ್ರೀಗಳವರು ತಮ್ಮ ಪ್ರವಚನ ಕೌಶಲ್ಯದಿಂದ ಪರಮತಗಳನ್ನೆಲ್ಲ ನಿರಾಕರಿಸಿ ವಾರಾಣಸೀಕ್ಷೇತ್ರಕ್ಕೆ ಪ್ರಯಾಣವಾಡಬೇಕೆಂದು ಸಂಕಲ್ಪ ಮಾಡಿದರು.

ತತ್ರೈವ ವೇದನಿಧಿಯೋಗಿನಿ ಮೂಲರಾಮ.
ಚಂದ್ರಾಕೃತಿಂ ಚ ವಿನಿಧಾಯ ಬುಧಾನನೇಕಾನ್ ।
ಆಪ್ತೈಃ ಸಮಂ ಸಪದಿ ವೃದ್ಧಸುರಸ್ರವಂತೀಂ
ತೀರ್ತ್ವಾ ಧನೇಶಹರಿತಂ ಯತಿರಾಟ್ ಪ್ರತಸ್ಥೇ ॥೧೪೩॥

ಶ್ರೀವೇದನಿಧಿತೀರ್ಥರಿಗೆ ಶ್ರೀ ಮೂಲರಾಮದೇವರನ್ನು ಒಪ್ಪಿಸಿ,. ಅನೇಕ ವಿದ್ವಾಂಸರನ್ನು ಅವರ ಜೊತೆಗೆ ಬಿಟ್ಟು, ಕೇವಲ ಪರಮಾಪ್ತರಾದ ಕೆಲವು ವಿದ್ವಾಂಸರೊಡನೆ ವೃದ್ಧಗಂಗೆಯನ್ನು ದಾಟಿ ಉತ್ತರ ದಿಕ್ಕಿಗೆ ಹೊರಟರು.*

ತತಃ ಸ ರೇವಾಂ ಸಮತೀತ್ಯ ಮಾರ್ಗೇ
ಪ್ರಯಾಗಮೇತ್ಯ ಪ್ರಯತಾಂತರಂಗಃ ।
ಕ್ಲೃಪ್ತತ್ರಿವೇಣೀ ಸಲಿಲಾವಗಾಹಃ
ಚಕ್ರೇಽರ್ಚನಂ ಚಕ್ರಭೃತೋ ಯತೀಂದುಃ ॥ ೧೪೪ ॥

ಸಂಚಾರಕ್ರಮೇಣ ಶ್ರೀಗಳು ನರ್ಮದಾನದಿಯನ್ನು ದಾಟಿ ಪ್ರಯಾಗ ಕ್ಷೇತ್ರಕ್ಕೆ ಬಂದು ತ್ರಿವೇಣೀಸಂಗಮದಲ್ಲಿ ಸ್ನಾನಮಾಡಿ ಶ್ರೀ ಚಕ್ರಪಾಣಿಯ (ವೇಣೀಮಾಧವನ) ಪೂಜೆಯನ್ನು ಮಾಡಿದರು.

* ೧೩೯ ರಿಂದ ೧೪೩ ರ ವರೆಗಿನ ಶ್ಲೋಕಗಳು ಹತ್ತನೆಯ ಸರ್ಗದಿಂದ ಆಯ್ದುಕೊಳ್ಳಲ್ಪಟ್ಟವೆ.

ಉಮಾಧವಂ ವಿಶ್ವಪತಿಂ ಸ ಬಿಂದು-
ರಮಾಧವಂ ಚ ಪ್ರಣಿಪತ್ಯ ತತ್ರ ।
ಉವಾಸ ಮಾಸಂ ವರಮಧ್ವಶಾಸ್ತ್ರ-
ವ್ಯಾಖ್ಯಾಸಮಾಖ್ಯಾಪಿತಬುದ್ಧಿಸಾರಃ ॥ ೧೪೫ ॥

ನಂತರ, ವಾರಾಣಸೀಕ್ಷೇತ್ರವನ್ನು ಮುಟ್ಟಿ ಅಲ್ಲಿ ಶ್ರೀವಿಶ್ವನಾಥ ಮತ್ತು ಶ್ರೀ ಬಿಂದುಮಾಧವರನ್ನು ಆರಾಧಿಸಿ ಒಂದು ತಿಂಗಳ ಮಧ್ವಶಾಸ್ತ್ರದ ಪ್ರವಚನ ವನ್ನು ಮಾಡಿ ತಮ್ಮ ಬುದ್ಧಿ ವೈಭವವನ್ನು ಪ್ರದರ್ಶಿಸಿದರು.

ಬ್ರಹ್ಮೇಂದ್ರನಾಮಾ ಯತಿಭೂಮಿಕಾಪ್ತಿ-
ಪ್ರಖ್ಯಾಪಿತ ಪ್ರಾಗ್ಭನಿದ್ವೈತ್ಯಭಾವಃ ।
ಸೋಽಭೂದದಃ ಸಾಧುಗುಣಾಭಿತಪ್ತ-
ನಾರಾಚಧಾರಾ ಪ್ರವಿದೀರ್ಣಕರ್ಣಃ ॥ ೧೪೬ ॥

ಬ್ರಹ್ಮೇಂದ್ರ ಎಂಬ ಹೆಸರಿನ ಅದ್ವೈತಯತಿಗಳು ಶ್ರೀವಿದ್ಯಾಧೀಶರ ಪಾಂಡಿತ್ಯಾದಿಗುಣಗಳನ್ನು ಕೇಳಿ ಕಿವಿಚುಚ್ಚಿದಂತಾದರು.

ಅದೋಂತಿಕಂ ಪ್ರೇಷಯದಾಗಮೇಷು
ಪ್ರೌಢಾನ್ ಸ ಮೂಢಃ ಕತಿಚಿತ್ ಸ ಗರ್ವಾನ್ ।
ವಿಪಶ್ಚಿತಃ ತೇಪಿ ಸಮೇತ್ಯ ತಾದೃ-
ಗ್ವ್ಯಾಖ್ಯಾಂ ಗುರೋಃ ಶುಶ್ರುವುರಾದರೇಣ ॥ ೧೪೭ ॥

ಶಾಸ್ತ್ರದಲ್ಲಿ ನಿಷ್ಣಾತರಾದ, ತಾವೇ ಪಂಡಿತರೆಂಬ ಅಹಂಕಾರವುಳ್ಳ ಕೆಲವರನ್ನು ಬ್ರಹ್ಮೇಂದ್ರಯತಿಯು ಶ್ರೀವಿದ್ಯಾಧೀಶರ ಕಡೆಗೆ ಕಳಿಸಿಕೊಟ್ಟನು. ಈ ಪಂಡಿತರು ಶ್ರೀವಿದ್ಯಾಧೀಶ ಗುರುವರ್ಯರ ವ್ಯಾಖ್ಯಾನಶೈಲಿಯನ್ನು ಕೇಳಿ ಬೆರಗಾದರು.

ಸ್ವಯತ್ನವೈಫಲ್ಯ ಕೃತಾಭ್ಯಸೂಯೋ
ಬ್ರಹ್ಮೇಂದ್ರದಂಡೀ ಬಹುಲಾರ್ಥದಾನೈಃ ।
ಜಿಘಾಂಸಯೇವ ಪ್ರಜಿಘಾಯ ಯೋಧಾನ್
ಮ್ಲೇಚ್ಛಾನ್ ಮಹೇಚ್ಛಸ್ಯ ಸಮೀಪಮಸ್ಯ ॥ ೧೪೮ ॥

ಶ್ರೀವಿದ್ಯಾಧೀಶರ ಪಾಂಡಿತ್ಯವನ್ನು ಅಲ್ಲಗಳೆಯಬೇಕೆಂಬ ತನ್ನ ಪ್ರಯತ್ನಗಳು ವಿಫಲವಾದ್ದರಿಂದ ಅಸೂಯೆಗೊಂಡ ಬ್ರಹ್ಮೇಂದ್ರಯತಿಯು ಅವರಿಗೆ ತೊಂದರೆ ಕೊಡಲು ಮ್ಲೇಚ್ಛ ಸೈನಿಕರನ್ನು ಹಣಕೊಟ್ಟು ಕಳಿಸಿಕೊಟ್ಟನು.

ಉದಾಯುಧಾಸ್ತೇ ವ್ಯಗಮನ್ನ ಯಾವತ್
ತಾವದ್ಧರೇಃ ಪ್ರೇರಣಯೈವ ಧೀರಃ ।
ಸಾಕಂ ಸ್ವಕೀಯೈಃ ಸುಜನೈಃ ಸುಖೇನ
ಗಯಾಮಯಾಸೀನ್ನಿಯಮಪ್ರವೇಕಃ ॥ ೧೮೯ ॥

ಕೈಯಲ್ಲಿ ಆಯುಧಗಳನ್ನು ಹಿಡಿದುಕೊಂಡು ಆ ಮ್ಲೇಚ್ಛಭಟರು ಬರುವಷ್ಟರಲ್ಲಿಯೇ ಭಗವಂತನ ಪ್ರೇರಣೆಯಿಂದ ಯತಿಶ್ರೇಷ್ಠರು ತಮ್ಮ ಸ್ವಜನರಿಂದ ಕೂಡಿಕೊಂಡು ಗಯಾಕ್ಷೇತ್ರಕ್ಕೆ ಸುಖದಿಂದ ತೆರಳಿಬಿಟ್ಟಿದ್ದರು.

ಸ ತತ್ರ ಹರ್ಯರ್ಚನಮಾರಚಯ್ಯ
ತೀರ್ಥೇನ ಸಾರ್ಥೀಕುರುತೇ ಸ್ಮ ಲೋಕಾನ್ ।
ಯದ್ಬಿಂದುಸಂಸರ್ಗವಶಾದನಾದ್ರ್ರ-
ಪ್ರೇಧೋಽವೃತಿಃ ಪಲ್ಲವಿನೀ ಬಭೂವ ॥ ೧೯೦ ॥

ಗಯಾಕ್ಷೇತ್ರದಲ್ಲಿ ಶ್ರೀವಿದ್ಯಾಧೀಶರು ನಿತ್ಯವೂ ದೇವರ ಪೂಜೆಮಾಡಿ ಜನರಿಗೆ ತೀರ್ಥಕೊಡುತ್ತಿದ್ದರು. ಆಗ ಬಿದ್ದ ತೀರ್ಥದ ಹನಿಗಳಿಂದ ಒಂದು ಒಣಗಿದ ವೃಕ್ಷವು ಚಿಗುರಿತು.

ಅಲೋಕಸಾಮಾನ್ಯ ಮಹಾನುಭಾವ-
ನಿರ್ವರ್ಣನೇನಾಸ್ಯ ನಿತಾಂತನಮ್ರಾಃ ।
ಗಯಾವಲೀಸಂಜ್ಞಕವಿಪ್ರವರ್ಗೋ
ವಿಶ್ವೋಽಪ್ಯತೋಽಗಾಹತ ವಿಷ್ಣುದೀಕ್ಷಾಮ್ ॥ ೧೯೧ ॥

ಶ್ರೀವಿದ್ಯಾಧೀಶರ ಅದ್ಭುತಮಹಿಮೆಯನ್ನು ನೋಡಿ ಗಯಾವಾಡರು ಅತಿನಮ್ರಭಾವದಿಂದ ಮಧ್ವಮತದ ದೀಕ್ಷೆಯನ್ನು ಸ್ವೀಕರಿಸಿದರು. (ಶ್ರೀವಿದ್ಯಾಧೀಶರು ಗಯಾಕ್ಷೇತ್ರಕ್ಕೆ ಹೋದಕಾಲದಲ್ಲಿ ಗಯಾವಾಡರು ತಾಂತ್ರಿಕರಾಗಿದ್ದರು. ವಿಷ್ಣುಪಾದದಮೇಲೆ ಪಿಂಡಪ್ರದಾನಮಾಡಲು ಬಹಳ ಹಣವನ್ನು ಕೇಳುತ್ತಿದ್ದರು.

ಅವರಿಗೆ ತಮಗೆ ತಾಂತ್ರಿಕಸಿದ್ಧಿಯಿರುವ ಅಭಿಮಾನ ಬಹಳವಾಗಿತ್ತು. ಶ್ರೀವಿದ್ಯಾಧೀಶರು ಸಿದ್ಧಪುರುಷರು ಎಂಬುದನ್ನು ಕೇಳಿ ನಿಮ್ಮ ಸಿದ್ಧಿಯನ್ನು ತೋರಿಸಬೇಕು ಎಂದು ಕೇಳಿದರು. ಆಗ ಶ್ರೀವಿದ್ಯಾಧೀಶರು ತೀರ್ಥಪ್ರೋಕ್ಷಣೆಯನ್ನು ಮಾಡಿ ಒಣಗಿದ ವೃಕ್ಷವನ್ನು ಚಿಗುರಿಸಿದರು. ಇದರಿಂದ ತಾಂತ್ರಿಕರಾದ ಗಯಾವಾಡರ ಅಹಂಕಾರ ಖಂಡನವಾಗಿ ಅವರು ಮಧ್ವಮತ್ರವನ್ನು ಸ್ವೀಕರಿಸಿದರು. ಅದೇ ಕಾಲದಲ್ಲಿ ಗಯೆಯಲ್ಲಿಯ ಪವಿತ್ರವಾದ ವಟವೃಕ್ಷವೂ ಒಣಗಲು ಹತ್ತಿತ್ತು. ಅದನ್ನು ಚಿಗುರಿಸಲು ಶ್ರೀವಿದ್ಯಾಧೀಶರನ್ನು ಪ್ರಾರ್ಥಿಸಿದರು. ಅವರು ತೀರ್ಥಪ್ರೋಕ್ಷಣೆಯನ್ನು ಮಾಡಿ ಅದನ್ನು ಚಿಗುರಿಸಿದರು. ಶ್ರೀವಿದ್ಯಾಧೀಶರ ಶಿಷ್ಯರಿಗೆ ಹೆಚ್ಚು ಹಣ ಕೇಳದೆ ಪಿಂಡಪ್ರದಾನಕ್ಕೆ ಅನುಕೂಲ ಮಾಡಿಕೊಟ್ಟರು. ಶ್ರೀವಿದ್ಯಾಧೀಶರು ವಿಷ್ಣುಪಾದದ ಗುಡಿಯ ಆವರಣದಲ್ಲಿಯೇ ಉತ್ತರಾದಿಮಠವನ್ನು ಕಟ್ಟಿಸಿದರು. ಮಠದಲ್ಲಿ ಆದ ಅಡಿಗೆಯಿಂದಲೇ ಇಂದಿಗೂ ವಿಷ್ಣುಪಾದಕ್ಕೆ ನೈವೇದ್ಯವಾಗುವದು. ಗಯಾವಾಡರೆಲ್ಲ ಇಂದಿಗೂ ಮಾಧ್ವರಾಗಿದ್ದು ಇತ್ತೀಚಿಗೆ ಮಧ್ವಸೇವಾಸಮಿತಿ ಎಂಬ ಸಂಘ ಮಾಡಿಕೊಂಡಿರುವರು. ಶ್ರೀವಿದ್ಯಾಧೀಶರ ಆರಾಧನೆ ಮಾಡುವರು. ಸದಾನಂದ ಗುರ್ದಾ ಎಂಬ ಗಯಾವಾಡರು ಈ ಸಮಿತಿಯ ಕಾರ್ಯದರ್ಶಿಗಳಾಗಿರುವರು.)

ವೃಂದಾವನಂ ಗೋಕುಲಮಾಕುಲಾನಿ
ಕುರ್ವನ್ ಮನಾಂಸಿ ದ್ವಿಷತಾಂ ಮುಕುಂದಮ್ ।
ಅಸೌ ಕುರುಕ್ಷೇತ್ರಮಪೀಕ್ಷತೇ ಸ್ಮ
ಮಧ್ಯೇ ಸರಣ್ಯಾ ಮಥುರಾಮಯೋಧ್ಯಾಮ್ ॥ ೧೫೨ ॥

ಶ್ರೀವಿದ್ಯಾಧೀಶರು ಗಯಾದಿಂದ ತಮ್ಮ ಪ್ರಯಾಣವನ್ನು ಬದರೀಕ್ಷೇತ್ರದ ಕಡೆಗೆ ಮುಂದುವರೆಯಿಸಿ ಮಾರ್ಗದಲ್ಲಿ ಅಯೋಧ್ಯಾ ಮಥುರಾ ವೃಂದಾವನ ಗೋಕುಲ ಕುರುಕ್ಷೇತ್ರ ಇತ್ಯಾದಿ ಕ್ಷೇತ್ರಗಳನ್ನು ಸಂದರ್ಶಿಸಿದರು.

ಮಹಾಂತಿ ಕೃಚ್ಛ್ರಾಣಿ ವಿಧೂಯ ಮಾರ್ಗೇ
ಸ ಯೋಗಿಚಂದ್ರೋ ಬದರೀಮಯಾಸೀತ್ ।
ನಿರಸ್ಯ ನಿಸ್ತಂದ್ರ ತಮಸ್ತತಿರ್ದ್ರಾಕ್
ಪೂಷೇವ ಪೂರ್ವಾದ್ರಿತಟೀಂ ಪ್ರಭಾತೇ ॥ ೧೫೩ ॥

ಪ್ರಭಾತಕಾಲದಲ್ಲಿ ಸೂರ್ಯನು ಕತ್ತಲೆಯನ್ನು ತೊಡೆದುಹಾಕಿ ಉದಯಾಚಲವನ್ನೇರುವಂತೆ, ಮಾರ್ಗದಲ್ಲಿ ಚೋರವ್ಯಾಘ್ರಾದಿ ಅನೇಕ ಉಪದ್ರವಗಳನ್ನು ಲೆಕ್ಕಿಸದೆ ಯೋಗಿವರ್ಯರು ಶ್ರೀಬದರೀಕ್ಷೇತ್ರವನ್ನು ತಲುಪಿದರು.

ಸ ತತ್ರ ನಾರಾಯಣಮಾದಿದೇವಂ
ನತ್ವಾ ನರಂ ಚಾನತಪಾರಿಜಾತಮ್ ।
ಸ್ತವೈಃ ಪ್ರಶಸ್ತೈಃ ಸ್ತವನೀಯರೂಪೌ
ತುಷ್ಟಾವ ತುಷ್ಟ್ಯಾವತಿಮಗ್ನಚೇತಾಃ ॥ ೧೫೪ ॥

ಶ್ರೀ ಬದರೀಕ್ಷೇತ್ರದಲ್ಲಿ ಯೋಗಿಶ್ರೇಷ್ಠರಾದ ಶ್ರೀವಿದ್ಯಾಧೀಶಯತಿಗಳು ಪ್ರಣತಪಾರಿಜಾತನಾದ ನಾರಾಯಣನನ್ನೂ ನರನನ್ನೂ ಹರ್ಷಪುಲಕಿತರಾಗಿ ನಮಸ್ಕರಿಸಿದರು ಮತ್ತು ಶ್ರೇಷ್ಠವಾದ ಸ್ತುತಿಗಳಿಂದ ಸ್ತುತಿಸಿದರು.

ತತೋ ನಿವೃತ್ತೋ ಗುರುರೇಕಚಕ್ರ-
ಪುರೀಂ ಪರೀತಾಖಿಲಸಜ್ಜನಾಲಿಃ ।
ಕಲಿಂದಶೀತಾಚಲಕನ್ಯಕೋದ್ಯ-
ದ್ವೇಣ್ಯಂತರೇ ಪ್ರಾಪ ವಿಭಾಸಮಾನಾಮ್ ॥ ೧೫೫ ॥

ಶ್ರೀ ಬದರೀಕ್ಷೇತ್ರದಿಂದ ತಿರುಗಿ ಹೊರಟು, ಸಕಲಸಜ್ಜನ ಪರಿವಾರದಿಂದ ಕೂಡಿಕೊಂಡು, ಗಂಗಾಯಮುನೆಯರ ಮಧ್ಯದಲ್ಲಿದ್ದ ಏಕಚಕ್ರನಗರಕ್ಕೆ ಶ್ರೀಗಳವರು ದಯಮಾಡಿಸಿದರು.

ಯೋಗೇನ ತತ್ರಾತ್ಮತನುಂ ಜಿಹೀರ್ಷುಃ
ವಗಾಹ್ಯ ಗಂಗಾಸಲಿಲಂ ಸ ಜಾತು ।
ಆರಾಧ್ಯ ಸಾಕ್ಷಾದರವಿಂದನಾಭ-
ಮಭೋಜಯತ್ ಬ್ರಹ್ಮಕುಲಾನಿ ಮೃಷ್ಟಮ್ ॥ ೧೫೬ ॥

ಏಕಚಕ್ರನಗರದಲ್ಲಿದ್ದಾಗ ಯೋಗಸಾಮರ್ಥ್ಯದಿಂದ ತಮ್ಮ ಪಾರ್ಥಿವ ಶರೀರವನ್ನು ತ್ಯಜಿಸಬೇಕೆಂದು ಸಂಕಲ್ಪಮಾಡಿ, ಗಂಗಾಸ್ನಾನಮಾಡಿ, ಶ್ರೀದಿಗ್ವಿಜಯರಾಮದೇವರ ಪೂಜೆಯನ್ನು ಮಾಡಿ, ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನವನ್ನು ಮಾಡಿಸಿದರು.

ಸಂಭಾವಯನ್ ಕೇಶವರಾಮಧೀಮ-
ತ್ಪುರಸ್ಸರಾನ್ ಭೂಮಿಸುರಾನ್ ಪುರಸ್ತಾತ್ ।
ಕೃಪಾರ್ದ್ರದೃಷ್ಟ್ಯಾ ಕಲಿತಾವಲೋಕಃ
ಸಸ್ಮೇರವಕ್ತ್ರೇಂದುರಿದಂ ಜಗಾದ ॥ ೧೫೭ ॥

ನಂತರ, ಯತಿಶ್ರೇಷ್ಠರು ತಮ್ಮ ಪೂರ್ವಾಶ್ರಮದ ತಮ್ಮಂದಿರಾದ ಪಾಂಡುರಂಗಿ ಕೇಶವಾಚಾರ್ಯರು, ರಾಮಾಚಾರ್ಯರು ಮೊದಲಾದ ಪರಮಾಪ್ತ ಶಿಷ್ಯರನ್ನು ಬರಮಾಡಿಕೊಂಡು ಕೃಪಾದೃಷ್ಟಿಯಿಂದ ಅವರ ಕಡೆಗೆ ನೋಡುತ್ತ ಮಂದಸ್ಮಿತದಿಂದ ತಮ್ಮ ಸಂಕಲ್ಪವನ್ನು ತಿಳಿಸಿದರು.

ರಾಮಾಕೃತಿಂ ದಿಗ್ವಿಜಯಾಭಿರಾಮಾಂ
ಪ್ರಗೃಹ್ಯ ಚೇತಃ ಪ್ರತಿಯಾತ ಯೂಯಮ್ ।
ಜನೇತ್ರ ಯದ್ಗೌರವಮಾಹಿತಂ ವಃ
ತದೇವ ವೇದಾದ್ಯನಿಧೌ ವಿಧೇಯಮ್ ॥ ೧೫೮ ॥

ದಿಗ್ವಿಜಯರಾಮದೇವರ ಪ್ರತಿಮೆಯನ್ನು ತೆಗೆದುಕೊಂಡು ನೀವೆಲ್ಲ ತಿರುಗಿ ಹೋಗಿರಿ. ನಮ್ಮಲ್ಲಿ ಎಷ್ಟು ಗೌರವದಿಂದ ನಡೆದುಕೊಂಡಿರೋ ಅಷ್ಟೇ ಗೌರವದಿಂದ ವೇದನಿಧಿತೀರ್ಥರಲ್ಲಿಯೂ ನಡೆದುಕೊಳ್ಳಿರಿ.

ಪ್ರಾತಃ ಪ್ರಜಾಧೀಶ್ವರಹಾಯನೋದ್ಯ-
ತ್ಸಹಸ್ಯಮಾಸಾಸಿತಭೂತಘಸ್ರೇ ।
ವಿಶ್ವೈಕ ಹೃದ್ಯಾಚರಿತಃ ಸ ವಿದ್ಯಾ-
ಧೀಶೋ ರಮಾಧೀಶಪದಾಬ್ಜಮಾರ್ಶೀತ್ ॥ ೧೫೯ ॥

ಪ್ರಜಾಪತಿ ಸಂವತ್ಸರದ ಪುಷ್ಯಕೃಷ್ಣ ಚತುರ್ದಶಿಯ ದಿನ ಪ್ರಾತಃಕಾಲ ದಲ್ಲಿ ವಿಶ್ವವಂದ್ಯಚರಿತರಾದ ಶ್ರೀವಿದ್ಯಾಧೀಶಯೋಗಿಗಳು ನಾರಾಯಣನ ಪಾದಕಮಲಗಳನ್ನು ಸೇರಿದರು.

ವೃಂದಾರಕದ್ವೀಪವತೀತಟೇ ತದ್
ವೃಂದಾವನಂ ನಂದಿತಸಾಧುವೃಂದಮ್ ।
ವೃಂದಾರು ಮಂದಾರ ಮಹೀಜಶೈಲೀ
ನುವಿಂದತಾಮಂದ ಬಲಿಪ್ರದೀಪಮ್ ॥ ೧೬೦ ॥

ಗಂಗಾನದೀತಟಾಕದಲ್ಲಿ ಸಜ್ಜನರಿಗೆಲ್ಲ ಸಂತೋಷಕೊಡುತ್ತ ನಿತ್ಯದೀಪ ನೈವೇದ್ಯಗಳಿಂದ ಆರಾಧಿತವಾದ ಶ್ರೀಗಳವರ ವೃಂದಾವನವು ಭಕ್ತಜನರಿಗೆ ಕಲ್ಪವೃಕ್ಷಪ್ರಾಯವಾಗಿದೆ.

ಅದೋ ವಿಯೋಗಾದತಿದೀರ್ಘದೀರ್ಘ-
ಮತೀತ್ಯ ಪಂಥಾನಮಮೀ ಕ್ರಮೇಣ ।
ಮಾಸೈರನೇಕೈರಪಿ ಧರ್ಮಪುರ್ಯಾಃ
ಸಮೀಪಮಾಯುಃ ಸಮುದೀರ್ಣಖೇದಾಃ ॥ ೧೬೧ ॥

ಶ್ರೀವಿದ್ಯಾಧೀಶರ ವಿಯೋಗದಿಂದ ಮಾರ್ಗವು ಹೆಚ್ಚುಹೆಚ್ಚು ದೀರ್ಘ ವೆನಿಸಿದ ಶ್ರೀವಿದ್ಯಾಧೀಶರ ಶಿಷ್ಯರು ಅನೇಕ ತಿಂಗಳುಗಳವರೆಗೆ ಪ್ರಯಾಣ ಮಾಡಿ ಧರ್ಮಪುರಿಗೆ ಬಂದರು.

ಶ್ರುತ್ವಾ ಗುರುಂ ತಾದೃಗವಸ್ಥಮೇತಾನ್
ವಿನಾ ತಮೇತಾನಪನೀತಧೈರ್ಯಃ ।
ಪಪಾತ ಶಾಖೀವ ಪಟಿಷ್ಠವಾತ-
ವಿಪಾಟಿತೋ ವೇದನಿಧೀಂದ್ರಯೋಗೀ ॥ ೧೬೨ ॥

ಗುರುಗಳಿಲ್ಲದೇ ತಿರುಗಿ ಬಂದ ಶಿಷ್ಯರನ್ನು ನೋಡಿ, ಗುರುಗಳು ಪಾರ್ಥಿವ ಶರೀರವನ್ನು ತ್ಯಜಿಸಿ ವೃಂದಾವನಸ್ಥರಾದುದನ್ನು ಕೇಳಿ, ಶ್ರೀವೇದನಿಧಿತೀರ್ಥರು ಚಂಡಮಾರುತದ ವೇಗಕ್ಕೆ ಸಿಕ್ಕ ವೃಕ್ಷದಂತೆ ಪರಮದುಃಖಿತರಾದರು.

ತತೋ ಮಠೇ ತತ್ಕ್ಷಣಮೇವ ಮೂಲ-
ರಾಮಸ್ಯ ಪಾರ್ಶ್ವೇ ರಮಣೀಯಮೇನಮ್ ।
ವಿಧಾಯ ಪೂಜಾವಿಧಿಮಾದರೇಣ
ಚಕ್ರೇ ಸ ವಕ್ರೇತರಚಿತ್ತವೃತ್ತಿಃ ॥ ೧೬೩ ॥

ಬಳಿಕ ಗುರುಗಳ ವಿಯೋಗದುಃಖವನ್ನು ಅವರಿಸಿಕೊಂಡು ಗೋದಾವರಿ ಯಲ್ಲಿ ಸ್ನಾನಮಾಡಿ ಗುರುಗಳು ಕಳಿಸಿಕೊಟ್ಟ ಶ್ರೀದಿಗ್ವಿಜಯರಾಮನನ್ನು

ಸ್ವೀಕರಿಸಿ ಧರ್ಮಪುರಿಯ ಮಠದಲ್ಲಿ ಶ್ರೀಮೂಲರಾಮದೇವರನ್ನೂ ಶ್ರೀದಿಗ್ವಿಜಯ ರಾಮದೇವರನ್ನೂ ಶ್ರೀವೇದನಿಧಿತೀರ್ಥರು ಅರ್ಚಿಸಿದರು.*

**ಯೇ ಶೃಣ್ವಂತಿ ಗೃಣಂತಿ ಯೇ ಪ್ರತಿದಿನಂ ಚಿತ್ರಂ ಚರಿತ್ರಂ ಗುರೋಃ**
**ಏತತ್ಪುಸ್ತಕಮುಸ್ತಕಲ್ಮಷಭರಂ ಯೈರರ್ಚ್ಯತೇ ಸ್ವಾಲಯೇ**
**ಶೇಷಾಮೇವ ಹರಿರ್ಗುರೂತ್ತಮಹೃದಂಭೋಜ ಪ್ರಕ್ಲೃಪ್ತಾಸಿಕಃ**
**ತುಷ್ಟಃ ಸ್ಪಷ್ಟತರಂ ದದಾತಿ ಚ ಚತುರ್ವರ್ಗಂ ನಿಸರ್ಗೋಜ್ವಲಮ್**
**|| ೧೬೪ ||**

ಶ್ರೀವಿದ್ಯಾಧೀಶ ಗುರುವರ್ಯರ ಜ್ಞಾನಭಕ್ತಿ ವೈರಾಗ್ಯ ಪ್ರಚುರವಾದ ಈ ಚರಿತ್ರೆಯನ್ನು ಕೇಳುವವರಿಗೂ, ಪಾರಾಯಣ ಮಾಡುವವರಿಗೂ, ಸಕಲ ದುರಿತ ಪರಿಹಾರಕವಾದ ಈ ಚರಿತ್ರಗ್ರಂಥವನ್ನು ಅರ್ಚಿಸುವವರಿಗೂ ಶ್ರೀಗುರು ವರ್ಯರ ಹೃದಯಕಮಲಾಧಿಷ್ಠಿತನಾದ ಶ್ರೀಹರಿಯು ಧರ್ಮಾರ್ಥಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ದಯಪಾಲಿಸುವನು.

ಇತಿ ಶ್ರೀ ಜನಾರ್ದನಸೂರಿ ವಿರಚಿತ ಶ್ರೀವಿದ್ಯಾಧೀಶವಿಜಯ ಮಹಾಕಾವ್ಯದ ಸಾರಸಂಗ್ರಹರೂಪವಾದ ಪಾಂಡುರಂಗಿ ತಮಣಾಚಾರ್ಯಪುತ್ರ ಕೃಷ್ಣಾಚಾರ್ಯನಿಂದ ಸಂಗ್ರಹಿಸಲ್ಪಟ್ಟ ಮತ್ತು ಕನ್ನಡದಲ್ಲಿ ಅನುವಾದಿಸಲ್ಪಟ್ಟ '**ಅಣುವಿದ್ಯಾಧೀಶವಿಜಯ**' ವು ಮುಗಿಯಿತು.

---

* ೧೪೪ ರಿಂದ ೧೬೩ ರ ವರೆಗಿನ ಶ್ಲೋಕಗಳು ಹನ್ನೊಂದನೆಯ ಸರ್ಗದಿಂದ ಆಯ್ದುಕೊಳ್ಳಲ್ಪಟ್ಟಿವೆ.

೧೬೪ ನೆಯ ಕೊನೆಯ ಮಂಗಲಶ್ಲೋಕವು ಹನ್ನೆರಡನೆಯ ಸರ್ಗದ ಕೊನೆಯದು ಮತ್ತು ಈ ಕಾವ್ಯದ ಕೊನೆಯ ಮಂಗಲಶ್ಲೋಕವು.

ಶ್ರೀ ಪೂರ್ಣಬೋಧಗುರುವಂಶಕಥಾಕಲ್ಪತರೌ

# ಶ್ರೀವಿದ್ಯಾಧೀಶಚರಿತಮ್

**ಮಂಗಲ ಶ್ಲೋಕಗಳು**

**ಪ್ರಣಮ್ಯ ಚರಣದ್ವಂದ್ವಂ ಬಾದರಾಯಣ ಮಧ್ವಯೋಃ ।**
**ಜಗದ್ಗುರ್ವನ್ವಯಕಥಾಂ ತತ್ಪ್ರೀತ್ಯೈ ಕೀರ್ತಯಾಮ್ಯಹಮ್ ॥**

ಶ್ರೀ ಬಾದರಾಯಣದೇವರು ಮತ್ತು ಶ್ರೀಮಧ್ವಾಚಾರ್ಯರು ಇವರ ಪಾದಗಳಿಗೆ ನಮಸ್ಕರಿಸಿ ಅವರ ಪ್ರೀತಿಸಂಪಾದನೆಗಾಗಿ ಜಗದ್ಗುರುಗಳ ಪರಂಪರೆಯ ಕಥೆಯನ್ನು ವರ್ಣಿಸುವೆನು.

**ಅಥ ವಿದ್ಯಾಧೀಶತೀರ್ಥಮಾಹಾತ್ಮ್ಯಂ ಲೋಕವಿಶ್ರುತಮ್ ।**
**ಶ್ರೀವಿದ್ಯಾಧೀಶವಿಜಯೇ ವರ್ಣಿತಂ ಪೂರ್ವಮೇವ ಹಿ ॥ ೨ ॥**
**ಲಿಖಿತ್ವಾ ಸ್ಥಾಪಿತಂ ಪೂರ್ವಂ ಮಠೇ ಪ್ರಾಕೃತಭಾಷಯಾ ।**
**ತತ್ಸರ್ವಮವಲೋಕ್ಯಾಹಂ ಸಂಕುಚ್ಯ ಪರಿಕೀರ್ತಯೇ ॥ ೩ ॥**

ಲೋಕವಿಖ್ಯಾತವಾದ ಶ್ರೀವಿದ್ಯಾಧೀಶತೀರ್ಥರ ಮಹಿಮೆಯು ಶ್ರೀವಿದ್ಯಾಧೀಶವಿಜಯದಲ್ಲಿ ಈಗಾಗಲೇ ವರ್ಣಿಸಲ್ಪಟ್ಟಿದೆ. ಮಠದಲ್ಲಿ ಕನ್ನಡ ಭಾಷೆಯಲ್ಲಿ ಬರೆದೂ ಇಡಲ್ಪಟ್ಟಿದೆ. ಇದೆಲ್ಲವನ್ನೂ ನೋಡಿ ಇಲ್ಲಿ ಸಂಕ್ಷಿಪ್ತವಾಗಿ ವರ್ಣಿಸುವೆನು.

**ಶ್ರೀವಿದ್ಯಾಪತಿತೀರ್ಥರಿಗೆ ಸನ್ಯಾಸಾಶ್ರಮದಾನ**

**ತತೋ ವೇದವ್ಯಾಸತೀರ್ಥಾಃ ಸ್ವೀಯಂ ಶಿಷ್ಯಂ ಪುರಾತನಮ್ ।**
**ಸಮಾಹೂಯ ದದುಃ ತಸ್ಮೈ ಸನ್ನ್ಯಾಸಂ ವಿಧಿಪೂರ್ವಕಮ್ ॥**

ಶ್ರೀವೇದವ್ಯಾಸತೀರ್ಥರು ತಮ್ಮ ವಯಸ್ಸಾದ ಶಿಷ್ಯರೊಬ್ಬರನ್ನು ಕರೆಯಿಸಿಕೊಂಡು ಅವರಿಗೆ ವಿಧಿಪೂರ್ವಕವಾಗಿ ಸನ್ನ್ಯಾಸಾಶ್ರಮವನ್ನು ಕೊಟ್ಟರು.

**ತಸ್ಮೈ ವಿದ್ಯಾಪತಿರಿತಿ ನಾಮ ದತ್ವಾ ಗುರೂತ್ತಮಾಃ ।**
**ಅಣುಸಂಸ್ಥಾನಮಪಿ ತೇ ದದುಃ ಪ್ರೀತಿಪುರಸ್ಸರಮ್ ॥ ೫ ॥**

ಗುರುಶ್ರೇಷ್ಠರಾದ ಶ್ರೀವೇದವ್ಯಾಸತೀರ್ಥರು ತಾವು ಸನ್ಯಾಸವನ್ನು ಕೊಟ್ಟ ಆ ಶಿಷ್ಯರಿಗೆ ವಿದ್ಯಾಪತಿತೀರ್ಥರು ಎಂದು ಹೆಸರಿಟ್ಟು ಅವರಿಗೆ ಪ್ರೀತಿ ಪೂರ್ವಕವಾಗಿ ಅಣುಸಂಸ್ಥಾನವನ್ನು ಕೊಟ್ಟರು.

**ಮಹಾಪಾಂಡಿತ್ಯಸಂಪನ್ನಾಃ ಚಕ್ರುಃ ದಿಗ್ವಿಜಯಂ ಬಹು ।**
**ತದಾ ವೇದವ್ಯಾಸತೀರ್ಥಸ್ವಪ್ನೇ ಶ್ರೀಮದ್ರಘೂತ್ತಮಾಃ ॥ ೬ ॥**

**ಸಂಬೋಧಯಿತ್ವಾ ಪ್ರೋಚುಃ ತಾನ್ ವೇದವ್ಯಾಸ-**
**ಮುನೀಶ್ವರಾನ್ ।**
**ಭೋ ಭೋಃ ಶೃಣ್ವಂತ್ವಸ್ಮದೀಯವಾಕ್ಯಂ**
**ವಿದ್ಯಾಪತಿಸ್ತ್ವಯಮ್ ॥ ೭ ॥**

**ಚಿರಸ್ಥಾಯೀ ನ ಭವತಿ ವಿದ್ಯಾಧೀಶಂ ಪರಂ ಕುರು ।**

ಮಹಾಪಾಂಡಿತ್ಯದಿಂದ ಕೂಡಿದ ಶ್ರೀವಿದ್ಯಾಪತಿತೀರ್ಥರು ಅಣುಸಂಸ್ಥಾನದೊಂದಿಗೆ ಅನೇಕಕಡೆಗೆ ದಿಗ್ವಿಜಯ ಮಾಡಿದರು. ಮುಂದೆ ಒಂದುದಿನ ಶ್ರೀರಘೂತ್ತಮತೀರ್ಥರು ಶ್ರೀವೇದವ್ಯಾಸತೀರ್ಥರ ಸ್ವಪ್ನದಲ್ಲಿ ಕಾಣಿಸಿಕೊಂಡು ಅವರಿಗೆ ಹೀಗೆ ಹೇಳಿದರು. 'ನೀವು ಈಗ ಆಶ್ರಮಕೊಟ್ಟ ಶ್ರೀವಿದ್ಯಾಪತಿ ತೀರ್ಥರು ಬಹಳಕಾಲ ಬದುಕಿರಲಾರರು. ಆದ್ದರಿಂದ ಇನ್ನೊಬ್ಬರಿಗೆ ಆಶ್ರಮ ಕೊಟ್ಟು ಅವರಿಗೆ ಶ್ರೀವಿದ್ಯಾಧೀಶರೆಂದು ನಾಮಕರಣ ಮಾಡಿರಿ.'

ಶ್ರೀವಿದ್ಯಾಧೀಶತೀರ್ಥರಿಗೆ ಸನ್ಯಾಸಾಶ್ರಮದಾನ

**ಏವಂ ಸ್ವಪ್ನೇ ಗುರುವಚಃ ಶ್ರುತ್ವೋತ್ಥಾಯ ಗುರೂತ್ತಮಾಃ ॥**
**ಚಿಂತಯಾಮಾಸುರತ್ಯಂತಂ ತೇಷು ಸ್ನೇಹಸಮನ್ವಿತಾಃ ।**

ತಮ್ಮ ಗುರುಗಳಾದ ಶ್ರೀರಘೂತ್ತಮತೀರ್ಥರು ಸ್ವಪ್ನದಲ್ಲಿ ಹೀಗೆ ಹೇಳಿದ್ದನ್ನು ಕೇಳಿ ಗುರುಶ್ರೇಷ್ಠರಾದ ಶ್ರೀವೇದವ್ಯಾಸತೀರ್ಥರು ಚಿಂತೆಗೊಳಗಾದರು. ಅವರು ಶ್ರೀವಿದ್ಯಾಪತಿತೀರ್ಥರಲ್ಲಿ ಬಹಳ ಸ್ನೇಹವುಳ್ಳವರಾಗಿದ್ದರು.

**ಅಥ ಶ್ರೀಮತ್ಪಾಂಡುರಂಗೀ ನರಸಿಂಹಾಖ್ಯಭೂಸುರಾನ್ ॥೯॥**
**ಸಮಾನೀಯ ದದುಃ ತೇಭ್ಯಃ ತುರ್ಯಾಶ್ರಮಮತಂದ್ರಿತಾಃ ।**

ಬಳಿಕ ಪಾಂಡುರಂಗೀವಂಶದಲ್ಲಿ ಹುಟ್ಟಿದ ನರಸಿಂಹಾಚಾರ್ಯರೆಂಬ ಪಂಡಿತೋತ್ತಮರನ್ನು ಕರೆಯಿಸಿಕೊಂಡು ಅವರಿಗೆ ಸನ್ಯಾಸಾಶ್ರಮವನ್ನು ಕೊಟ್ಟರು.

**ತೇಷಾಂ ದಕ್ಷಿಣಕರ್ಣೇಽಥ ವೇದವ್ಯಾಸಮುನೀಶ್ವರಾಃ ||೧೦||**
**ವಾಮೇ ತು ವಿದ್ಯಾಪತಯಃ ಉಪದೇಶಂ ಪ್ರಚಕ್ರಿರೇ ।**

ಅವರ ಬಲಗಿವಿಯಲ್ಲಿ ಶ್ರೀವೇದವ್ಯಾಸತೀರ್ಥರೂ ಎಡಗಿವಿಯಲ್ಲಿ ಶ್ರೀವಿದ್ಯಾಪತಿತೀರ್ಥರೂ ಉಪದೇಶ ಮಾಡಿದರು.

**ಅಭಿಷೇಕಂ ತತಃ ಕೃತ್ವಾ ವಿದ್ಯಾಧೀಶಮುನೀಶ್ವರಾಃ ||೧೧||**
**ಇತಿ ನಾಮ ದದುಃ ಪ್ರೀತಾಃ ವೇದವ್ಯಾಸಮುನೀಶ್ವರಾಃ ।**
**ಜಿತಾಸನಾರಿಷಡ್ವರ್ಗಾಃ ವಿದ್ಯಾಧೀಶಾಃ ವಿರೇಜಿರೇ || ೧೨ ||**

ಶ್ರೀವೇದವ್ಯಾಸತೀರ್ಥರು ಆಶ್ರಮದ ಅಭಿಷೇಕವಮಾಡಿ ಅವರಿಗೆ ಶ್ರೀವಿದ್ಯಾಧೀಶತೀರ್ಥರು ಎಂದು ನಾಮಕರಣವಮಾಡಿದರು ಅರಿಷಡ್ವರ್ಗಗಳನ್ನು ಜಯಿಸಿದ ಶ್ರೀವಿದ್ಯಾಧೀಶರು ಬಹಳವಾಗಿ ಶೋಭಿಸಿದರು.

**ದತ್ವಾ ವಂಶಾಭಿಧಂ ರಾಮಂ ವ್ಯಾಸಂ ಚ ಸಿಕತಾಮಯಮ್ ।**
**ಸರ್ವದಿಗ್ವಿಜಯಾರ್ಥಂ ತಾನ್ ಚಕ್ರುಃ ಪ್ರೇಷಯಿತುಂ ಮನಃ ||**

ವಂಶರಾಮದೇವರನ್ನೂ ವ್ಯಾಸಮುಷ್ಟಿಯನ್ನೂ ಶ್ರೀವಿದ್ಯಾಧೀಶರಿಗೆ ಕೊಟ್ಟು ಅವರನ್ನು ದಿಗ್ವಿಜಯಕ್ಕೆ ಕಳಿಸಬೇಕೆಂದು ಶ್ರೀವೇದವ್ಯಾಸತೀರ್ಥರು ಆಲೋಚಿಸಿದರು.

ಚಾಮರಾಜೇಂದ್ರರಾಜನ ಅನ್ನದೋಷ ಪರಿಹಾರ

**ಏತಸ್ಮಿನ್ನೇವ ಸಮಯೇ ಶ್ರೀರಂಗಾಭಿಧಪಟ್ಟಣೇ ।**
**ಚಾಮರಾಜಾಭಿಧೋ ರಾಜಾ ಸ್ವೀಯಂ ರಾಜ್ಯಮಪಾಲಯತ್||**

ಇದೇ ಸಮಯದಲ್ಲಿ ಶ್ರೀರಂಗಪಟ್ಟಣದಲ್ಲಿ ಚಾಮರಾಜನೆಂಬ ರಾಜನು ರಾಜ್ಯವಾಳುತ್ತಿದ್ದನು.

**ಭೋಜನಾವಸರೇ ತಸ್ಯ ನಿತ್ಯಂ ಪ್ರಾಚೀನಕರ್ಮಣಾ ।**
**ಕ್ರಿಮಿರೂಪೋ ಹಿ ಅನ್ನರಾಶಿಃ ಅದೃಶ್ಯತ ಮಹೀಪತೇಃ || ೧೩ ||**

ಈ ಚಾಮರಾಜನೆಂಬ ರಾಜನಿಗೆ ಅವನ ಪ್ರಾಚೀನ ಕರ್ಮದಿಂದ ಊಟ ಮಾಡುವಾಗ ಅನ್ನದ ರಾಶಿಯೆಲ್ಲ ಕ್ರಿಮಿಯ ರಾಶಿಯಂತೆ ಕಾಣುತ್ತಿತ್ತು.

ಶ್ರುತ್ವಾ ವೇದವ್ಯಾಸತೀರ್ಥಮಾಹಾತ್ಮ್ಯಂ ಸ ನರಾಧಿಪಃ ।
ಪ್ರೇಷಯಾಮಾಸ ವಿಜ್ಞಪ್ತಿಪತ್ರಮಾಕರಣಾಯ ತಾನ್ ॥ ೧೭ ॥

ಈ ಚಾಮರಾಜೇಂದ್ರರಾಜನು ಶ್ರೀವೇದವ್ಯಾಸತೀರ್ಥರ ಮಹಿಮೆಯನ್ನು ಕೇಳಿ ಅವರನ್ನು ತನ್ನಲ್ಲಿಗೆ ಕರೆಯಿಸಿಕೊಳ್ಳಲು ವಿಜ್ಞಪ್ತಿಪತ್ರಿಕೆಯನ್ನು ಕಳಿಸಿಕೊಟ್ಟನು.

ತಾಂ ಪತ್ರಿಕಾಂ ವಾಚಯಿತ್ವಾ ವಿದ್ಯಾಧೀಶಮುನೀಶ್ವರಾನ್ ।
ಪ್ರೀತ್ವಾ ತೇ ಪ್ರೇಷಯಾಮಾಸುಃ ಚಾಮರಾಜಸಭಾಂ ಪ್ರತಿ ॥

ಆ ವಿಜ್ಞಾಪನಾಪತ್ರಿಕೆಯನ್ನು ಓದಿ ಶ್ರೀವೇದವ್ಯಾಸತೀರ್ಥರು ತಮ್ಮ ಶಿಷ್ಯರಾದ ಶ್ರೀವಿದ್ಯಾಧೀಶತೀರ್ಥರನ್ನು ಚಾಮರಾಜನ ಸಭೆಗೆ ಕಳಿಸಿಕೊಟ್ಟರು.

ಗತೇಷು ತೇಷು ರಾಜಾ ತಾನಭಿಗಮ್ಯಾಖಿಲೈಃ ಸಹ ।
ನಿರಂತರಂ ಪೂಜಯನ್ ತಾನ್ ಸ್ಥಾಪಯಾಮಾಸ ಪಟ್ಟಣೇ ॥

ಶ್ರೀವಿದ್ಯಾಧೀಶರು ಗುರುಗಳ ಆಜ್ಞೆಯಂತೆ ಶ್ರೀರಂಗಪಟ್ಟಣಕ್ಕೆ ಹೋಗಲು ರಾಜನು ಪರಿವಾರ ಸಮೇತನಾಗಿ ಅವರನ್ನು ಎದುರುಗೊಂಡು ಬಹಳವಾಗಿ ಗೌರವಿಸಿ ಶ್ರೀರಂಗಪಟ್ಟಣದಲ್ಲಿಯೇ ಇರಿಸಿಕೊಂಡನು.

ಭೋಜನಾವಸರೇ ಪ್ರಾಪ್ತೇ ಶ್ರೀಪಾದೈರಭಿಮಂತ್ರಿತಮ್ ।
ಅನ್ನಮಾನೀಯ ಬುಭುಜೇ ಕೃಮಯೋಽದೃಶ್ಯತಾಂ ಗತಾಃ ॥

ಚಾಮರಾಜನು ಶ್ರೀವಿದ್ಯಾಧೀಶರು ಅಭಿಮಂತ್ರಿಸಿ ಕಳಿಸಿದ ಅನ್ನವನ್ನು ಹಾಕಿಕೊಂಡು ಭೋಜನಮಾಡಲು ಅವನಿಗೆ ತನ್ನ ಆಹಾರದಲ್ಲಿ ಯಾವ ಕ್ರಿಮಿಗಳೂ ಕಾಣಿಸಲಿಲ್ಲ.

ರಾಜಾ ತದದ್ಭುತಂ ದೃಷ್ಟ್ವಾ ತೇಷು ಭಕ್ತಿಸಮನ್ವಿತಃ ।
ದದೌ ತೇಭ್ಯಃ ಚಿಣಿಗ್ರಾಮಂ ಸಂತುಷ್ಟಃ ತೇನ ಕರ್ಮಣಾ ॥೨೦

ರಾಜನು ಶ್ರೀವಿದ್ಯಾಧೀಶರ ಈ ಅದ್ಭುತವಾದ ಮಹಿಮೆಯನ್ನು ಕಂಡು ಅವರಲ್ಲಿ ಪರಮಭಕ್ತಿಯುಳ್ಳವನಾಗಿ ಅವರು ತನ್ನ ವ್ಯಾಧಿಯನ್ನು ಪರಿಹರಿಸಿದ್ದಕ್ಕೆ ಪರಮಸಂತುಷ್ಟನಾಗಿ ಅವರಿಗೆ ಚಿಣಿ ಎಂಬ ಗ್ರಾಮವನ್ನು ದಾನವಾಗಿ

ಕೊಟ್ಟನು. (ಚಾಮರಾಜನು ಚಿಣ್ಯ, ವೃತಿ ಮತ್ತು ಸಣ್ಣ ಚಿಕ್ಕೂರು ಎಂಬ ಮೂರು ಗ್ರಾಮಗಳನ್ನು ಮಠಕ್ಕೆ ಉಂಬಳಿಯಾಗಿ ಕೊಟ್ಟನೆಂದು ತಿಳಿದು ಬರುತ್ತದೆ. ಈ ಗ್ರಾಮಗಳು ಇಂದಿಗೂ ಮಠಕ್ಕೆ ಉಂಬಳಿಯಾಗಿ ನಡೆಯುತ್ತಿವೆ. ಈ ಸಂದರ್ಭದಲ್ಲಿ ಶ್ರೀವಿದ್ಯಾಧೀಶರು ರಾಜನ ಪ್ರಾರ್ಥನೆಯಂತೆ ಶ್ರೀರಂಗಪಟ್ಟಣದಿಂದ ಹೊರಟು ಮೂರು ಪ್ರಹರಕಾಲ ಸಂಚಾರ ಮಾಡಿ ಈ ಗ್ರಾಮಗಳನ್ನು ಸುತ್ತಾಡಿ ಬಂದರು ಮತ್ತು ಇವುಗಳನ್ನು ಉಂಬಳಿಯಾಗಿ ಪಡೆದರು. ಮಾರ್ಗದಲ್ಲಿ ದೊರೆತ ಪ್ರಾಣದೇವರ ಪ್ರತಿಮೆಯನ್ನು ಶ್ರೀರಂಗಪಟ್ಟಣದ ಹತ್ತಿರದಲ್ಲಿ ಕಾವೇರೀ ತೀರದಲ್ಲಿರುವ ಚಂದಗುರು ಎಂಬ ಗ್ರಾಮದಲ್ಲಿ ಪ್ರತಿಷ್ಠಾಪನೆ ಮಾಡಿದರು. ಈಗ ಶ್ರೀರಂಗಪಟ್ಟಣದಲ್ಲಿ ಶ್ರೀ ಉತ್ತರಾದಿಮಠದಲ್ಲಿ ಇರುವ ಪ್ರಾಣದೇವರು ಶ್ರೀವಿದ್ಯಾಧೀಶ ಪ್ರತಿಷ್ಠಿತವಾಗಿದೆ.)

ಶ್ರೀವೇದವ್ಯಾಸತೀರ್ಥರ ವೃಂದಾವನ ಪ್ರವೇಶ

> ತತೋ ವೇದವ್ಯಾಸತೀರ್ಥಾಃ ತಾನಾಹೂಯ ಮುದಾನ್ವಿತಾಃ ।
> ತೇಭ್ಯೋ ದತ್ವಾ ಅದೃಷ್ಟಲಬ್ಧಂ ಮಹಾಸಂಸ್ಥಾನಮಾಚಿರೇ ॥

ಬಳಿಕ ಶ್ರೀವೇದವ್ಯಾಸತೀರ್ಥರು ಶ್ರೀವಿದ್ಯಾಧೀಶರನ್ನು ಶ್ರೀರಂಗಪಟ್ಟಣದಿಂದ ತಿರುಗಿ ಕರೆಯಿಸಿಕೊಂಡರು. ಅವರ ಉತ್ತಮ ಅದೃಷ್ಟದಿಂದ ಅವರಿಗೆ ದೊರೆತ ಶ್ರೀಮದುತ್ತರಾದಿಮಠದ ಮಹಾಸಂಸ್ಥಾನವನ್ನು ಅವರಿಗೆ ಒಪ್ಪಿಸುತ್ತ ಹೀಗೆಂದು ಹೇಳಿದರು.

> ಸಮ್ಮಾನಿತಾಃ ಯಥಾಸ್ಮಾಭಿಃ ಕೃಷ್ಣದ್ವೈಪಾಯನಾಃ ಪುರಾ ।
> ತಥಾ ಭವದ್ಭಿರಪಿ ತೇ ಮಾನನೀಯಾಃ ಪ್ರಯತ್ನತಃ ॥ ೨೨ ॥

ನಾವು ಈವರೆಗೆ ಆದರದಿಂದ ಕಂಡಂತೆ ನೀವೂ ಕೂಡ ನಮ್ಮಿಂದ ಈ ಮೊದಲು ಆಶ್ರಮವನ್ನು ಪಡೆದ ಕೃಷ್ಣದ್ವೈಪಾಯನರನ್ನು ಆದರದಿಂದ ಕಾಣಬೇಕು ಎಂದು ಹೇಳಿದರು. (ಚಿಂಚೋಳಿ ಕೃಷ್ಣದ್ವೈಪಾಯನಾಚಾರ್ಯ ಎಂಬವರು ಶ್ರೀವೇದವ್ಯಾಸತೀರ್ಥರಿಂದ ಆಶ್ರಮವನ್ನು ಪಡೆದು ಮಧ್ವಮತ ಪ್ರಚಾರ ಮಾಡುತ್ತ ಸಂಚಾರ ಮಾಡುತ್ತಿದ್ದರು. ಶ್ರೀವೇದವ್ಯಾಸತೀರ್ಥರೊಡನೆ ಅವರು ಸ್ವಲ್ಪ ವಿರಸವನ್ನೂ ಮಾಡಿಕೊಂಡಿದ್ದರು. ಆದರೂ ಶ್ರೀವೇದವ್ಯಾಸತೀರ್ಥರು ಅವರನ್ನು ಆದರದಿಂದಲೇ ಕಾಣುತ್ತಿದ್ದರು. ಅವರೊಡನೆ ನೀವೂ

ಕೂಡ ಆದರದಿಂದ ಇರಬೇಕು ಎಂದು ಮಹಾಸಂಸ್ಥಾನವನ್ನು ಕೊಡುವಾಗ ಶ್ರೀವೇದವ್ಯಾಸತೀರ್ಥರು ಶ್ರೀವಿದ್ಯಾಧೀಶತೀರ್ಥರಿಗೆ ಸೂಚನೆ ಕೊಟ್ಟದ್ದನ್ನು ಇಲ್ಲಿ ಹೇಳಲಾಗಿದೆ. ಈ ಕೃಷ್ಣದ್ವೈಪಾಯನರು ಶ್ರೀ ಕಂಬಾಲೂರು ರಾಮಚಂದ್ರತೀರ್ಥರಿಂದ ಆಶ್ರಮವನ್ನು ಪಡೆದಿದ್ದರೆಂದೂ ಅವರೊಡನೆ ವಿರಸ ಮಾಡಿಕೊಂಡು ಶ್ರೀವೇದವ್ಯಾಸತೀರ್ಥರ ಕಡೆಗೆ ಬಂದಿದ್ದರೆಂದೂ ಮುಂದೆ ಇವರೊಡನೆಯೂ ವಿರಸಮಾಡಿಕೊಂಡರೆಂದೂ ಒಂದು ಪರಂಪರೆಯಿದೆ.)

ಇತ್ಯುಕ್ತ್ವಾ ಪಿನುಗೊಂಡ್ಯಾಂ ತೇ ಕೌಂಡಿಣ್ಯಾಖ್ಯನದೀತಟೇ ।
ರಾಮವೇದವ್ಯಾಸಪೂಜಾಂ ವಿಧಾಯ ಪರಯಾ ಮುದಾ ॥೨೩॥

ಸಿದ್ಧಾರ್ಥ್ಯಬ್ದೇ ಚೈತ್ರಶುಕ್ಲೇ ದ್ವಿತೀಯಾಯಾಂ ಗುರೂತ್ತಮಾಃ
ತ್ಯಕ್ತ್ವಾ ದೇಹಂ ಸ್ವಸ್ಥಚಿತ್ತಾಃ ಪರಲೋಕಂ ಪ್ರಪೇದಿರೇ ॥೨೪

ಶ್ರೀವೇದವ್ಯಾಸತೀರ್ಥರು ಕೌಂಡಿಣ್ಯನದೀತೀರದಲ್ಲಿರುವ ಪೆನುಗೊಂಡೆಯಲ್ಲಿ ಶ್ರೀ ಮೂಲರಾಮದೇವರ ಮತ್ತು ವ್ಯಾಸಮುಷ್ಟಿಗಳ ಪೂಜೆಯನ್ನು ಪರಮಸಂತೋಷದಿಂದ ಮಾಡಿ ಸಿದ್ಧಾರ್ಥಿಸಂವತ್ಸರ ಚೈತ್ರಶುದ್ಧ ದ್ವಿತೀಯಾದ ದಿವಸ ತಮ್ಮ ಈ ದೇಹವನ್ನು ಬಿಟ್ಟು ಶಾಂತಚಿತ್ತದಿಂದ ಪರಲೋಕವನ್ನೈದಿದರು.

ಶ್ರೀವೇದನಿಧಿತೀರ್ಥರಿಗೆ ಆಶ್ರಮದಾನ

ತತೋ ವಿದ್ಯಾಧೀಶತೀರ್ಥಾಃ ಮಹಾಸಂಸ್ಥಾನಸಂಯುತಾಃ ।
ಪಿನಗುಂಡಿಸ್ಥವಿದ್ವದ್ಭ್ಯಃ ದತ್ವಾ ತುರ್ಯಾಶ್ರಮಂ ಮುದಾ ॥

ಕೃತ್ವಾಭಿಷೇಕಂ ತೈಃ ಸಾಕಂ ದೇವಪೂಜಾಂ ವಿಧಾಯ ಚ ।
ವೇದನಿಧ್ಯಾಖ್ಯತೀರ್ಥೋಽಯಮಿತಿ ನಾಮ ದದುಃ ತದಾ ॥೨೬॥

ಬಳಿಕ ಶ್ರೀವಿದ್ಯಾಧೀಶತೀರ್ಥರು ಮಹಾಸಂಸ್ಥಾನವನ್ನು ಪಡೆದು ಪೆನುಗೊಂಡಿಯಲ್ಲಿದ್ದ ವಿದ್ವಾಂಸರೊಬ್ಬರಿಗೆ ಸನ್ಯಾಸಾಶ್ರಮವನ್ನು ಕೊಟ್ಟು ಅವರಿಗೆ ಪೀಠದ ಅಭಿಷೇಕಮಾಡಿ ಅವರೊಡನೆ ದೇವರ ಪೂಜೆಯನ್ನು ಮಾಡಿ ಅವರಿಗೆ ವೇದನಿಧಿತೀರ್ಥರು ಎಂದು ಆಶ್ರಮನಾಮವನ್ನು ಕೊಟ್ಟರು. (ಶ್ರೀವೇದನಿಧಿತೀರ್ಥರ ಪೂರ್ವಾಶ್ರಮದ ಹೆಸರು ಕೊರಟಗಿ ಪ್ರದ್ಯುಮ್ನಾಚಾರ್ಯರು ಎಂದು ತಿಳಿದುಬರುತ್ತದೆ.)

**ರಂಗೋಜಿಭಟ್ಟನೊಡನೆ ವಾದ**

ತತೋ ವೇಣುಪುರೀಂ ಗತ್ವಾ ತತ್ರ ಕಾಶ್ಯಾಃ ಸಮಾಗತಮ್ ।
ರಂಗೋಜೀಭಟ್ಟಮುದ್ವೈತವಾದಿನಂ ಹಟವಾದಿನಮ್ ॥ ೨೭ ॥

ಸಭಾಯಾಮಾತ್ಮಭಿಃ ಸಾಕಂ ಪ್ರಸಂಗಂ ಕರ್ತುಮಾಗತಮ್ ।
ದೃಷ್ಟ್ವಾ ಪ್ರಸಂಗಂ ಚಕ್ರುಸ್ತೇ ತೇನ ಸಾಕಂ ಸಭಾತಲೇ ॥೨೮॥

ಬಳಿಕ ಬಿದನೂರಿಗೆ ಹೋಗಿ ಅಲ್ಲಿ ಕಾಶಿಯಿಂದ ಬಂದ ಬಹಳ ಹಟವಾದಿಯಾದ ರಂಗೋಜಿಭಟ್ಟನೆಂಬ ಅದ್ವೈತಪಂಡಿತನೊಡನೆ ಸಭೆಯಲ್ಲಿ ವಾದ ಮಾಡಿದರು. ಈ ವಾದವು ನಡೆಯಬೇಕೆಂದು ಅವನೇ ಅಪೇಕ್ಷೆಪಟ್ಟು ಆಹ್ವಾನಿಸಿದ್ದನು.

ದರ್ಶನಾದಭ್ರಶಿರಸ ಇತಿಶ್ಲೋಕೇ ತಯೋಃ ದ್ವಯೋಃ ।
ಪ್ರಸಂಗಶ್ಚಾಭವತ್ ಸೋಽಥ ವಿದ್ಯಾಧೀಶೈಃ ಪರಾಜಿತಃ ॥೨೯॥

'ದರ್ಶನಾದಭ್ರಶಿರಸ' ಎಂಬ ಭಾಗವತ ಶ್ಲೋಕದ ಅರ್ಥದ ವಿಚಾರದಲ್ಲಿ ಅವರಿಬ್ಬರಿಗೂ ವಾದವಾಯಿತು. ರಂಗೋಜೀಭಟ್ಟನು ಪರಾಜಿತನಾದನು.

ತ್ಯಕ್ತ್ವಾ ವೇಣುಪುರೀಂ ಭೀತ್ಯಾ ಪಲಾಯನಪರಾಯಣಃ ।
ಜಗಾಮ ಪೈಠಣಂ ತೇ ತಮನುಸೃತ್ಯ ಗತಾಸ್ತದಾ ॥ ೩೦ ॥

ತತ್ರ ಜಿತ್ವಾ ಮಾಯಿವರಂ ಜಯಪತ್ರಂ ಪ್ರಗೃಹ್ಯ ತೇ ।
ಕ್ರಮಾದ್ ಧರ್ಮಪುರೀಂ ಪ್ರಾಪುಃ ಗಂಗಾಯಾತ್ರಾ-
ಮನೋರಥಾಃ ॥ ೩೧ ॥

ರಂಗೋಜೀಭಟ್ಟನು ಅವಮಾನದ ಭಯದಿಂದ ಬಿದನೂರನ್ನು ಬಿಟ್ಟು ಪೈಠಣಕ್ಕೆ ಓಡಿಹೋದನು. ಶ್ರೀವಿದ್ಯಾಧೀಶರು ಅವನನ್ನು ಬೆನ್ನಟ್ಟಿ ಅಲ್ಲಿಗೇ ಹೋದರು. ಅವನನ್ನು ಅಲ್ಲಿ ಸೋಲಿಸಿ ಜಯಪತ್ರವನ್ನು ಪಡೆದು ಧರ್ಮಪುರಿಗೆ ಬಂದರು ಮತ್ತು ಮುಂದೆ ಗಂಗಾಯಾತ್ರೆಗೆ ಹೋಗಲು ಮನಸ್ಸು ಮಾಡಿದರು.

ತತ್ರ ವೇದನಿಧೀನಾಂ ತು ಸಮೀಪೇ ಗುರುಶೇಖರಾಃ ।
ಮಹಾಸಂಸ್ಥಾನಮಖಿಲಂ ಸ್ಥಾಪಯಿತ್ವಾ ದ್ವಿಜೈಃ ಸಹ ॥೩೨॥

**ಶ್ರೀವಿದ್ಯಾಧೀಶರ ಉತ್ತರ ಭಾರತ ಸಂಚಾರ, ಗೋದಾವರೀ ಪ್ರದಕ್ಷಿಣೆ**

**ಗೃಹೀತ್ವಾ ದಿಗ್ಜಯಂ ರಾಮಂ ದ್ವಿತೀಯಂ ಬಾದರಾಯಣಮ್ ।**
**ಜಗ್ಮುಃ ಭಾಗೀರಥೀಯಾತ್ರಾಂ ಕರ್ತುಂ ಯಾತ್ರಾಜನೈಃ ಸಹ ॥**

ಧರ್ಮಪುರಿಯಲ್ಲಿ ಮಹಾಸಂಸ್ಥಾನವನ್ನು ಶ್ರೀವೇದನಿಧಿತೀರ್ಥರಿಗೆ ಒಪ್ಪಿಸಿ ದಿಗ್ವಿಜಯರಾಮದೇವರನ್ನೂ ವೇದವ್ಯಾಸದೇವರನ್ನೂ ಮಾತ್ರ ತಮ್ಮೊಡನೆ ತೆಗೆದುಕೊಂಡು ಯಾತ್ರೆಯನ್ನು ಮಾಡಲು ಅಪೇಕ್ಷಿಸುವ ಕೆಲವರನ್ನು ಕರೆದುಕೊಂಡು ಭಾಗೀರಥೀ ಯಾತ್ರೆಗೆ ಹೊರಟರು.

**ಆದೌ ಪೂರ್ವದಿಶಂ ಗತ್ವಾ ಸಪ್ತಸಾಗರಮೇತ್ಯ ತೇ ।**
**ವಸಿಷ್ಠಸಾಗರಂ ಗತ್ವಾ ಸ್ನಾನಂ ಚಕ್ರುಃ ವಿಧಾನತಃ ॥ ೩೪ ॥**

ಮೊದಲು ಪೂರ್ವದಿಕ್ಕಿಗೆ ಪ್ರಯಾಣವಾಡಿ (ಗೋದಾವರೀ ಸಂಗಮ ಪ್ರದೇಶದ) ಸಪ್ತಸಾಗರ ಪ್ರದೇಶಕ್ಕೆ ಹೋಗಿ ವಸಿಷ್ಠಸಾಗರದಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿದರು.

**ತತ್ರ ಸ್ವಾದೂದರಾಹಿತ್ಯಾತ್ ಲೋಕಾನುಗ್ರಹಕಾಂಕ್ಷಯಾ ।**
**ಶ್ರೀಪಾದಾಃ ಖನ್ಯತಾಮತ್ರೇತ್ಯುಕ್ತ್ವಾ ದಂಡೇನ ಭೂತಲಮ್ ॥**
**ಅದರ್ಶಯನ್ ತೇ ಖನಿತೇ ಜನೈಃ ಸ್ವಾದೂದಮಾಗತಮ್ ।**

ಈ ಪ್ರದೇಶದಲ್ಲಿ ಸಿಹಿ ನೀರು ಇರಲಿಲ್ಲ. ಆಗ ಶ್ರೀವಿದ್ಯಾಧೀಶರು ಲೋಕಾನುಗ್ರಹದೃಷ್ಟಿಯಿಂದ ತಮ್ಮ ದಂಡದಿಂದ ಒಂದು ಸ್ಥಳವನ್ನು ತೋರಿಸಿ ಇಲ್ಲಿ ಅಗಿಯಿರಿ ಎಂದು ಹೇಳಿದರು. ಅಲ್ಲಿ ಅಗಿದಾಗ ಸಿಹಿ ನೀರು ಬಂದಿತು.

**ಗಯಾವಾಡರಿಗೆ ವೈಷ್ಣವ ದೀಕ್ಷೆ ಕೊಡುವದು**

**ತತಃ ಕಾಶೀಪುರಂ ಪ್ರಾಪ್ಯ ಗಂಗಾಸ್ನಾನಂ ವಿಧಾಯ ಚ ॥೩೬॥**
**ಗಯಾಮವಾಪ್ಯ ತೇ ಫಲ್ಗು ತೀರೇ ವಾಸಂ ಪ್ರಚಕ್ರಿರೇ ।**

ಬಳಿಕ ಶ್ರೀವಿದ್ಯಾಧೀಶರು ಕಾಶೀಕ್ಷೇತ್ರಕ್ಕೆ ಹೋಗಿ ಅಲ್ಲಿ ಗಂಗಾಸ್ನಾನವನ್ನು ಮಾಡಿ ಮುಂದೆ ಗಯಾಕ್ಷೇತ್ರಕ್ಕೆ ಹೋಗಿ ಅಲ್ಲಿ ಫಲ್ಗೂ ನದಿಯ ದಂಡೆಯ ಮೇಲೆ ವಾಸಮಾಡಿದರು.

ತತ್ರ ಪಿಂಡಪ್ರದಾನಾರ್ಥಂ ತತ್ರತ್ಯೈಸ್ತು ದ್ವಿಜಾತಿಭಿಃ ॥ ೩೭ ॥
ಸಾಕಂ ಯಾತ್ರಾ ದ್ವಿಜಾನಾಂ ಚ ವಿವಾದಃ ಸಮಜಾಯತ ।

ಈ ಗಯಾಕ್ಷೇತ್ರದಲ್ಲಿ ಪಿಂಡಪ್ರದಾನಮಾಡುವ ವಿಷಯದಲ್ಲಿ (ದಕ್ಷಿಣೆಯ ವಿಷಯದಲ್ಲಿ)ಗಯಾವಾಡರಿಗೂ ಶ್ರೀವಿದ್ಯಾಧೀಶರೊಡನೆ ಬಂದ ಬ್ರಾಹ್ಮಣರಿಗೂ ವಿವಾದವುಂಟಾಯಿತು.

ತದಾ ವಿದ್ಯಾಧೀಶತೀರ್ಥೈಃ ನಿಶ್ಚಿತಂ ಜನಸಂಸದಿ ॥ ೩೮ ॥
ಅಸ್ಮದ್ದಿಗ್ವಿಜಯೋ ರಾಮಃ ಫಲ್ಗು ತೀರೇ ಸಮಾಸ್ಥಿತಃ ।
ತಸ್ಮಾದಿಯಂ ಧರಾ ರಾಮಗಯಾಸ್ಮಾಕಂ ನ ಸಂಶಯಃ ॥೩೯॥

ಆಗ ಶ್ರೀವಿದ್ಯಾಧೀಶತೀರ್ಥರು ಸಕಲಜನರ ಸಮಕ್ಷಮದಲ್ಲಿ ಹೀಗೆ ಹೇಳಿದರು: ನಮ್ಮ ದಿಗ್ವಿಜಯರಾಮದೇವರು ಫಲ್ಗುನದಿಯ ದಂಡೆಯ ಮೇಲಿರುವರು ಆದ್ದರಿಂದ ಈ ಪ್ರದೇಶವು ರಾಮಗಯಾ ಎಂದೆನಿಸಿಕೊಳ್ಳುತ್ತದೆ. ಇಲ್ಲಿಯೇ ನೀವೆಲ್ಲ ಪಿಂಡಪ್ರದಾನಮಾಡಿರಿ ಎಂದು ಹೇಳಿದರು.

ವಾಸಂ ಚಕ್ರುಃ ನದೀತೀರೇ ವಿದ್ಯಾಧೀಶಾಃ ಸಹಾಖಿಲೈಃ ।
ತತ್ರಾಸೀತ್ ಬದರೀಶಾಖಾವೃತಿಃ ಶುಷ್ಕಾ ಗೃಹಾಂಗಣೇ ॥೪೦॥
ತಸ್ಯಾಂ ತು ಪತಿತಾಃ ತೀರ್ಥದಾನೇ ಶಂಖೋದಬಿಂದವಃ ।
ಯತ್ರ ಯತ್ರ ಪ್ರಪತಿತಾಃ ಸಂಜಾತಾಃ ತತ್ರ ಪಲ್ಲವಾಃ ॥೪೧॥
ದಿನೈಃ ಕತಿಪಯೈಃ ಸರ್ವಾಃ ಕ್ರಮಾದ್ ವೃಕ್ಷಾಃ ಬಭೂವಿರೇ ।

ಶ್ರೀವಿದ್ಯಾಧೀಶತೀರ್ಥರು ತಮ್ಮ ಶಿಷ್ಯರೊಡನೆ ಫಲ್ಗು ನದೀತೀರದಲ್ಲಿಯೇ ವಾಸ ಮಾಡಿದರು. ಅಲ್ಲಿ ಬದರೀವೃಕ್ಷವೊಂದು ಒಣಗಿ ಹೋಗಿದ್ದಿತು. ಶ್ರೀವಿದ್ಯಾಧೀಶರು ತೀರ್ಥಕೊಡುವಾಗ ಅದರ ಮೇಲೆ ಬಿದ್ದ ಶಂಖೋದಕದ ಹನಿಗಳಿಂದ ಅದು ಚಿಗುರತೊಡಗಿತು. ಕೆಲದಿನಗಳಲ್ಲಿ ಟೊಂಗೆಗಳೆಲ್ಲ ಚಿಗುರಿ ಅದು ಪೂರ್ಣವಾಗಿ ಚಿಗುರಿ ಸುಂದರವಾದ ವೃಕ್ಷವಾಯಿತು.

ದೃಷ್ಟ್ವಾ ತದದ್ಭುತಂ ಕರ್ಮ ಸ್ವಾಮಿನಾಂ ಮಹತೀಂ ತದಾ ॥
ಗಯಾವಿಪ್ರಾಃ ಸಮಾಗತ್ಯ ಪ್ರಣಮ್ಯಾಥ ಯಯಾಚಿರೇ ।
ಸ್ವಾಮಿಭಿಃ ಕ್ಷಮ್ಯತಾಮಸ್ಮದಪರಾಧಃ ಕೃಪಾಲುಭಿಃ ॥ ೪೩ ॥

ಬದರೀವೃಕ್ಷವು ಚಿಗಿಯುವ ಈ ಅದ್ಭುತವಾದ ಕಾರ್ಯವನ್ನು ನೋಡಿ, ಸ್ವಾಮಿಗಳ ಮಹಿಮೆಯನ್ನು ತಿಳಿದ ಗಯಾವಾಡರು ಶ್ರೀಸ್ವಾಮಿಗಳು ತಮ್ಮ ಅಪರಾಧವನ್ನು ಕ್ಷಮಿಸಬೇಕು ಎಂದು ಯಾಚಿಸಿದರು

**ವಯಂ ಶಿಷ್ಯಾ ಭವಿಷ್ಯಾಮಃ ತಪ್ತಮುದ್ರಾದಿಧಾರಣೈಃ ।**
**ಅದ್ಯೈವ ವಿಷ್ಣುಪಾದಸ್ಯ ದರ್ಶನಾರ್ಥಂ ಹಿ ಗಮ್ಯತಾಮ್ ॥೪೪**

ನಾವು ತಪ್ತಮುದ್ರಾಧಾರಣಾದಿಗಳನ್ನು ತೆಗೆದುಕೊಂಡು ನಿಮ್ಮ ಶಿಷ್ಯರಾಗುವೆವು. ತಾವು ಕೂಡಲೇ ವಿಷ್ಣುಪಾದದ ದರ್ಶನಕ್ಕೆ ಬರಬೇಕೆಂದು ಪ್ರಾರ್ಥಿಸಿದರು.

**ಏವಂ ಸಂಪ್ರಾರ್ಥಿತಾಃ ತೈಃ ತೇ ವಿದ್ಯಾಧೀಶಮುನೀಶ್ವರಾಃ ।**
**ಕಾಂಶ್ಚಿತ್ ದ್ವಿಜಾನ್ ವೈಷ್ಣವಾನ್ ಕೃತ್ವಾ ವಿಷ್ಣುಪದಂ ಗತಾಃ ॥**

ಹೀಗೆ ಗಯಾವಾಡರಿಂದ ಪ್ರಾರ್ಥಿಸಲ್ಪಟ್ಟ ಶ್ರೀವಿದ್ಯಾಧೀಶರು ಅವರಲ್ಲಿ ಕೆಲವರಿಗೆ ವೈಷ್ಣವದೀಕ್ಷೆಯನ್ನು ಕೊಟ್ಟು ವಿಷ್ಣುಪಾದ ಮಂದಿರಕ್ಕೆ ತೆರಳಿದರು.

**ಶ್ರಾದ್ಧಾನಿ ಕಾರಯಿತ್ವಾಥ ಸರ್ವೈಃ ಪ್ರೀತಿಪುರಸ್ಸರಮ್ ।**
**ಸ್ವಯಂ ದಂಡೋದಕಂ ದತ್ವಾ ಯಯುರ್ಬದರಿಕಾಶ್ರಮಮ್ ॥**

ಬಳಿಕ ಎಲ್ಲರಿಂದಲೂ ಶ್ರಾದ್ಧವನ್ನು ಮಾಡಿಸಿ ತಾವೂ ಪ್ರೀತಿಪೂರ್ವಕವಾಗಿ ದಂಡೋದಕವನ್ನು ಕೊಟ್ಟು ಬದರಿಕಾಶ್ರಮಕ್ಕೆ ತೆರಳಿದರು.

ಶ್ರೀವಿದ್ಯಾಧೀಶತೀರ್ಥರ ಬದರೀಯಾತ್ರೆ, ವೃಂದಾವನ ಪ್ರವೇಶ

**ಶೀತಕುಂಡೋದಕೇ ಸ್ನಾತ್ವಾ ವಹ್ನಿ ಕುಂಡೋದಕೇ ತತಃ ।**
**ಪುನರಾಗತ್ಯ ತೇ ಚೈಕಚಕ್ರಾಖ್ಯನಗರಂ ಪ್ರತಿ ॥ ೪೭ ॥**
**ಅಂತಕಾಲೇ ಸಮಾಯಾತೇ ತತ್ರ ವಾಸಂ ಪ್ರಚಕ್ರಿರೇ ।**

ಬದರಿಕಾಶ್ರಮದಲ್ಲಿ ಶೀತಕುಂಡೋದಕದಲ್ಲಿಯೂ ಅಗ್ನಿಕುಂಡೋದಕದಲ್ಲಿಯೂ ಸ್ನಾನಮಾಡಿ ಶ್ರೀ ಬದರೀನಾರಾಯಣನ ದರ್ಶನಮಾಡಿ ಏಕಚಕ್ರನಗರಕ್ಕೆ ಮರಳಿ ಬಂದರು. ಅಂತಕಾಲವು ಸಮೀಪಿಸಲು ಅಲ್ಲಿಯೇ ಇದ್ದರು

ಪ್ರಜಾಪತ್ಯಾಹ್ವಯೇ ವರ್ಷೇ ಪುಷ್ಯಮಾಸೇ ಪರೇ ದಲೇ ||೪೮||

ಚತುರ್ದಶೀದಿನೇ ಪ್ರಾತಃ ಸ್ನಾತ್ವಾ ಶುದ್ಧಾಸನೇ ಸ್ಥಿತಾಃ |
ಸನ್ನಿಯಮ್ಯೇಂದ್ರಿಯಗ್ರಾಮಂ ಪರಂ ಹರಿಪದಂ ಯಯುಃ ||೪೯

ಪ್ರಜಾಪತಿ ಸಂವತ್ಸರದ ಪುಷ್ಯಮಾಸ ಕೃಷ್ಣ ಪಕ್ಷದ ಚತುರ್ದಶೀ ದಿನದಲ್ಲಿ ಇಂದ್ರಿಯಗಳನ್ನೆಲ್ಲ ನಿಗ್ರಹಿಸಿ ಶ್ರೀಹರಿಯ ಪಾದಕಮಲಗಳನ್ನು ಸೇರಿದರು.

ಶ್ರೀವಿದ್ಯಾಧೀಶತೀರ್ಥಾಚರಿತಸುಚರಿತಂ
ಕೀರ್ತಯೇತ್ ಯಃ ಪ್ರಭಾತೇ |
ಸೋऽಸ್ಮಿನ್ ತತ್ಪಾದಯುಗ್ಮಾರ್ಪಿತ
ಸಕಲಶುಭಾಚಾರ ವಿಧ್ವಸ್ತತಾಪಃ |
ಜಿತ್ವಾ ಸರ್ವೇಂದ್ರಿಯಾಣಿ ಪ್ರತಿದಿವಸಮಲಂ
ಸಾಧಯೇತ್ ಸಾಧನಾನಿ |
ಶ್ರೀಮದ್ವಿಷ್ಣೋಃ ಪ್ರಿಯಾಣಿ ವ್ರತನಿಯಮಸುಖಾದೀನಿ
ತೇಷಾಂ ಪ್ರಸಾದಾತ್ || ೫೦ ||

ಪ್ರತಿನಿತ್ಯ ಪ್ರಾತಃಕಾಲದಲ್ಲಿ ಯಾರು ಶ್ರೀವಿದ್ಯಾಧೀಶತೀರ್ಥರ ಸುಚರಿತ್ರವನ್ನು ವರ್ಣಿಸುವನೋ ಅವನು ಅವರ ಪಾದಕಮಲಗಳಲ್ಲಿ ಅರ್ಪಿತವಾದ ತನ್ನ ಸಕಲಶುಭಕರ್ಮಗಳಿಂದ ಸಕಲಕಷ್ಟಗಳನ್ನು ಪರಿಹರಿಸಿಕೊಂಡು ಸರ್ವೇಂದ್ರಿಯಗಳನ್ನೂ ಜಯಿಸಿಕೊಂಡು ಪ್ರತಿದಿನವೂ ಶ್ರೀವಿಷ್ಣುವಿಗೆ ಪ್ರಿಯವಾದ ವ್ರತನಿಯಮಾದಿ ಸಾಧನಗಳನ್ನು ಶ್ರೀವಿದ್ಯಾಧೀಶರ ಅನುಗ್ರಹದಿಂದ ಅನುಷ್ಠಾನ ಮಾಡಲು ಶಕ್ತನಾಗುವನು.

ಇತಿ ಶ್ರೀ ಪೈಸಣ್ಣ ಭೀಮಕವಿಯಿಂದ ವಿರಚಿತವಾದ ಪೂರ್ಣಬೋಧ ಗುರುವಂಶ
ಕಥಾಕಲ್ಪತರುವಿನಲ್ಲಿಯ ೧೭ ಮತ್ತು ೧೮ನೆಯ ಸರ್ಗಗಳಲ್ಲಿ ವರ್ಣಿಸಲ್ಪಟ್ಟ
ಶ್ರೀವಿದ್ಯಾಧೀಶಮಹಿಮ ವರ್ಣನೆಯ ಸಾರಸಂಗ್ರಹವು ಮತ್ತು ಅದರ
ಕನ್ನಡ ಅನುವಾದವು ಪಾಂಡುರಂಗಿ ತಮ್ಮಣಾಚಾರ್ಯಪುತ್ರ
ಕೃಷ್ಣಾಚಾರ್ಯನಿಂದ ಮಾಡಿದುದು ಮುಗಿಯಿತು.

# श्रीसत्यविजयतीर्थाः



श्रीविभीषणसाम्राज्यप्रदरामपदाम्बुजे ।
संसक्तः सत्यविजयहंसो मे भासतां हृदि ॥

## ಶ್ರೀ ಪೂರ್ಣಬೋಧಗುರುವಂಶಕಥಾಕಲ್ಪತರೌ

# ಶ್ರೀಸತ್ಯವಿಜಯಚರಿತಮ್

ಮಂಗಲಶ್ಲೋಕ

**ಪ್ರಣಮ್ಯ ಚರಣದ್ವಂದ್ವಂ ಬಾದರಾಯಣಮಧ್ವಯೋಃ ।**
**ಜಗದ್ಗುರ್ವನ್ವಯಕಥಾಂ ತತ್ಪ್ರೀತ್ಯೈ ಕೀರ್ತಯಾಮ್ಯಹಮ್ ॥ ೧ ॥**

ಶ್ರೀ ಬಾದರಾಯಣದೇವರು ಮತ್ತು ಶ್ರೀಮಧ್ವಾಚಾರ್ಯರ ಪಾದಗಳಿಗೆ ನಮಸ್ಕಾರಮಾಡಿ ಶ್ರೀಮದುತ್ತರಾದಿಮಠದ ಜಗದ್ಗುರುಗಳ ಪರಂಪರೆಯ ಕಥೆಯನ್ನು ಅವರ ಪ್ರೀತಿಯನ್ನು ಸಂಪಾದನೆ ಮಾಡುವದಕ್ಕಾಗಿ ಹೇಳುವೆನು.

ಶ್ರೀಸತ್ಯವಿಜಯರಿಗೆ ಆಶ್ರಮದಾನ

**ಶ್ರೀಸತ್ಯಪೂರ್ಣತೀರ್ಥಾಸ್ತು ಮನ್ನಾರಾಖ್ಯಪುರಸ್ಥಿತಾನ್ ।**
**ಬಾಬಾಚಾರ್ಯಾನ್ ಸಮಾಹೂಯ ದದುಃ ಸಂಸ್ಥಾನಮಾಶು ತೇ ॥**

ಶ್ರೀಸತ್ಯಪೂರ್ಣತೀರ್ಥರು ಮನ್ನಾರಿ ಎಂಬ ಗ್ರಾಮದಲ್ಲಿದ್ದ ಬಾಬಾಚಾರ್ಯರನ್ನು ಕರೆಯಿಸಿಕೊಂಡು ಅವರಿಗೆ ಆಶ್ರಮಕೊಟ್ಟು ಸಂಸ್ಥಾನವನ್ನು ಒಪ್ಪಿಸಿಕೊಟ್ಟರು. (ಈ ಬಾಬಾಚಾರ್ಯರು ಪಾಂಡುರಂಗೀ ವಂಶದವರು. ಶ್ರೀಗುರುರಾಜರ ಅಂದರೆ ಪಾಂಡುರಂಗೀ ಕೇಶವಭಟ್ಟಾರಕರ ಹಿರಿಯ ಮಕ್ಕಳಾದ ಗಡ್ಡದ ಶ್ರೀನಿವಾಸಾಚಾರ್ಯರ ಮಕ್ಕಳು. ಈ ಗಡ್ಡದ ಶ್ರೀನಿವಾಸಾಚಾರ್ಯರನ್ನು ಮೇರುಸ್ವಾಮಿ ಎಂಬ ರಾಮದಾಸಪಂಥದ ಸಂತನು ದಕ್ಷಿಣದೇಶಕ್ಕೆ ಕರೆದುಕೊಂಡುಹೋಗಿ ತಂಜಾವೂರು ಜಿಲ್ಲೆಯ ರಾಜಗೋಪಾಲಪುರದ ಹತ್ತಿರದ ಮನ್ನಾರಿ ಅಥವಾ ರಾಜಮನ್ನಾರಿ ಎಂಬ ಊರಲ್ಲಿ ಅಗ್ರಹಾರವನ್ನು ಮಾಡಿಕೊಟ್ಟು ಇರಿಸಿಕೊಂಡಿದ್ದನು. ಈ ಅಗ್ರಹಾರದಲ್ಲಿ ಅವನು ಇನ್ನೂ ಅನೇಕ ಮಾಧ್ವ ಪಂಡಿತರಿಗೆ ಆಶ್ರಯ ಮಾಡಿಕೊಟ್ಟಿದ್ದನು. ಈ ಪಂಡಿತರ ಮನೆತನಗಳಲ್ಲಿ ಇನ್ನೂ ಕೆಲವರು ಅಲ್ಲಿರುವರು. ಶ್ರೀ ಬಾಬಾಚಾರ್ಯರೂ ಆ ಊರಲ್ಲಿದ್ದರು. ಇವರ ವಂಶದವರು ಕುಟ್ಟಾಲಂ, ತಂಜಾವೂರು, ಕುಂಭಕೋಣಂ, ಮಾಯಾವರಂ, ಮದ್ರಾಸ ಹೀಗೆ ದಕ್ಷಿಣದೇಶದ ಅನೇಕ ಊರುಗಳಲ್ಲಿ ಹರಡಿ

ರುವರು. ಇವರೆಲ್ಲ ದಕ್ಷಿಣದೇಶದ ಪಾಂಡುರಂಗಿಯವರು ಅಥವಾ ಮನ್ನಾರಿ ಪಾಂಡುರಂಗಿಯವರು. ಈ ಪಾಂಡುರಂಗಿಯವರ ಸುಮಾರು ಅರವತ್ತು ಎಪ್ಪತ್ತು ಮನೆತನಗಳು ಈಗ ದಕ್ಷಿಣದೇಶದಲ್ಲಿವೆ. ಅನೇಕರು ಪಾಂಡುರಂಗಿ ಎಂಬ ಮನೆತನದ ಹೆಸರನ್ನು ಇನ್ನೂ ಇಟ್ಟುಕೊಂಡಿದ್ದಾರೆ. ಹೊಸ ಪೀಳಿಗೆಯ ಕೆಲವರು ಬಿಟ್ಟಿದ್ದಾರೆ. ಸತ್ಕಥಾದಲ್ಲಿ ಶ್ರೀಸತ್ಯವಿಜಯರ ಪೂರ್ವಾಶ್ರಮದ ಹೆಸರನ್ನು ಬಾಳಾಚಾರ್ಯರೆಂದು ಕೊಡಲಾಗಿದೆ. ಆದರೆ ವಂಶಾವಳಿಗಳಲ್ಲಿ ಬಾಬಾಚಾರ್ಯರು ಎಂದೇ ಇದೆ.)

**ದತ್ತ್ವಾ ಸಂನ್ಯಾಸಮಥ ತಾನಭಿಷಿಚ್ಯ ಗುರೋಃ ಪದೇ ।**
**ತೇಭ್ಯೋ ನಾಮ ದದುಃ ಪ್ರೀತಾಃ ಶ್ರೀಸತ್ಯವಿಜಯಾ ಇತಿ ॥ ೩ ॥**

ಬಾಬಾಚಾರ್ಯರಿಗೆ ಸಂನ್ಯಾಸಾಶ್ರಮವನ್ನು ಕೊಟ್ಟು ಗುರುಪೀಠದಲ್ಲಿ ಕೂಡಿಸಿ ಅವರಿಗೆ 'ಸತ್ಯವಿಜಯ'ರು ಎಂಬ ಹೆಸರನ್ನು ಪ್ರೀತಿಯಿಂದ ಕೊಟ್ಟರು.

**ತತಃ ಕರ್ನಾಟಕಂ ಗತ್ವಾ ಶ್ರೀಸತ್ಯವಿಜಯೈಃ ಸಹ ।**
**ಕೃತ್ವಾ ದಿಗ್ವಿಜಯಂ ತತ್ರ ಮಾನಿತಾಃ ಪ್ರಭುಶೇಖರೈಃ ॥ ೪ ॥**

ಬಳಿಕ ಶ್ರೀಸತ್ಯಪೂರ್ಣರು ಶ್ರೀಸತ್ಯವಿಜಯರೊಡನೆ ಕರ್ನಾಟಕ ಪ್ರದೇಶಕ್ಕೆ ಹೋಗಿ ಅಲ್ಲಿ ದಿಗ್ವಿಜಯ ಮಾಡುತ್ತ ಅಲ್ಲಿಯ ರಾಜರಿಂದ ಮನ್ನಣೆ ಪಡೆದರು.

ಶ್ರೀಸತ್ಯಪೂರ್ಣರ ಭಾಗೀರಥೀ ಯಾತ್ರೆ

**ತತೋ ಭಾಗೀರಥೀಯಾತ್ರಾಂ ಕರ್ತುಂ ಸಂಸ್ಥಾನಸಂಯುತಾಃ ।**
**ಶ್ರೀಸತ್ಯವಿಜಯೈಃ ಸಾಕಂ ನಿರ್ಗತಾಃ ಚೋಲಮಂಡಲಾತ್ ॥ ೫ ॥**

ಮುಂದೆ ಭಾಗೀರಥೀಯಾತ್ರೆಯನ್ನು ಮಾಡುವ ಉದ್ದೇಶದಿಂದ ಶ್ರೀಸತ್ಯಪೂರ್ಣರು ಶ್ರೀಸತ್ಯವಿಜಯರೊಡನೆ ಚೋಳದೇಶದಿಂದ ಮಠದ ಮಹಾ ಸಂಸ್ಥಾನ ಸಹಿತರಾಗಿ ಹೊರಟರು.

**ಗತೇಷು ಸತ್ಯಪೂರ್ಣೇಷು ಗಂಗಾಯಾತ್ರಾಪರೇಷ್ವಥ ।**
**ತದಾನೀಂ ತೈರನುಜ್ಞಾತಾಃ ಶ್ರೀಸತ್ಯವಿಜಯಾಭಿಧಾಃ ॥ ೬ ॥**

**ಮಹಾಸಂಸ್ಥಾನಸಂಯುಕ್ತಾಃ ಜಾಗರೂಕಾಸ್ತು ಅಹರ್ನಿಶಮ್ ।**
**ವಿನಿರ್ಗತ್ಯ ಕ್ರಮಾತ್ ತಸ್ಮಾತ್ ಕುರಿಪ್ಪಟ್ಟಿಂ ಪ್ರಪೇದಿರೇ ॥ ೭ ॥**

ಶ್ರೀಸತ್ಯಪೂರ್ಣರು ಗಂಗಾಯಾತ್ರೆಗೆ ಹೊರಟಮೇಲೆ ಅವರ ಆಜ್ಞಾನುಸಾರವಾಗಿ ಮಹಾಸಂಸ್ಥಾನದಿಂದೊಡಗೂಡಿದವರಾಗಿ ಬಹಳ ಜಾಗರೂಕರಾಗಿ ಪ್ರಯಾಣ ಮಾಡುತ್ತ ಕುರಿಪ್ಪಟ್ಟಿ ಎಂಬಲ್ಲಿಗೆ ಬಂದು ಸೇರಿದರು.

ಶ್ರೀಸತ್ಯವಿಜಯರಿಗೂ ಶ್ರೀಸತ್ಯಪ್ರಿಯರಿಗೂ ಸ್ನೇಹಸಂಪಾದನೆ

**ಯದಾ ತು ಅಜಾದ್ರಿಮಾಸುಸ್ತೇ ಶ್ರೀಸತ್ಯವಿಜಯಾಭಿಧಾಃ ।**
**ಸತ್ಯವರ್ಯಾ ಅಪಿ ತದಾ ತತ್ಸಮೀಪೇ ಸಮಾಗತಾಃ ॥ ೮ ॥**

ಶ್ರೀಸತ್ಯವಿಜಯರು ಸಂಚಾರಕ್ರಮೇಣ ಅಜಾದ್ರಿಗೆ ಬಂದಾಗ ಶ್ರೀಸತ್ಯವರ್ಯರೂ ಕೂಡ ಅಲ್ಲಿಗೆ ಬಂದರು (ಶ್ರೀಸತ್ಯವರ್ಯರಿಗೆ ಶ್ರೀಸತ್ಯಪೂರ್ಣರು ಮೊದಲೇ ಆಶ್ರಮಕೊಟ್ಟಿದ್ದರು. ಅವರಿಗೆ ಅಣುಸಂಸ್ಥಾನವನ್ನೂ ಕೊಟ್ಟಿದ್ದರು. ಆದರೆ ಮುಂದೆ ಅವರಿಗೂ ಶ್ರೀಸತ್ಯಪೂರ್ಣರಿಗೂ ಸ್ವಲ್ಪ ಮನಸ್ತಾಪವಾದ್ದರಿಂದ ಶ್ರೀಸತ್ಯವಿಜಯರಿಗೆ ಆಶ್ರಮಕೊಟ್ಟು ಇವರಿಗೆ ಮಹಾಸಂಸ್ಥಾನವನ್ನು ಕೊಟ್ಟರು. ಮುಂದೆ ಅವರನ್ನು ಮತ್ತೆ ಕರೆಯಿಸಿಕೊಂಡು ಶ್ರೀಸತ್ಯವಿಜಯರು ಆಶ್ರಮದಿಂದ ಚಿಕ್ಕವರಾದರೂ ವಯಸ್ಸಿನಿಂದ ದೊಡ್ಡವರಾದ್ದರಿಂದ ಅವರ ನಂತರ ನೀವು ಮಹಾಸಂಸ್ಥಾನವನ್ನು ತೆಗೆದುಕೊಳ್ಳಬೇಕು ಎಂದು ಸಾಂತ್ವನ ಮಾಡಿದರು.)

**ಲಕ್ಕುಂಡಿ ಸಂಸ್ಥಿತಾನಂದತೀರ್ಥಾಚಾರ್ಯಾಃ ತತಃ ಪರಮ್ ।**
**ಹೃದಾ ವಿಚಾರಯಾಮಾಸುಃ ಅಗ್ರೇ ಕಾರ್ಯಂ ದ್ವಿಜೋತ್ತಮಾಃ ॥**

(ಪರಸ್ಪರ ಸ್ವಲ್ಪ ವಿರಸವಿದ್ದ ಶ್ರೀಸತ್ಯವಿಜಯರೂ ಮತ್ತು ಸತ್ಯವರ್ಯರೂ ಹೀಗೆ ಸಮೀಪದಲ್ಲಿದ್ದ ಸಂದರ್ಭವನ್ನು ಉಪಯೋಗಿಸಿ) ಲಕ್ಕುಂಡಿಯ ಶ್ರೀಆನಂದತೀರ್ಥಾಚಾರ್ಯ ಎಂಬವರು ಈ ಇಬ್ಬರಲ್ಲಿಯೂ ಸಾಮರಸ್ಯವುಂಟಾಗಲು ಮಾಡಬೇಕಾದುದನ್ನು ಕುರಿತು ಹೀಗೆ ಆಲೋಚಿಸಿದರು.

**ಮಹಾಸಂಸ್ಥಾನಸಂಯುಕ್ತಾಃ ಶ್ರೀಸತ್ಯವಿಜಯಾಭಿಧಾಃ ।**
**ವಯಸಾ ಚ ಅತಿವೃದ್ಧಾ ಹಿ ಪರಂತು ಆಶ್ರಮತೋಽಥಮಾಃ ॥೧೦॥**

ಅಣುಸಂಸ್ಥಾನಸಂಯುಕ್ತಾಃ ಸಮರ್ಥಾಃ ಕಾರ್ಯಸಾಧನೇ ।
ಆಶ್ರಮೇ ಶ್ರೀಸತ್ಯವರ್ಯಾಃ ಜ್ಯೇಷ್ಠಾಶ್ಚ ವಯಸಾಽಧಮಾಃ ॥೧೧॥

ಮಹಾಸಂಸ್ಥಾನವನ್ನು ಪಡೆದಿರುವ ಶ್ರೀಸತ್ಯವಿಜಯರು ವಯಸ್ಸಿನಿಂದ ಬಹಳ ವೃದ್ಧರು ಆದರೆ ಆಶ್ರಮದಿಂದ ಚಿಕ್ಕವರು. ಅಣುಸಂಸ್ಥಾನವನ್ನು ಪಡೆದಿರುವ ಶ್ರೀಸತ್ಯವರ್ಯರು ಆಶ್ರಮದಿಂದ ಹಿರಿಯರು ಆದರೆ ವಯಸ್ಸಿನಿಂದ ಚಿಕ್ಕವರು. ಅಲ್ಲದೆ ಇವರು ಕಾರ್ಯದಲ್ಲಿ ಸಮರ್ಥರು.

ತಸ್ಮಾತ್ತು ದಂಡವ್ಯತ್ಯಾಸಂ ಕಾರಯಿತ್ವಾ ಪರಸ್ಪರಮ್ ।
ಉಭಾಭ್ಯಾಮಣುಸಂಸ್ಥಾನಂ ಸತ್ಯವರ್ಯೇಭ್ಯ ಏವ ತತ್ ॥ ೧೨ ॥

ಶ್ರೀಸತ್ಯವಿಜಯಾರ್ಯೇಭ್ಯೋ ಮಹಾಸಂಸ್ಥಾನಮಿತ್ಯಥ ।
ಉಭಯೋರನುಮತ್ಯಾ ತತ್ ಕಾರ್ಯಮೇವೇತಿ ನಿಶ್ಚಿತಾಃ ॥ ೧೩ ॥

ಆದ್ದರಿಂದ ಇವರಿಬ್ಬರ ಅನುಮತಿಯಿಂದ ಪರಸ್ಪರ ದಂಡವ್ಯತ್ಯಾಸವನ್ನು ಮಾಡಿಸಿ ಶ್ರೀಸತ್ಯವರ್ಯರಿಗೆ ಅಣುಸಂಸ್ಥಾನವೂ ಶ್ರೀಸತ್ಯವಿಜಯರಿಗೆ ಮಹಾಸಂಸ್ಥಾನವೂ ಇರುವಂತೆ ಮಾಡಬೇಕೆಂದು ನಿಶ್ಚಯಿಸಿದರು.

ಏವಂ ತೇಷಾಂ ವಚಃ ಶ್ರುತ್ವಾ ಶ್ರೀಪಾದೌ ತಾವುಭಾವಪಿ ।
ಕೃತ್ವಾ ಪರಸ್ಪರಂ ದಂಡವ್ಯತ್ಯಾಸಂ ತ್ವೈಕಮತ್ಯತಃ ॥ ೧೪ ॥

ಮತ್ವಾ ಸಂಸ್ಥಾನಸಂಯುಕ್ತಾಃ ಶ್ರೀಸತ್ಯವಿಜಯಾಭಿಧಾಃ ।
ದದುಃ ಶ್ರೀಸತ್ಯವರ್ಯೇಭ್ಯೋ ನಾಮ ಸತ್ಯಪ್ರಿಯಾ ಇತಿ ॥ ೧೫ ॥

ಮೇಲೆ ಹೇಳಿದಂತೆ ವ್ಯವಸ್ಥೆಮಾಡಬೇಕೆಂಬ ಲಕ್ಕುಂಡಿ ಆನಂದ-ತೀರ್ಥಾಚಾರ್ಯರ ಮಾತುಗಳನ್ನು ಕೇಳಿ ಇಬ್ಬರೂ ಶ್ರೀಪಾದರು ಏಕಮತದಿಂದ ಪರಸ್ಪರ ದಂಡವ್ಯತ್ಯಾಸವನ್ನು ಮಾಡಿ ಅಣು ಮತ್ತು ಮಹಾಸಂಸ್ಥಾನಗಳನ್ನು ಪಡೆದರು. ಶ್ರೀಸತ್ಯವಿಜಯರು ಶ್ರೀಸತ್ಯವರ್ಯರಿಗೆ ಶ್ರೀಸತ್ಯಪ್ರಿಯರು ಎಂಬ ಹೊಸ ನಾಮಕರಣವನ್ನು ಮಾಡಿದರು.

ಅಥ ತೇ ತು ಅಣುಸಂಸ್ಥಾನಪದಾರ್ಥಾನ್ ದೇವಸಂಯುತಾನ್ ।
ದತ್ವಾಽನುಜ್ಞಾಂ ದದುಃ ತೇಭ್ಯಃ ಸಂಚಾರಾರ್ಥಂ ಮಹೀತಲೇ ॥೧೬॥

ಬಳಿಕ ಶ್ರೀಸತ್ಯವಿಜಯರು ಶ್ರೀಸತ್ಯಪ್ರಿಯರಿಗೆ ಅಣುಸಂಸ್ಥಾನದ ದೇವರನ್ನೂ ಪದಾರ್ಥಗಳನ್ನೂ ಕೊಟ್ಟು ಎಲ್ಲ ಕಡೆಗೂ ಸಂಚಾರವನ್ನು ಕೈಕೊಳ್ಳಲು ಅನುಮತಿಕೊಟ್ಟರು.

ಆರಣಿಯ ಕೃಷ್ಣಾಜೀಪಂತನಿಂದ ಶ್ರೀಸತ್ಯವಿಜಯರ ಸತ್ಕಾರ

ತತಸ್ತೇ ಸತ್ಯವಿಜಯತೀರ್ಥಾಃ ಕರ್ಣಾಟಿಕಂ ಪ್ರತಿ ।
ಗತ್ವಾ ತತ್ರ ಸ್ಥಿತಾಶೇಷಲೋಕೇಭ್ಯೋ ದೇವದರ್ಶನಮ್ ॥ ೧೭ ॥

ಕಾರಯಿತ್ವಾ ತತಃ ತೀರ್ಥಾದಿಕಂ ದತ್ವಾ ಗುರೂತ್ತಮಾಃ ।
ಆರಣ್ಯಾಂ ಚಕ್ರಿರೇ ವಾಸಂ ಷಡಾರಣ್ಯಸಮೀಪತಃ ॥ ೧೮ ॥

ಬಳಿಕ ಶ್ರೀಸತ್ಯವಿಜಯತೀರ್ಥರು ಕರ್ನಾಟಕಕ್ಕೆ ಹೋಗಿ ಅಲ್ಲಿಯ ಎಲ್ಲ ಭಕ್ತರಿಗೆ ದೇವರ ದರ್ಶನಮಾಡಿಸಿ ತೀರ್ಥಪ್ರಸಾದಗಳನ್ನು ಕೊಟ್ಟು ಮುಂದೆ ಷಡಾರಣ್ಯಕ ಅಂದರೆ ಆರ್ಕಾಟಿನ ಹತ್ತಿರವಿದ್ದ ಆರಣಿಯಲ್ಲಿ ವಾಸಮಾಡಿದರು.

ತತಃ ಕೃಷ್ಣಾಖ್ಯಪಂತೇನ ಮಠೇ ಮುಖ್ಯಾಭಿಮಾನಿನಾ ।
ಪೂಜಿತಾಃ ಕತಿಚಿತ್ ಕಾಲಮಾಸುಸ್ತೇ ಸ್ವೇಚ್ಛಯಾ ಸುಖಮ್ ॥೧೯॥

ಆರಣಿಯಲ್ಲಿ ಮಠದ ಮುಖ್ಯಾಭಿಮಾನಿಯಾದ ಕೃಷ್ಣಾಜಿಪಂತನಿಂದ ಸತ್ಕಾರವನ್ನು ಪಡೆಯುತ್ತ ಕೆಲಕಾಲ ಅಲ್ಲಿಯೇ ವಾಸವಾಗಿದ್ದರು.

ಶ್ರೀಸತ್ಯಪೂರ್ಣರ ವೃಂದಾವನ ಪ್ರವೇಶ

ತತಃ ಕತಿಪಯೈಃ ಕಾಲೈಃ ಸತ್ಯಪೂರ್ಣಮುನೀಶ್ವರಾಃ ।
ಕೃತ್ವಾ ಭಾಗೀರಥೀಯಾತ್ರಾಂ ಕೋಲ್ಪುರಂ ತೇ ಸಮಾಗತಾಃ ॥೨೦॥

ಬಳಿಕ ಕೆಲಕಾಲವಾದ ಮೇಲೆ ಭಾಗೀರಥೀಯಾತ್ರೆಯನ್ನು ಮುಗಿಸಿ ಕೊಂಡು ಶ್ರೀಸತ್ಯಪೂರ್ಣತೀರ್ಥರು ಕೋಲ್ಪುರ ಎಂಬ ಗ್ರಾಮಕ್ಕೆ ಬಂದರು.

ಪರಾಭವಾಭಿಧೇ ವರ್ಷೇ ಜ್ಯೇಷ್ಠಮಾಸೇ ಸಿತೇತರೇ ।
ಪಕ್ಷೇ ದ್ವಿತೀಯಾದಿವಸೇ ಸತ್ಯಪೂರ್ಣಮುನೀಶ್ವರಾಃ ॥ ೨೧ ॥

ಸ್ನಾತ್ವಾಥ ಪ್ರಾಣದೇವೇನ ಸಹ ತತ್ರಾಭಿಮಾನಿಭಿಃ ।
ಪೂಜಯಂತೋ ವಿಷ್ಣುಮೂರ್ತಿಂ ಜಗ್ಮುಃ ವೈಕುಂಠಮುತ್ತಮಮ್ ॥

ಪರಾಭವ ಸಂವತ್ಸರದ ಜ್ಯೇಷ್ಠಮಾಸದ ಕೃಷ್ಣಪಕ್ಷ ದ್ವಿತೀಯಾದ ದಿನ ಶ್ರೀಸತ್ಯಪೂರ್ಣಮುನಿಗಳು ಸ್ನಾನಮಾಡಿ ವಿಷ್ಣುವಿನ ಮೂರ್ತಿಯ ಧ್ಯಾನ ಮಾಡುತ್ತ ತತ್ತ್ವಾಭಿಮಾನಿದೇವತೆಗಳು ಮತ್ತು ಶ್ರೀಪ್ರಾಣದೇವರ ಸಹಿತರಾಗಿ ದೇಹವನ್ನು ಬಿಟ್ಟು ವೈಕುಂಠಲೋಕವನ್ನು ಪಡೆದರು.

**ವೃಂದಾವನಮಭೂತ್ತತ್ರ ಶ್ರೀಸತ್ಯವಿಜಯಾಜ್ಞಯಾ ।**
**ಸಮಾರಾಧನಪೂರ್ವಂ ತೇ ಚಕ್ರುಃ ಸತ್ಯಪ್ರಿಯೈಃ ಸಹ ॥ ೨೩ ॥**

ಕೋಲ್ಪುರದಲ್ಲಿ ಶ್ರೀಸತ್ಯವಿಜಯರ ಆಜ್ಞೆಯಂತೆ ಶ್ರೀಸತ್ಯಪೂರ್ಣರ ವೃಂದಾವನವು ನಿರ್ಮಿತವಾಯಿತು. ಶ್ರೀಸತ್ಯವಿಜಯರು ಶ್ರೀಸತ್ಯಪ್ರಿಯರೊಡನೆ ಶ್ರೀಸತ್ಯಪೂರ್ಣರ ಮಹಾಸಮಾರಾಧನೆಯನ್ನು ಮಾಡಿದರು.

**ತತಃ ಸರ್ವಾಣುಸಂಸ್ಥಾನಪದಾರ್ಥಾದೀನ್ ಗುರೂತ್ತಮಾಃ ।**
**ದತ್ವಾ ಸತ್ಯಪ್ರಿಯಾಖ್ಯೇಭ್ಯಃ ಶ್ರೀಸತ್ಯವಿಜಯಾಭಿಧಾಃ ॥ ೨೪ ॥**

**ಪುನರ್ದಿಗ್ವಿಜಯಾರ್ಥಂ ತಾನ್ ಪ್ರೇಷಯಿತ್ವಾ ತತಃಪರಮ್ ।**
**ಸ್ವಯಂ ಕರ್ಣಾಟಕಂ ಜಗ್ಮುಃ ಮಹಾಸಂಸ್ಥಾನಸಂಯುತಾಃ ॥ ೨೫ ॥**

ಬಳಿಕ ಅಣುಸಂಸ್ಥಾನದ ಎಲ್ಲ ಪದಾರ್ಥಗಳನ್ನೂ ಶ್ರೀಸತ್ಯಪ್ರಿಯರಿಗೆ ಕೊಟ್ಟು ಅವರನ್ನು ದಿಗ್ವಿಜಯಕ್ಕೆ ಕಳಿಸಿ ಶ್ರೀಸತ್ಯವಿಜಯರು ತಾವು ಮಹಾಸಂಸ್ಥಾನದಿಂದೊಡಗೂಡಿ ಕರ್ನಾಟಕದ ಪ್ರದೇಶಕ್ಕೆ ಸಂಚಾರಕ್ಕೆ ಹೊರಟರು.

**ಯದಾ ಶ್ರೀಸತ್ಯವಿಜಯಾಃ ಕೋಲ್ಪುರಾತ್ತು ವಿನಿರ್ಗತಾಃ ।**
**ತದಾ ದೇಶೇಷು ಸಂಚಾರಂ ಕೃತ್ವಾ ಕರ್ಣಾಟಕಂ ಗತಾಃ ॥ ೨೬ ॥**

ಕೋಲ್ಪುರದಿಂದ ಹೊರಟ ಶ್ರೀಸತ್ಯವಿಜಯತೀರ್ಥರು ಆಯಾ ಪ್ರದೇಶಗಳಲ್ಲಿ ಸಂಚಾರಮಾಡುತ್ತ ಕರ್ಣಾಟಕದಲ್ಲಿ ಸಂಚರಿಸಿದರು.

ಕೃಷ್ಣಾಜೀಪಂತ ಮತ್ತು ವೆಂಕಾಜೀಪಂತರಿಂದ ಸುವರ್ಣಪೀಠಾದಿಗಳ ದಾನ

**ಶ್ರೀಪಾದಾಗಮನಂ ಶ್ರುತ್ವಾ ಷಡಾರಣ್ಯಕಸಂಸ್ಥಿತಃ ।**
**ಕೃಷ್ಣಾಜೀಪಂತಃ ಸ್ವೈಃ ವಿಪ್ರೈಃ ಆಹ್ವಯಾಮಾಸ ತಾನ್ ತದಾ ॥**

ಮುಂದೆ ಶ್ರೀಸತ್ಯವಿಜಯರು ಸಮೀಪದಲ್ಲಿ ಇರುವದನ್ನು ಕೇಳಿ ಷಡಾರಣ್ಯಕ ಅಂದರೆ ಆರ್ಕಾಟಿನಲ್ಲಿದ್ದ ಕೃಷ್ಣಾಜೀಪಂತನು ಬ್ರಾಹ್ಮಣರನ್ನು ಕಳಿಸಿಕೊಟ್ಟು ಅವರನ್ನು ತನ್ನ ಊರಿಗೆ ಆಹ್ವಾನಿಸಿದನು.

**ತೈರರ್ಥಿತಾಸ್ತು ಶ್ರೀಪಾದಾಃ ಷಡಾರಣ್ಯಕಸಂಜ್ಞಕಮ್ ।**
**ಗತ್ವಾ ಕೃಷ್ಣಾಜಿಪಂತೇನ ಪೂಜಿತಾಸ್ತು ಆರಣೀಂ ಯಯುಃ ॥ ೨೮ ॥**

ಕೃಷ್ಣಾಜೀಪಂತನು ಕಳಿಸಿದ ಬ್ರಾಹ್ಮಣರಿಂದ ಪ್ರಾರ್ಥಿತರಾದ ಶ್ರೀಸತ್ಯವಿಜಯರು ಷಡಾರಣ್ಯಕ ಅಂದರೆ ಆರ್ಕಾಟಿಗೆ ಹೋಗಿ ಕೃಷ್ಣಾಜೀಪಂತನಿಂದ ಸತ್ಕರಿಸಲ್ಪಟ್ಟು ಮುಂದೆ ಆರಣಿಗೆ ಹೋದರು.

**ತತ್ರ ವೆಂಕಟರಾಜೇನ ಪೂಜಿತಾಶ್ಚ ಸಭಾತಲೇ ।**
**ಊಷುಸ್ತೇ ಕತಿಚಿತ್‌ಕಾಲಂ ತತ್ರೈವ ಗುರುಶೇಖರಾಃ ॥ ೨೯ ॥**

ಆರಣಿಯಲ್ಲಿ ವೆಂಕಟರಾಜನಿಂದ ಪೂಜಿತರಾಗಿ ಕೆಲವು ಕಾಲ ಅಲ್ಲಿಯೇ ಇದ್ದರು.

**ಸ್ವರ್ಣಪೀಠಂ ವಜ್ರಚಿತಸಂಪುಟಂ ರತ್ನಮಂಡಿತಮ್ ।**
**ಅಲಂಕಾರಾನ್ ದದೌ ತೇಭ್ಯಃ ಭಕ್ತ್ಯಾ ಕೃಷ್ಣಾಖ್ಯಪಂಡಿತಃ ॥ ೩೦ ॥**

ಕೃಷ್ಣಾಜೀಪಂತನು ಶ್ರೀಗಳವರ ಪೂಜೆಗೆ ಬಂಗಾರದ ಪೀಠ, ವಜ್ರಖಚಿತವಾದ ಸಂಪುಟ, ರತ್ನಖಚಿತವಾದ ಆಭರಣಗಳನ್ನು ಭಕ್ತಿಯಿಂದ ಕೊಟ್ಟನು.

**ತದಾನೀಂ ಸತ್ಯವಿಜಯಶ್ರೀಪಾದಾನಾಂ ಸಮೀಪಗಾಃ ।**
**ಸಂಸ್ಥಾನದಾನೇ ತು ಅನ್ಯೇಭ್ಯಃ ವೃಥಾ ಯತ್ನಂ ಪ್ರಚಕ್ರಿರೇ ॥ ೩೧ ॥**

ಈ ಸಮಯದಲ್ಲಿ ಶ್ರೀಸತ್ಯವಿಜಯರ ಸಮೀಪದಲ್ಲಿದ್ದ ಕೆಲವರು ಶ್ರೀಸತ್ಯಪ್ರಿಯರನ್ನು ಬಿಟ್ಟು ಇನ್ನೊಬ್ಬರಿಗೆ ಸಂಸ್ಥಾನವನ್ನು ಕೊಡಿಸಬೇಕೆಂಬ ನಿಷ್ಫಲಪ್ರಯತ್ನವನ್ನು ಮಾಡಿದರು.

**ಸತ್ಯಪ್ರಿಯಾಃ ತದಖಿಲಂ ಶ್ರುತ್ವಾ ಸ್ವೀಯಜನೈಃ ತತಃ ।**
**ಆರ್ಯಾಣಾಮಂತಿಕಂ ನೈವ ಗತಾಃ ವ್ಯತ್ಯಸ್ತಚೇತಸಃ ॥ ೩೨ ॥**

ಶ್ರೀಸತ್ಯಪ್ರಿಯತೀರ್ಥರು ತಮ್ಮ ಶಿಷ್ಯರ ಮುಖಾಂತರ ಇದೆಲ್ಲವನ್ನೂ ಕೇಳಿ ತಿಳಿದು ಮನಸ್ಸು ಮುರಿದವರಾಗಿ ಶ್ರೀಸತ್ಯವಿಜಯರ ಕಡೆಗೆ ಬರಲೇ ಇಲ್ಲ.

**ತತಸ್ತೇ ಸತ್ಯವಿಜಯಾಃ ಶ್ವಾಸರೋಗೇಣ ಪೀಡಿತಾಃ ।**
**ಚಕ್ರುಃ ದಿಗ್ವಿಜಯಂ ಚೋಲಮಂಡಲೇ ತದನಂತರಮ್ ॥ ೨೩ ॥**

ಬಳಿಕ ಶ್ರೀಸತ್ಯವಿಜಯರು ಶ್ವಾಸರೋಗದಿಂದ ಪೀಡಿತರಾದವರಾಗಿ ಚೋಲದೇಶದಲ್ಲಿಯೇ ದಿಗ್ವಿಜಯವನ್ನು ಮಾಡುತ್ತಾ ಇದ್ದರು.

**ಶ್ರೀಪಾದಾಸ್ತು ಆರಣೀಮೇತ್ಯ ವ್ಯಂಕಟಪ್ರಭುಸದ್ಮನಿ ।**
**ದೇವಪೂಜಾಂ ತತಃ ಕೃತ್ವಾ ಭುಕ್ತ್ವಾ ದ್ವಿಜಗಣೈಃ ಸಹ ॥ ೩೪ ॥**

**ಉಷಿತ್ವಾ ತದ್ದಿನೇ ರಾತ್ರೌ ಶ್ವಾಸೇನಾತ್ಯಂತಪೀಡಿತಾಃ ।**
**ಬ್ರಾಹ್ಮೇ ಮುಹೂರ್ತೇ ಚೋತ್ಥಾಯ ಚೋಪವಿಷ್ಟಾ ಬಭೂವಿರೇ ॥**

ಬಳಿಕ ಶ್ರೀಸತ್ಯವಿಜಯರು ಆರಣಿಗೆ ಬಂದು ವೆಂಕಟರಾಜನ ಮನೆಯಲ್ಲಿ ಪೂಜೆಯನ್ನು ಮಾಡಿ ಬ್ರಾಹ್ಮಣರೊಡನೆ ಭೋಜನಮಾಡಿ, ಅಂದು ರಾತ್ರಿ ಶ್ವಾಸರೋಗದಿಂದ ಬಹಳವಾಗಿ ಪೀಡಿತರಾಗಿ ಬ್ರಾಹ್ಮಮುಹೂರ್ತದಲ್ಲಿ ಎದ್ದು ಕುಳಿತುಕೊಂಡರು.

**ತದಾನೀಂ ವೆಂಕಟಾಖ್ಯಂ ತೇ ಸಮಾಹೂಯ ಗುರೂತ್ತಮಾಃ ।**
**ಪದಾರ್ಥಮಖಿಲಂ ದೇವಂ ತದಧೀನಂ ವಿಧಾಯ ಚ ॥ ೩೬ ॥**

ಗುರುಶ್ರೇಷ್ಠರಾದ ಶ್ರೀಸತ್ಯವಿಜಯರು ವೆಂಕಟರಾಜನನ್ನು ಕರೆದು ದೇವರನ್ನೂ ಎಲ್ಲ ಪದಾರ್ಥಗಳನ್ನೂ ಅವನ ಸ್ವಾಧೀನಕ್ಕೆ ಕೊಟ್ಟರು.

**ತತಃ ತಮೂಚುಃ ಶ್ರೀಪಾದಾಃ ವೆಂಕಟಾಖ್ಯಂ ಪ್ರಭೂತ್ತಮಮ್ ।**
**ದೂರದೇಶಂ ಗತಾಃ ಸತ್ಯಪ್ರಿಯಾಃ ಸಂಸ್ಥಾನಸಂಯುತಾಃ ॥ ೩೭ ॥**

ಹೀಗೆ ಮಹಾಸಂಸ್ಥಾನದ ಪದಾರ್ಥಗಳನ್ನೆಲ್ಲ ವೆಂಕಟರಾಜನಿಗೆ ಒಪ್ಪಿಸಿ ಶ್ರೀಸತ್ಯವಿಜಯತೀರ್ಥರು 'ಶ್ರೀಸತ್ಯಪ್ರಿಯತೀರ್ಥರು ಅಣುಸಂಸ್ಥಾನದೊಂದಿಗೆ ದೂರದೇಶಕ್ಕೆ ಹೋಗಿರುವರು' ಎಂಬುದನ್ನು ಅವನಿಗೆ ತಿಳಿಸಿದರು.

ಅಸ್ಮಾಕಂ ಪರಲೋಕಸ್ಯ ಯಾತ್ರಾಕಾಲಃ ಸಮಾಗತಃ ।
ತಸ್ಮಾತ್ ಸರ್ವಂ ತವಾಧೀನಂ ಜಾತಂ ವಿಜ್ಞಪ್ತಿಪತ್ರಿಕಾಮ್ ॥ ೩೮ ॥

ಲಿಖಿತ್ವಾ ಪ್ರೇಷಯ ಕ್ಷಿಪ್ರಂ ಶ್ರೀಮತ್ಸತ್ಯಪ್ರಿಯಾನ್ ಪ್ರತಿ ।
ಆಗತಾಶ್ಚೇತ್ ತ್ವಯಾ ದೇಯಂ ತೇಭ್ಯಃ ಸರ್ವಂ ತ್ವಯಿ ಸ್ಥಿತಮ್ ॥

ತಾನ್ ವಿನಾ ಸರ್ವಥಾ ಅನ್ಯೇಭ್ಯಃ ನ ದೇಯಂ ದೇವಸಂಯುತಮ್ ।
ಇತ್ಯುಕ್ತ್ವಾ ತಂ ಪ್ರತಿ ತತಃ ಚಕ್ರುಃ ನ್ಯುಚ್ಛೌಚಪೂರ್ವಕಮ್ ॥

ನಮ್ಮ ಪರಲೋಕಯಾತ್ರೆಯು ಸಮೀಪಕ್ಕೆ ಬಂದಿದೆ. ಆದ್ದರಿಂದ ಮಹಾಸಂಸ್ಥಾನದ ಎಲ್ಲ ಪದಾರ್ಥಗಳನ್ನೂ ನಿನ್ನ ಸ್ವಾಧೀನಕ್ಕೆ ಕೊಟ್ಟಿದ್ದೇವೆ. ಶ್ರೀಸತ್ಯಪ್ರಿಯತೀರ್ಥರಿಗೆ ಇಲ್ಲಿಗೆ ಬರಲು ವಿಜ್ಞಪ್ತಿಪತ್ರಿಕೆಯನ್ನು ಕಳಿಸಿ ಕೊಡು. ಅವರು ಬಂದಕೂಡಲೇ ದೇವರನ್ನೂ ಈ ಎಲ್ಲ ಪದಾರ್ಥಗಳನ್ನೂ ಅವರಿಗೆ ಒಪ್ಪಿಸು ಎಂದು ಶ್ರೀಸತ್ಯವಿಜಯರು ವೆಂಕಟರಾಜನಿಗೆ ಹೇಳಿದರು.

ಶ್ರೀಸತ್ಯಪ್ರಿಯತೀರ್ಥರನ್ನು ಬಿಟ್ಟು ಬೇರೆ ಯಾರಿಗೂ ದೇವರನ್ನೂ ಮಹಾಸಂಸ್ಥಾನ ಪದಾರ್ಥಗಳನ್ನೂ ಕೊಡಬಾರದು ಎಂದು ವೆಂಕಟರಾಜನಿಗೆ ಹೇಳಿ ತಾವು ಮೃತ್ತಿಕಾಶೌಚಾದಿ ಶುದ್ಧಿ ಕಾರ್ಯಗಳನ್ನು ಮಾಡಿಕೊಂಡರು.

ತತಸ್ತೇ ಸತ್ಯವಿಜಯತೀರ್ಥಾಃ ಸಿದ್ಧಾರ್ಥಿವತ್ಸರೇ ।
ಚೈತ್ರಮಾಸೇ ಕೃಷ್ಣಪಕ್ಷೇ ಚೈಕಾದಶ್ಯಾಮಿನೋದಯೇ ॥ ೪೧ ॥

ಸ್ನಾತ್ವಾ ಯೋಗಾಯೋಪವಿಷ್ಟಾಃ ಲಯಚಿಂತನತತ್ಪರಾಃ ।
ಭುವಿ ದೇಹಂ ಪರಿತ್ಯಜ್ಯ ಪರಂ ಹರಿಪುರಂ ಯಯುಃ ॥ ೪೨ ॥

ಬಳಿಕ ಶ್ರೀಸತ್ಯವಿಜಯತೀರ್ಥರು ಸಿದ್ಧಾರ್ಥಿ ಸಂವತ್ಸರದ ಚೈತ್ರಮಾಸದ ಕೃಷ್ಣಪಕ್ಷ ಏಕಾದಶಿಯ ದಿನ ಸೂರ್ಯೋದಯವಾದಮೇಲೆ ಸ್ನಾನಮಾಡಿ ಧ್ಯಾನಮಗ್ನರಾಗಿ ದೇಹವನ್ನು ಬಿಟ್ಟು ಶ್ರೇಷ್ಠವಾದ ವೈಕುಂಠಪುರಿಗೆ ತೆರಳಿದರು.

ಸ ಕೌಂಡಿನ್ಯಾನದೀತೀರೇ ವೆಂಕಟಪ್ರಭುಶೇಖರಃ ।
ಕಾರಯಾಮಾಸ ಶ್ರೀಪಾದವೃಂದಾವನಮನನ್ಯಧೀಃ ॥ ೪೩ ॥

ವೆಂಕಟರಾಜನು ಕೌಂಡಿಣ್ಯನದೀತೀರದಲ್ಲಿ ಶ್ರೀಸತ್ಯವಿಜಯರ ವೃಂದಾವನವನ್ನು ನಿರ್ಮಿಸಿದನು.

**ತತಃ ಪರಂ ಸ ವಿಜ್ಞಪ್ತಿಪತ್ರಿಕಾಮತಿ ಶೀಘ್ರತಃ ।**
**ಲಿಖಿತ್ವಾ ಪ್ರೇಷಯಾಮಾಸ ಶ್ರೀಮತ್ಸತ್ಯಪ್ರಿಯಾಂತಿಕಮ್ ॥ ೪೪ ॥**

ಬಳಿಕ ಶ್ರೀವೆಂಕಟರಾಜನು ಶ್ರೀಸತ್ಯಪ್ರಿಯತೀರ್ಥರಿಗೆ ಇಲ್ಲಿಗೆ ಬರಬೇಕೆಂಬ ವಿಜ್ಞಾಪನಾಪತ್ರವನ್ನು ಕೂಡಲೇ ಕಳಿಸಿಕೊಟ್ಟನು.

**ತತಸ್ತೇ ಶೀಘ್ರಮಾನೀತಾಂ ವಿಪ್ರೈಃ ವಿಜ್ಞಪ್ತಿಪತ್ರಿಕಾಮ್ ।**
**ವಿಲೋಕ್ಯ ಜಗ್ಮುಃ ತ್ರಿಚತುರಯೋಜನಾನಿ ನಿರಂತರಮ್ ॥ ೪೫ ॥**

ಬ್ರಾಹ್ಮಣರು ತಂದ ಆ ವಿಜ್ಞಾಪನಾಪತ್ರಿಕೆಯನ್ನು ನೋಡಿ ಶ್ರೀಸತ್ಯಪ್ರಿಯತೀರ್ಥರು ದಿನಕ್ಕೆ ಮೂರು-ನಾಲ್ಕು ಯೋಜನೆಗಳಂತೆ ಪ್ರಯಾಣ ಮಾಡುತ್ತ ಬರತೊಡಗಿದರು.

**ದ್ವಾವಿಂಶದ್ದಿವಸೇ ಪ್ರಾಪ್ತಾಸ್ತು ಆರಣೀಂ ಗುರುಶೇಖರಾಃ ।**
**ಶ್ರೀಮತ್ಸತ್ಯಪ್ರಿಯಾನ್ ದೃಷ್ಟ್ವಾ ತೇಭ್ಯೋ ವೆಂಕಟನಾಯಕಃ ॥**

**ರಾಮವ್ಯಾಸೈಃ ಸಹಾಶೇಷಪದಾರ್ಥಾನ್ ಸ ಸಮರ್ಪಯತ್ ।**
**ಆರಾಧನಾನಿ ಚಕ್ರುಸ್ತೇ ನಿತ್ಯಂ ತೇ ದಿವಸತ್ರಯಮ್ ॥ ೪೭ ॥**

ಶ್ರೀಸತ್ಯಪ್ರಿಯತೀರ್ಥರು ಇಪ್ಪತ್ತೆರಡು ದಿನ ಪ್ರಯಾಣಮಾಡಿ ಆರಣಿಗೆ ಬಂದು ತಲುಪಿದರು. ವೆಂಕಟರಾಜನು ಅವರಿಗೆ ಶ್ರೀಮೂಲರಾಮದೇವರು ವ್ಯಾಸಮುಷ್ಟಿಗಳು ಮತ್ತು ಇನ್ನಿತರ ಸಕಲಪದಾರ್ಥಗಳನ್ನು ಸಮರ್ಪಿಸಿದನು. ಅವರು ತಮ್ಮ ಗುರುಗಳಾದ ಶ್ರೀಸತ್ಯವಿಜಯರ ಮಹಾಸಮಾರಾಧನೆಯನ್ನು ಮೂರು ದಿನ ವಿಜೃಂಭಣೆಯಿಂದ ಮಾಡಿದರು.

**ಯಃ ಶ್ರೀಮದ್ಗುರುರಾಜಸತ್ಯವಿಜಯ ಶ್ರೀಪಾದಯೋಗಾದಿಸತ್**
**ಕರ್ಮೋದ್ಭೂತಕಥಾಮಿಮಾಮಘಹರಾಃ ಪ್ರಾತಃ ಶುಚಿಃ**
**ಕೀರ್ತಯೇತ್ ।**

**ಸೋಽಸ್ಮಿನ್ ಸಜ್ಜನ ಸಂಘಕೀರ್ತಿತಗುಣೋ ನೀತಿಪ್ರವೀಣಃ ಸದಾ**
**ಸಚ್ಛಾಸ್ತ್ರಸಂಗರತಶ್ಚ ತತ್ಕರುಣಯಾ ಯೋಗೀ ಭವೇತ್ ಸರ್ವದಾ ||**

ಯಾರು ಶ್ರೀಸತ್ಯವಿಜಯ ಗುರುವರ್ಯರ ಯೋಗ ಮಾಹಾತ್ಮ್ಯವೇ ಮೊದಲಾದ ಅದ್ಭುತ ಕಥೆಗಳನ್ನು ಪ್ರತಿದಿನವೂ ವರ್ಣಿಸುವರೋ ಅವರು ಸಜ್ಜನ ಸಮೂಹದಲ್ಲಿ ಕೀರ್ತಿಪಾತ್ರರಾಗಿ ನೀತಿವಂತರಾಗಿ ಸಚ್ಛಾಸ್ತ್ರ ವ್ಯಾಸಂಗ ನಿರತರಾಗಿ ಅವರ ಅನುಗ್ರಹದಿಂದ ಯೋಗವನ್ನೂ ತಿಳಿಯಬಲ್ಲರು.

ಇತಿ ಶ್ರೀ ದೈವಜ್ಞಭೀಮವಿರಚಿತವಾದ ಪೂರ್ಣಬೋಧ ಗುರುವಂಶಕಥಾಕಲ್ಪತರುವಿನ ಇಪ್ಪತ್ತಮೂರು, ಇಪ್ಪತ್ತನಾಲ್ಕನೆಯ ಸರ್ಗಗಳಲ್ಲಿ ಬಂದ 'ಶ್ರೀ ಸತ್ಯವಿಜಯ ಮಹಿಮೆಯ' ಸಾರಸಂಗ್ರಹ ಮತ್ತು ಕನ್ನಡ ಅನುವಾದವು ಪಾಂಡುರಂಗಿ ತಮ್ಮಣಾಚಾರ್ಯಪುತ್ರ ಕೃಷ್ಣಾಚಾರ್ಯನಿಂದ ರಚಿತವಾದುದು ಮುಗಿಯಿತು.

# ಶ್ರೀಸತ್ಯಪ್ರಜ್ಞಚರಿತಮ್

ಮಂಗಲಶ್ಲೋಕಗಳು

**ಕರವೀರಪುರಸ್ಥಾಯಾಃ ಶ್ರಿಯಃ ಪತ್ಯುಃ ಪದಾಂಬುಜೇ ।**
**ಪ್ರಣಮ್ಯ ಪ್ರಾರ್ಥಯೇ ಜ್ಞಾನಭಕ್ತಿವೈರಾಗ್ಯಸಂಪದಮ್ ॥ ೧ ॥**

ಕರವೀರಪುರ ಅಂದರೆ ಕೊಲ್ಹಾಪುರದಲ್ಲಿ ವಾಸವಾಗಿರುವ ಶ್ರೀಮಹಾಲಕ್ಷ್ಮೀದೇವಿಯ ಪತಿಯಾದ ಶ್ರೀನಿವಾಸದೇವರ ಪಾದಕಮಲಗಳಿಗೆ ನಮಸ್ಕರಿಸಿ ಜ್ಞಾನ ಭಕ್ತಿ ಮತ್ತು ವೈರಾಗ್ಯಗಳ ಸಂಪತ್ತನ್ನು ಕೊಡಬೇಕೆಂದು ಪ್ರಾರ್ಥಿಸುವೆನು.

**ಪೂರ್ಣಪ್ರಜ್ಞಂ ಗುರುಂ ನತ್ವಾ ವಿದ್ಯಾಧೀಶಂ ಕುಲೋದ್ವಹಮ್ ।**
**ಸತ್ಯಪ್ರಜ್ಞಸ್ಯ ಚರಿತಂ ಕೀರ್ತಯಾಮಿ ಯಥಾಮತಿ ॥ ೨ ॥**

ಪೂರ್ಣಪ್ರಜ್ಞಗುರುಗಳನ್ನೂ ಪಾಂಡುರಂಗಿವಂಶದ ಉದ್ಧಾರಕರಾದ ಶ್ರೀವಿದ್ಯಾಧೀಶತೀರ್ಥರನ್ನೂ ನಮಸ್ಕರಿಸಿ ಯಥಾಮತಿ ಶ್ರೀಸತ್ಯಪ್ರಜ್ಞತೀರ್ಥರ ಚರಿತ್ರೆಯನ್ನು ವರ್ಣಿಸುವೆನು.

ಪಾಂಡುರಂಗೀವಂಶದ ಮೂಲಪುರುಷರಾದ ಆನಂದಭಟ್ಟಾರಕರು

**ಗೋದಾವರೀತಟಾಕಸ್ಥ ಪುಣ್ಯಸ್ತಂಭಪುರೇ ಪುರಾ ।**
**ಆನಂದಭಟ್ಟ ಇತ್ಯಾಸೀತ್ ಪಾಂಡುರಂಗೀಕುಲಾಗ್ರಜಃ ॥ ೩ ॥**

ಗೋದಾವರೀತೀರದಲ್ಲಿರುವ ಪುಣ್ಯಸ್ತಂಭಪುರ ಎಂಬ ಊರಲ್ಲಿ ಹಿಂದೆ ಪಾಂಡುರಂಗೀವಂಶದ ಮೂಲಪುರುಷರಾದ ಆನಂದಭಟ್ಟಾರಕ ಎಂಬವರು ಇದ್ದರು (ಈಗ ಮಹಾರಾಷ್ಟ್ರದ ಅಹಮ್ಮದ್‌ನಗರ ಜಿಲ್ಲೆಯಲ್ಲಿರುವ ಪುಣತಾಂಬಾ ಗ್ರಾಮವೇ ಈ ಪುಣ್ಯಸ್ತಂಭಪುರವು. ಆನಂದಭಟ್ಟರು ಕ್ರಿ.ಶ. ೧೫೦೦ ರಿಂದ ೧೫೮೦ ಅವಧಿಯಲ್ಲಿ ಇದ್ದರು).

**ತಪಸಾ ಪರಿತುಷ್ಟಾsಸ್ಯ ಕರವೀರಪುರಾಧಿಪಾ ।**
**ದರ್ಶನಂ ಸರ್ಪರೂಪೇಣ ದದೌ ವಿದ್ಯಾಂ ಪ್ರಜಾಃ ತಥಾ ॥ ೪ ॥**

ಈ ಅನಂದಭಟ್ಟರು ಹನ್ನೆರಡು ವರ್ಷಕಾಲ ಕೊಲ್ಹಾಪುರದಲ್ಲಿ ಮಹಾಲಕ್ಷ್ಮೀದೇವಿಯನ್ನು ಕುರಿತು ತಪಸ್ಸು ಮಾಡಿದರು. ಆಗ ಮಹಾಲಕ್ಷ್ಮಿಯು ಸಂತುಷ್ಟಳಾಗಿ ಸರ್ಪರೂಪದಿಂದ ದರ್ಶನಕೊಟ್ಟಳು. ಈ ಸರ್ಪವನ್ನು ಅನಂದಭಟ್ಟರು ಹನ್ನೊಂದು ಬೆರಳುಗಳಿಂದ ಮುಟ್ಟಿದರು (ಒಮ್ಮೆ ಎರಡೂ ಕೈಗಳಿಂದ ಸ್ಪರ್ಶಿಸಿದರು. ಎರಡನೆಯಸಲ ಒಂದು ಬೆರಳಿನಿಂದ ಸ್ಪರ್ಶಿಸಿದರು. ಅನಂತರ ಸರ್ಪವು ಬಿಲದಲ್ಲಿ ಅದೃಶ್ಯವಾಯಿತು) ಆಗ ಲಕ್ಷ್ಮೀದೇವಿಯು ಹನ್ನೊಂದು ತಲೆಮಾರು ವಿದ್ಯೆ, ಸತ್ ಸಂತಾನ, ಐಶ್ವರ್ಯ ದೊರೆಯುವದೆಂದು ಆಶೀರ್ವದಿಸಿದಳು

**ಅದ್ವೈತಸಿದ್ಧಿ ಕುಲಿಶಂ ಕಂಟಕೋದ್ಧಾರನಾಮಿಕಾಮ್ ।**
**ವ್ಯಾಖ್ಯಾಂ ನ್ಯಾಯಾಮೃತಸ್ಯಾಯಂ ಕೃತ್ವಾ ಕೀರ್ತಿಮವಾಪ್ತವಾನ್ ॥**

ನ್ಯಾಯಾಮೃತಕ್ಕೆ ಉತ್ತರರೂಪವಾಗಿ ಮಧುಸೂದನ ಸರಸ್ವತಿಗಳು ಬರೆದ ಅದ್ವೈತಸಿದ್ಧಿ ಎಂಬ ಗ್ರಂಥಕ್ಕೆ ಖಂಡನರೂಪವಾಗಿ ನ್ಯಾಯಾಮೃತ ಕಂಟಕೋದ್ಧಾರ ಎಂಬ ಹೆಸರಿನ ವ್ಯಾಖ್ಯಾನವನ್ನು ಬರೆದು ಶ್ರೀ ಅನಂದ ಭಟ್ಟರು ಕೀರ್ತಿಯನ್ನು ಸಂಪಾದಿಸಿದರು (ಈ ಕಂಟಕೋದ್ಧಾರ ವ್ಯಾಖ್ಯಾನವು ಕಲಕತ್ತಾ ವಿಶ್ವವಿದ್ಯಾನಿಲಯದ ಸಂಸ್ಕೃತ ಗ್ರಂಥಮಾಲೆಯಲ್ಲಿ ೧೯೩೪ ರಲ್ಲಿ ಪ್ರಕಟವಾಗಿದೆ. ೧೯೮೪ ರಲ್ಲಿ ಇದರ ಪುನರ್ಮುದ್ರಣವನ್ನು ಮೆಹರಚಂದ ಲಕ್ಷ್ಮಣದಾಸರು ಮಾಡಿದ್ದಾರೆ.)

**ವಾದಿರಾಜಸ್ಯಾಜ್ಞಯಾಽಸೌ ತತ್ಕೃಪಾಬಲಪೋಷಿತಃ ।**
**ಅದ್ವೈತಪಂಡಿತಂ ಜಿತ್ವಾ ಜಯಪತ್ರಮವಾಪ್ತವಾನ್ ॥ ೬ ॥**

(ಶ್ರೀವಾದಿರಾಜರು ಉತ್ತರ ಭಾರತದ ಸಂಚಾರವನ್ನು ಮುಗಿಸಿಕೊಂಡು ತಮ್ಮ ಪರ್ಯಾಯಕ್ಕೆ ಕೂಡಲು ಉಡುಪಿಗೆ ತಿರುಗಿ ಹೊರಟಾಗ ಪೈಠಣ ನಗರದಲ್ಲಿಯ ಅದ್ವೈತ ಪಂಡಿತರೊಬ್ಬರು ತಮ್ಮೊಡನೆ ವಾದಕ್ಕೆ ಬರಬೇಕೆಂದು ಆಹ್ವಾನಿಸಿದರು. ಶ್ರೀವಾದಿರಾಜರು ಅಲ್ಲಿಗೆ ಹೋದಮೇಲೆ ಆ ಪಂಡಿತರು ಇನ್ನೂ ಕೆಲವು ದಿನಗಳಾದಮೇಲೆ ವಾದಕ್ಕೆ ಬರುವದಾಗಿ ಹೇಳಿದರು. ಆಗ ಶ್ರೀವಾದಿರಾಜರು ತಾವು ಪರ್ಯಾಯಕ್ಕೆ ಅವಶ್ಯವಾಗಿ ಹೋಗಬೇಕಾದ್ದರಿಂದ ಸಮೀಪದಲ್ಲಿಯೇ ಪುಣತಾಂಬೆಯಲ್ಲಿದ್ದ ಪಾಂಡುರಂಗಿ ಅನಂದಭಟ್ಟರನ್ನು ಕರಿಸಿ

ಕೊಂಡು ಅವರಿಗೆ ಮಂತ್ರಾಕ್ಷತೆಕೊಟ್ಟು ನೀವು ಇಲ್ಲಿಯೇ ಇದ್ದು ಈ ವಾದಿಯನ್ನು ಜಯಿಸಿಕೊಂಡು ಬರಬೇಕೆಂದು ಆಜ್ಞೆ ಮಾಡಿದರು. ಅದರಂತೆ ಅವರು ಆ ವಾದಿಯನ್ನು ಜಯಿಸಿ ಅವನಿಂದ ಜಯಪತ್ರವನ್ನು ತಂದು ಒಪ್ಪಿಸಿದ ವಿಷಯವು ಈ ಶ್ಲೋಕದಲ್ಲಿ ಬಂದಿದೆ. ಈ ಘಟನೆಯು ಶ್ರೀವಾದಿರಾಜರು ಮೂರನೆಯ ಪರ್ಯಾಯಕ್ಕೆ ಕೂಡುವ ಕಾಲದಲ್ಲಿ ನಡೆದದ್ದು.)

ಶ್ರೀವಾದಿರಾಜರ ಆಜ್ಞೆಯಂತೆ ಅವರ ಕೃಪಾಪಾತ್ರರಾದ ಆನಂದಭಟ್ಟರು ಓರ್ವ ಅದ್ವೈತಪಂಡಿತನನ್ನು ಜಯಿಸಿ ಜಯಪತ್ರವನ್ನು ತಂದು ಶ್ರೀವಾದಿರಾಜರಿಗೆ ಒಪ್ಪಿಸಿದರು.

**ವಾದಿರಾಜಾದವಾಪ್ನೋಚ್ಚ ಸುಪ್ರೀತಮನಸಃ ತತಃ ।**
**ಶಾಲಗ್ರಾಮಂ ರತ್ನಗರ್ಭಂ ಹಯಾಸ್ಯಪ್ರತಿಮಾಂ ತಥಾ ॥ ೭ ॥**

ಹೀಗೆ ಜಯಪತ್ರವನ್ನು ತಂದು ಒಪ್ಪಿಸಿದ್ದರಿಂದ ಸುಪ್ರೀತರಾದ ಶ್ರೀವಾದಿರಾಜರಿಂದ ರತ್ನಗರ್ಭಶಾಲಗ್ರಾಮವನ್ನೂ ಬೆಳ್ಳಿಯ ಹಯಗ್ರೀವ ದೇವರ ಪ್ರತಿಮೆಯನ್ನೂ ಪಡೆದರು (ಈ ರತ್ನಗರ್ಭಶಾಲಗ್ರಾಮವು ಈಗ ಧಾರವಾಡದಲ್ಲಿರುವ ತುಮ್ಮಿನಕಟ್ಟೀ ಪಾಂಡುರಂಗಿ ರಾಮಾಚಾರ್ಯರ ಮನೆಯಲ್ಲಿದೆ. ಶತಾಯುಷಿಗಳಾದ ಇವರು ಇನ್ನೂ ಪೂಜೆ ಮಾಡುತ್ತಿರುವರು. ಬೆಳ್ಳಿಯ ಹಯಗ್ರೀವದೇವರು ರಾಣೇಬೆನ್ನೂರಿನಲ್ಲಿದ್ದ ಪಾಂಡುರಂಗೀ ವಿದ್ಯಾಧೀಶಾಚಾರ್ಯರಲ್ಲಿದೆ. ಇವರು ರಾಮಾಚಾರ್ಯರ ತಮ್ಮ ಹನುಮಂತಾಚಾರ್ಯರ ಮಕ್ಕಳು. ತುಮ್ಮಿನಕಟ್ಟೀ ಹುಚ್ಚಾಚಾರ್ಯರ ಮೊಮ್ಮಕ್ಕಳು)

**ತಸ್ಯ ಪುತ್ರೋ ನೃಸಿಂಹಾಖ್ಯಃ ಜ್ಞಾನವೈರಾಗ್ಯಸಾಗರಃ ।**
**ವೇದಾಂತಪೀಠಮಾರುಹ್ಯ ವಿದ್ಯಾಧೀಶ ಇತಿ ಶ್ರುತಃ ॥ ೮ ॥**

ಈ ಆನಂದಭಟ್ಟರ (ಎರಡನೆಯ) ಮಕ್ಕಳಾದ ನರಸಿಂಹಾಚಾರ್ಯರು ಜ್ಞಾನವೈರಾಗ್ಯಸಂಪನ್ನರೂ ಮಹಾವಿದ್ವಾಂಸರೂ ಆಗಿದ್ದರು. ಇವರು (ಶ್ರೀವೇದವ್ಯಾಸತೀರ್ಥರಿಂದ ಆಶ್ರಮವನ್ನು ಪಡೆದು) ಶ್ರೀವಿದ್ಯಾಧೀಶತೀರ್ಥರು ಎಂಬ ಹೆಸರಿನಿಂದ ಶ್ರೀಮದುತ್ತರಾದಿಮಠದ ಪೀಠಾಧಿಪತಿಗಳಾದರು. (ಕ್ರಿ ಶ ೧೬೧೯ ರಿಂದ ೧೬೩೧ ರವರೆಗೆ ಇವರು ಪೀಠಾಧಿಪತಿಗಳಾಗಿದ್ದರು)

**ಸಾಧನದ್ವಾದಶೀಕಾಲೇ ಲಕ್ಷಬ್ರಾಹ್ಮಣಭೋಜನಮ್ ।**
**ಶೂರ್ಪಗ್ರಾಮೇऽಕಾರಯಚ್ಚ ಮಾತುಃ ಸಂಕಲ್ಪಪೂರಕಮ್ ॥ ೯ ॥**

ಇವರ ಪೂರ್ವಾಶ್ರಮದ ತಾಯಿಯವರು ಲಕ್ಷಜನಬ್ರಾಹ್ಮಣರ ಭೋಜನ ಮಾಡಿಸುವದಾಗಿ ಬೇಡಿಕೊಂಡಿದ್ದರು. ಇದನ್ನು ಪೂರೈಸಲು ಶ್ರೀವಿದ್ಯಾಧೀಶರು ಕೃಷ್ಣಾತೀರದಲ್ಲಿರುವ ಶೂರ್ಪಾಲೀ ಕ್ಷೇತ್ರದಲ್ಲಿ ಸಾಧನೀದ್ವಾದಶೀದಿವಸ ಒಂದು ಲಕ್ಷ ಬ್ರಾಹ್ಮಣರ ಭೋಜನವನ್ನು ಮಾಡಿಸಿದರು. (ಈ ಸಮಾರಂಭಕ್ಕೆ ಶ್ರೀಯಾದವಾರ್ಯರನ್ನೂ ಆಹ್ವಾನಿಸಿದ್ದರು. ಶ್ರೀಯಾದವಾರ್ಯರಿಗೆ ಭೋಜನ ಮಾಡಿಸಿದ್ದರಿಂದ ಎರಡುಲಕ್ಷ ಬ್ರಾಹ್ಮಣರಿಗೆ ಭೋಜನ ಮಾಡಿಸಿದ್ದರ ಫಲ ಬಂದಿತೆಂದು ತಮ್ಮ ತಾಯಿಗೆ ಶ್ರೀವಿದ್ಯಾಧೀಶರು ಹೇಳಿದರೆಂದು ಐತಿಹ್ಯವಿದೆ. ಈ ಸಮಯದಲ್ಲಿ ಮಳೆ ಬಂದದ್ದನ್ನು ಪರಿಹರಿಸಲು ಶ್ರೀವಿದ್ಯಾಧೀಶರು ಶ್ರೀಪ್ರಾಣದೇವರ ಪ್ರತಿಷ್ಠೆಯನ್ನು ಶ್ರೀನರಸಿಂಹದೇವರ ದೇವಸ್ಥಾನದ ಹತ್ತಿರ ದಲ್ಲಿಯೇ ಮಾಡಿದ್ದಾರೆ.)

**ವಾಕ್ಯಾರ್ಥಚಂದ್ರಿಕಾಗ್ರಂಥಂ ರಚಯಾಮಾಸ ಯಃ ಸುಧೀಃ ।**
**ಪ್ರದಕ್ಷಿಣೀಚಕಾರಾಸೌ ಗೌತಮೀಂ ಚ ಸರಿದ್ವರಾಮ್ ॥ ೧೦ ॥**

ಶ್ರೀವಿದ್ಯಾಧೀಶರು ಶ್ರೀಮನ್ನ್ಯಾಯಸುಧಾ ಗ್ರಂಥದ ಮೊದಲಿನ ಐದು ಅಧಿಕರಣಗಳಿಗೆ ವಾಕ್ಯಾರ್ಥಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆದಿರುವರು. (ಇದನ್ನು ಉಡುಪಿಯಲ್ಲಿ ಚಾತುರ್ಮಾಸಕ್ಕೆ ಕುಳಿತಾಗ ಬರೆದಿರುವರು.) ಶ್ರೀವಿದ್ಯಾಧೀಶರು (ಕೆಲವಿದ್ವಾಂಸರನ್ನು ಜೊತೆಗೆ ಕರೆದುಕೊಂಡು ದೇವರ ಪೆಟ್ಟಿಗೆಯನ್ನು ಹೆಗಲಿಗೆ ಹಾಕಿಕೊಂಡು ಪಾದಚಾರಿಗಳಾಗಿ) ಗೋದಾವರೀ ನದಿಯ ಪ್ರದಕ್ಷಿಣೆಯನ್ನು ಮಾಡಿದರು.

**ವಿಷ್ಣುದೀಕ್ಷಾಂ ದದೌ ಯೋಗೀ ಗಯಾವಿಪ್ರೇಭ್ಯ ಏವ ಚ ।**
**ಗತ್ವಾ ಚ ಬದರೀಕ್ಷೇತ್ರಂ ನನಾಮ ಹರಿಮಾದರಾತ್ ॥ ೧೧ ॥**

ಶ್ರೀವಿದ್ಯಾಧೀಶರು ಉತ್ತರಭಾರತದ ಸಂಚಾರ ಮಾಡುತ್ತ ಗಯೆಗೆ ಹೋಗಿ ಗಯಾವಾಡರಿಗೆ ವೈಷ್ಣವದೀಕ್ಷೆಯನ್ನು ಕೊಟ್ಟರು. ಮುಂದೆ ಬದರೀ ಕ್ಷೇತ್ರಕ್ಕೆ ಹೋಗಿ ಬದರೀನಾರಾಯಣನನ್ನು ವಂದಿಸಿದರು. (ಗಯಾವಾಡರು

ಮೊದಲು ತಾಂತ್ರಿಕರಾಗಿದ್ದರು. ಶ್ರೀವಿದ್ಯಾಧೀಶರು ಒಣಗಿಹೋದ ಮರವನ್ನು ತೀರ್ಥಪ್ರೋಕ್ಷಣದಿಂದ ಚಿಗಿರಿಸಿದ್ದನ್ನು ಕಂಡು ಬೆರಗಾಗಿ ಅವರ ಶಿಷ್ಯರಾದರು. ಇಂದಿಗೂ ಗಯಾವಾಡರು ಮಾಧ್ವಸಂಪ್ರದಾಯವನ್ನು ಅನುಸರಿಸುವರು. ವಿಷ್ಣುಪಾದದ ಮಂದಿರದ ಆವಾರದಲ್ಲಿ ಶ್ರೀವಿದ್ಯಾಧೀಶರು ಉತ್ತರಾದಿಮಠವನ್ನು ಕಟ್ಟಿಸಿರುವರು. ಪ್ರಾಣದೇವರ ಪ್ರತಿಷ್ಠೆ ಮಾಡಿರುವರು. ವಿಷ್ಣುಪಾದಕ್ಕೆ ಮಧ್ಯಾನ್ಹದ ನೈವೇದ್ಯವು ಉತ್ತರಾದಿಮಠದಿಂದಲೇ ಹೋಗುವದು. ಶ್ರೀಮದುತ್ತರಾದಿಮಠಕ್ಕೆ ವಿಷ್ಣುಪಾದದ ಪಕ್ಕದಲ್ಲಿಯೇ ದೇವರನ್ನಿಟ್ಟು ಪೂಜೆ ಮಾಡುವ ಅಧಿಕಾರವಿರುವದು.)

ಕೇಶವಭಟ್ಟಾರಕರು

**ತಸ್ಯಾನುಜಃ ಕೇಶವಾರ್ಯಃ ಪ್ರಿಯಃ ಪರತರೋಽಸ್ಯ ಹಿ ।**
**ಶುಕವತ್ ಶಿಕ್ಷಿತೋಽನೇನ ಕೃತವಾನ್ ಟಿಪ್ಪಣೀಃ ಶುಭಾಃ ॥ ೧೨ ॥**

ಶ್ರೀವಿದ್ಯಾಧೀಶರ ಪೂರ್ವಾಶ್ರಮದ ತಮ್ಮಂದಿರು ಕೇಶವಾಚಾರ್ಯರು. ಇವರು ಶ್ರೀವಿದ್ಯಾಧೀಶರ ಪರಮಪ್ರೀತಿಗೆ ಪಾತ್ರರಾಗಿದ್ದರು. ಅವರೇ ಇವರಿಗೆ ಪಾಠವನ್ನು ಹೇಳಿದರು. ಈ ಕೇಶವಾಚಾರ್ಯರು ಅನೇಕ ಟಿಪ್ಪಣಿಗಳನ್ನು ಬರೆದಿರುವರು. (ಶ್ರೀಆನಂದಭಟ್ಟಾರಕರಿಗೆ ಶ್ರೀನಿವಾಸಾಚಾರ್ಯ, ನರಸಿಂಹಾಚಾರ್ಯ, ಕೇಶವಾಚಾರ್ಯ ಎಂದು ಮೂರು ಜನ ಮಕ್ಕಳು. ಹಿರಿಯ ಮಕ್ಕಳಾದ ಶ್ರೀನಿವಾಸಾಚಾರ್ಯರೇ ತತ್ತ್ವಪ್ರಕಾಶಿಕಾಕ್ಕೆ ತತ್ತ್ವಸುಬೋಧಿನೀ ಎಂಬ ಟಿಪ್ಪಣಿಯನ್ನು ಬರೆದಿರುವರು. ಇವರು ಮುಂದೆ ಸಪ್ತಗೋದಾವರೀ ಪ್ರದೇಶಕ್ಕೆ ಹೋಗಿ ನೆಲೆಸಿದರು. ಎರಡನೆಯವರಾದ ಶ್ರೀನರಸಿಂಹಾಚಾರ್ಯರೇ ಆಶ್ರಮ ಪಡೆದು ಶ್ರೀವಿದ್ಯಾಧೀಶರಾದರು. ಮೂರನೆಯ ಮಕ್ಕಳಾದ ಶ್ರೀಕೇಶವಾಚಾರ್ಯರೇ ಶೇಷವಾಕ್ಯಾರ್ಥಚಂದ್ರಿಕಾದಿ ಟಿಪ್ಪಣೀ ಬರೆದವರು. ಇವರೇ ಮುಂದೆ ಗುರುರಾಜರೆಂದು ಪ್ರಸಿದ್ಧರಾದರು. ಇವರು ಆನಂದಭಟ್ಟಾರಕರ ಅಣ್ಣಂದಿರಾದ ತಿಮ್ಮಣ್ಣಭಟ್ಟರ ಮಕ್ಕಳೆಂಬ ಐತಿಹ್ಯವೂ ಇದೆ.)

**ಶೇಷವಾಕ್ಯಾರ್ಥಚಂದ್ರಾಖ್ಯಟಿಪ್ಪಣ್ಯಾ ಸಮಪೂರಯತ್ ।**
**ವಾಕ್ಯಾರ್ಥಚಂದ್ರಿಕಾಂ ಯೋಽಸೌ ವಿದ್ಯಾಧೀಶಾಜ್ಞಯಾ ಮುದಾ ॥**



श्रीसत्यध्यानतीर्थाः
(1914–42)

श्रीसत्यप्रज्ञतीर्थाः
(1942–45)

ಈ ಕೇಶವಾಚಾರ್ಯರು ಶ್ರೀವಿದ್ಯಾಧೀಶರ ಆಜ್ಞೆಯಂತೆ ಶ್ರೀಮನ್ನ್ಯಾಯ ಸುಧಾದ ಆರನೆಯ ಅಧಿಕರಣದಿಂದ ಕೊನೆಯವರೆಗೆ ಶೇಷವಾಕ್ಯಾರ್ಥಚಂದ್ರಿಕಾ ಎಂಬ ವಿಸ್ತಾರವಾದ ಟಿಪ್ಪಣಿಯನ್ನು ಬರೆದರು. (ಮೊದಲಿನ ಐದು ಅಧಿಕರಣ ಗಳಿಗೆ ಶ್ರೀವಿದ್ಯಾಧೀಶರ ವಾಕ್ಯಾರ್ಥಚಂದ್ರಿಕಾ ಇರುವದು. ಮುಂದಿನ ಭಾಗಕ್ಕೆ ಟಿಪ್ಪಣಿ ಬರೆಯಲು ಶ್ರೀವಿದ್ಯಾಧೀಶರು ಇವರಿಗೆ ಆಜ್ಞೆ ಮಾಡಿದರು. ಅವರ ಆಜ್ಞೆಯಂತೆ ಇವರು ಬರೆದು ಪೂರೈಸಿದರು. ಇದು ಮುದ್ರಿತವಾಗಿದೆ.)

**ವಿದ್ಯಾಧೀಶಗುರೂತ್ತಂಸಕೃಪಾಬಲಸಮನ್ವಿತಃ ।**
**ತಾತ್ಪರ್ಯಚಂದ್ರಿಕಾವೃತ್ತಿಂ ರಚಯಾಮಾಸ ವಿಸ್ತರಾಮ್ ॥ ೧೪ ॥**

ಶ್ರೀವಿದ್ಯಾಧೀಶರ ಅನುಗ್ರಹಬಲದಿಂದ ಇವರು ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕಾಕ್ಕೆ ವಿಸ್ತಾರವಾದ ಟಿಪ್ಪಣಿಯನ್ನು ರಚಿಸಿರುವರು. (ಇದು ಬೃಹದ್ ಗುರುರಾಜೀಯ, ಲಘುಗುರುರಾಜೀಯ ಎಂದು ಎರಡು ವಿಧವಾಗಿದೆ. ಎರಡನೆಯದು ಮುದ್ರಿತವಾಗಿದೆ.)

**ದಶಪ್ರಕರಣಂ ತೇನ ಟಿಪ್ಪಣೀಭಿಃ ವಿಭೂಷಿತಮ್ ।**
**ಋಚಾಂ ಭಾಷ್ಯಸ್ಯ ಟೀಕಾಪಿ ವ್ಯಾಖ್ಯಾತಾ ಪ್ರೌಢಯಾ ಗಿರಾ ॥ ೧೫ ॥**

ಈ ಕೇಶವಾಚಾರ್ಯರು ದಶಪ್ರಕರಣಗಳಿಗೆ ಟಿಪ್ಪಣಿಗಳನ್ನು ಬರೆದಿರುವರು. ಋಗ್ಭಾಷ್ಯದ ಟೀಕೆಗೂ ಪ್ರೌಢವಾದ ಟಿಪ್ಪಣಿಯನ್ನು ಬರೆದಿರುವರು. (ಇವರ ದಶಪ್ರಕರಣ ಟಿಪ್ಪಣಿಗಳಲ್ಲಿ ತತ್ವಸಂಖ್ಯಾನ, ತತ್ತ್ವೋದ್ಯೋತ, ತತ್ತ್ವನಿರ್ಣಯ ಟಿಪ್ಪಣಿಗಳು ಮುದ್ರಿತವಾಗಿವೆ. ಕಥಾಲಕ್ಷಣ, ಪ್ರಮಾಣ ಲಕ್ಷಣ, ಮಾಯಾವಾದ ಖಂಡನ, ಮಿಥ್ಯಾತ್ವಾನುಮಾನಖಂಡನ ಟಿಪ್ಪಣಿಗಳು ಹಸ್ತಲಿಖಿತರೂಪದಲ್ಲಿ ಉಪಲಬ್ಧವಾಗಿವೆ. ತತ್ವವಿವೇಕ, ಉಪಾಧಿಖಂಡನ ಮತ್ತು ಕರ್ಮನಿರ್ಣಯ ಟಿಪ್ಪಣಿಗಳು ಹಸ್ತಲಿಖಿತರೂಪದಲ್ಲಿಯೂ ಉಪಲಬ್ಧ ವಾಗಿಲ್ಲ. ಋಗ್ಭಾಷ್ಯ ಟಿಪ್ಪಣಿಯು ಹಸ್ತಲಿಖಿತರೂಪದಲ್ಲಿ ಉಪಲಬ್ಧವಾಗಿದೆ. ಇದಲ್ಲದೆ ವ್ಯಾಕರಣಪ್ರದೀಪಿತ ಪ್ರಮೇಯದೀಪಿಕಾ ವ್ಯಾಖ್ಯಾನವೆಂಬ ಗೀತೆಗೆ ಸಂಬಂಧಿಸಿದ ಒಂದು ಹಸ್ತಲಿಖಿತ ಗ್ರಂಥವೂ ಉಪಲಬ್ಧವಾಗಿದೆ.)

**ತಸ್ಯ ಪುತ್ರೌ ಶ್ರೀನಿವಾಸನೃಸಿಂಹಾಖ್ಯೌ ಬುಧೋತ್ತಮೌ ।**
**ಶ್ರೀನಿವಾಸಸ್ಯ ಪುತ್ರೋಽಭೂತ್ ಬಾಬಾಚಾರ್ಯ ಇತಿ ಶ್ರುತಃ ॥೧೬॥**

ಈ ಕೇಶವಾಚಾರ್ಯರಿಗೆ ಗಡ್ಡದ ಶ್ರೀನಿವಾಸಾಚಾರ್ಯರು ರತ್ನಮಾಲಾ ನರಸಿಂಹಾಚಾರ್ಯರು ಎಂದು ಪಂಡಿತೋತ್ತಮರಾದ ಇಬ್ಬರು ಮಕ್ಕಳಾದರು. ಗಡ್ಡದ ಶ್ರೀನಿವಾಸಾಚಾರ್ಯರೆಂಬ ಇವರ ಹಿರಿಯ ಮಕ್ಕಳಿಗೆ ಬಾಬಾಚಾರ್ಯರು ಎಂಬ ಮಕ್ಕಳಾದರು. (ಇವರಿಗೆ ಬಾಳಾಚಾರ್ಯರು ಎಂದು ಹೆಸರು ಇದ್ದುದಾಗಿಯೂ ತಿಳಿದುಬರುತ್ತದೆ.) (ಆನಂದಾಚಾರ್ಯರು ಮತ್ತು ವಿದ್ಯಾಧೀಶಾಚಾರ್ಯರು ಎಂಬ ಇನ್ನಿಬ್ಬರು ಶ್ರೀವಿದ್ಯಾಧೀಶರ ಪೂರ್ವಾಶ್ರಮದ ಮಕ್ಕಳಾದ ಕೃಷ್ಣಾಚಾರ್ಯರ ಮಕ್ಕಳು. ಕೃಷ್ಣಾಚಾರ್ಯರು ಅಲ್ಪಾಯುಷಿಗಳಾದ್ದರಿಂದ ಶ್ರೀಕೇಶವಾಚಾರ್ಯರೇ ಈ ಇಬ್ಬರನ್ನೂ ಪೋಷಿಸಿ ದೊಡ್ಡವರನ್ನಾಗಿ ಮಾಡಿದರು.)

**ಮೇರುಸ್ವಾಮಿಕೃತೇ ಗ್ರಾಮೇ ರಾಜಮನ್ನಾರಸನ್ನಿಧೌ ।**
**ಬಾಬಾಚಾರ್ಯಃ ಬುಧೈಃ ಸಾಕಂ ನ್ಯವಸತ್ ಚೋಲಮಂಡಲೇ ॥**

(ಸಮರ್ಥರಾಮದಾಸರ ಶಿಷ್ಯರಾದ ಮೇರುಸ್ವಾಮಿ ಎಂಬವರು ಮೂಲತಃ ಸಾತಾರಾ ಜಿಲ್ಲೆಯವರು. ಇವರು ತಿರುವಣ್ಣಾಮಲೆಗೆ ಬಂದು ನೆಲೆಸಿದರು. ಮುಂದೆ ತಂಜಾವೂರು ಮನ್ನಾರಗುಡಿಗಳಲ್ಲಿಯೂ ಇವರ ಪ್ರಭಾವ ಬೆಳೆಯಿತು. ಮನ್ನಾರಗುಡಿಯಲ್ಲಿ ಒಂದು ಅಗ್ರಹಾರವನ್ನು ಕಟ್ಟಿಸಿ ಅನೇಕ ವಿದ್ವಾಂಸರಿಗೆ ಇವರು ಆಶ್ರಯಮಾಡಿಕೊಟ್ಟರು. ಇಂಥವರಲ್ಲಿ ಗಡ್ಡದ ಶ್ರೀನಿವಾಸಾಚಾರ್ಯರೂ ಒಬ್ಬರಾಗಿದ್ದರು. ಆದ್ದರಿಂದ ಇವರ ಮಕ್ಕಳಾದ ಬಾಬಾಚಾರ್ಯರು ಮನ್ನಾರಗುಡಿಯಲ್ಲಿದ್ದರು. ಮೇರುಸ್ವಾಮಿಯ ಶಿಷ್ಯ ಸೇತುಗೋಸ್ವಾಮಿಯ ಉಲ್ಲೇಖವು ಶ್ರೀಸತ್ಯಬೋಧ ವಿಜಯದಲ್ಲಿ ಬರುತ್ತದೆ.) ಚೋಳದೇಶದಲ್ಲಿಯ ರಾಜಗೋಪಾಲಪುರದ ಹತ್ತಿರದ ಮನ್ನಾರಗುಡಿಯಲ್ಲಿ ಮೇರುಸ್ವಾಮಿಯು ಕಟ್ಟಿಸಿದ ಅಗ್ರಹಾರದಲ್ಲಿ ಬಾಬಾಚಾರ್ಯರು ಇನ್ನಿತರ ಅನೇಕ ಮಾಧ್ವ ವಿದ್ವಾಂಸರೊಡನೆ ಇದ್ದರು.

**ಸೋಽಪಿ ವೇದಾಂತಸಾಮ್ರಾಜ್ಯಮಾರುರೋಹ ಕುಶಾಗ್ರಧೀಃ ।**
**ಶ್ರೀಸತ್ಯವಿಜಯಾಹ್ವೇನ ನಾಮ್ನಾ ವಿಖ್ಯಾತವೈಭವಃ ॥ ೧೮ ॥**

ಪಂಡಿತೋತ್ತಮರಾದ ಈ ಬಾಬಾಚಾರ್ಯರು ಶ್ರೀಸತ್ಯವಿಜಯತೀರ್ಥರು ಎಂಬ ಹೆಸರಿನಿಂದ ಪ್ರಸಿದ್ಧರಾಗಿ ಶ್ರೀಮದುತ್ತರಾದಿಮಠದ ಪೀಠಾಧಿಪತಿಗಳಾದರು. (ಶ್ರೀಸತ್ಯವಿಜಯರು ಶ್ರೀಸತ್ಯಪೂರ್ಣರ ನಂತರ ಮತ್ತು ಶ್ರೀಸತ್ಯಪ್ರಿಯರಿಗೆ ಮೊದಲು ಪೀಠಾಧಿಪತಿಗಳಾಗಿದ್ದರು. ಇವರು ಶ್ರೀಸತ್ಯಬೋಧರಿಗೆ ಪರಮಗುರುಗಳು. ಕ್ರಿ.ಶ. ೧೭೨೬ ರಿಂದ ೧೭೩೭ ರವರೆಗೆ ಪೀಠಾಧಿಪತಿಗಳಾಗಿದ್ದರು.)

**ಆರಣೀಪತಿನಾ ಕೃಷ್ಣಪಂತೇನ ಬಹುಸೇವಿತಃ ।**
**ಶ್ರೀಸತ್ಯವಿಜಯಸ್ತತ್ರ ವಾಸಂ ಚಕ್ರೇ ಯತೀಶ್ವರಃ ॥ ೧೯ ॥**

ಆರಣಿಯ ರಾಜನಾದ ಕೃಷ್ಣಾಜೀಪಂತನು ಇವರ ಶಿಷ್ಯನಾಗಿದ್ದನು. ಅವನ ರಾಜಧಾನಿಯಾದ ಆರಣೀನಗರದಲ್ಲಿಯೇ ಶ್ರೀಸತ್ಯವಿಜಯರು ಬಹುಕಾಲ ಇರುತ್ತಿದ್ದರು. (ಇದೇ ರಾಜಮನೆತನದ ವೆಂಕಾಜೀಪಂತನೂ ಇವರ ಶಿಷ್ಯನಾಗಿದ್ದನು. ಮಠಕ್ಕೆ ಅನೇಕ ಬಂಗಾರದ ಪಾತ್ರೆಗಳನ್ನೂ ಮುತ್ತುರತ್ನಗಳ ಆಭರಣಗಳನ್ನೂ ಇವರಿಬ್ಬರೂ ಕೊಟ್ಟಿರುವರು.)

**ವೃಂದಾವನಂ ಚ ತಸ್ಯಾದ್ಯ ರಾಜತೇ ಭಕ್ತಸೇವಿತಮ್ ।**
**ಕೌಂಡಿಣ್ಯತಟಿನೀತೀರೇ ವಿಪ್ರವೃಂದೇನ ಭೂಷಿತೇ ॥ ೨೦ ॥**

ಶ್ರೀಸತ್ಯವಿಜಯರ ವೃಂದಾವನವು ಕೌಂಡಿಣ್ಯನದೀ ದಂಡೆಯಮೇಲೆ (ಆರಣಿಯಿಂದ ಮೂರುಮೈಲು ದೂರದಲ್ಲಿ) ಶ್ರೀಸತ್ಯವಿಜಯ ನಗರವೆಂದೇ ಈಗ ಪ್ರಸಿದ್ಧವಾದ ಸ್ಥಳದಲ್ಲಿ ಭಕ್ತಜನರಿಂದ ಸೇವಿಸಲ್ಪಡುತ್ತ ವಿರಾಜಮಾನವಾಗಿದೆ. ಈ ಸ್ಥಳವು (ಆರಣೀರಾಜನು ಇಲ್ಲಿ ಕಟ್ಟಿಸಿಕೊಂಡ ಅರಮನೆಯ ಪಕ್ಕದಲ್ಲಿಯೇ ಇದ್ದು) ವಿಪ್ರಕುಟುಂಬಗಳ ನಿವಾಸಗಳಿಂದ ಭೂಷಿತವಾಗಿದೆ. (ಹಿಂದೆ ಆರಣೀರಾಜನ ಇಲ್ಲಿಯ ಅರಮನೆಯಲ್ಲಿ ಅರವತ್ತು ಜನ ಬ್ರಾಹ್ಮಣ ಕುಟುಂಬದವರಿಗೆ ನಿತ್ಯವೂ ಭೋಜನದ ಏರ್ಪಾಡು ಇತ್ತು. ಇವರೆಲ್ಲ ಈ ಸತ್ಯವಿಜಯನಗರವೆಂಬ ಈ ಅಗ್ರಹಾರದಲ್ಲಿಯೇ ವಾಸಿಸುತ್ತಿದ್ದರು. ಈಗ ಐದಾರು ಕುಟುಂಬಗಳು ಮಾತ್ರ ಉಳಿದಿವೆ. ಆರಣೀರಾಜನು ನಿತ್ಯ ಶ್ರೀಸತ್ಯವಿಜಯರ ದರ್ಶನ ಮಾಡುವದಕ್ಕೆ ಅನುಕೂಲವಾಗುವಂತೆ ಅರಮನೆಯಿಂದ ಮಠಕ್ಕೆ ಒಳಬಾಗಿಲ ಇದೆ. ಪಾಕಶಾಲೆ ಇತ್ಯಾದಿಗಳಿವೆ. ಶ್ರೀಸತ್ಯವಿಜಯರ ಮೂಲ ವೃಂದಾವನವಿದ್ದ

*

ಮಠದ ಆವರಣದಲ್ಲಿಯೇ ಶ್ರೀಸತ್ಯವೀರತೀರ್ಥರ ಮೃತ್ತಿಕಾವೃಂದಾವನವಿದೆ. ಇವರ ಅನುಗ್ರಹದಿಂದ ಶ್ರೀ ಆರಣೀ ಶ್ರೀನಿವಾಸರಾವ ಎಂಬವರಿಗೆ ಮಕ್ಕಳಾದ್ದರಿಂದ ಈ ಮೃತ್ತಿಕಾವೃಂದಾವನವನ್ನು ಸ್ಥಾಪಿಸಲಾಗಿದೆ. ಮಠವು ಅರಮನೆಯ ಪಕ್ಕಕ್ಕೆ ಕೌಂಡಿಣ್ಯನದೀತೀರದಲ್ಲಿಯೇ ಇದೆ. ಈ ನದಿಗೆ ಕಮಂಡಲುನಾಗ ನದಿಯೆಂದೂ ಹೆಸರಿದೆ.)

**ರತ್ನಮಾಲಾ ನರಸಿಂಹಾಚಾರ್ಯರು ಮತ್ತು ಅವರ ಸಂತತಿಯ ಪರಂಪರೆ**

**ದ್ವಿತೀಯಃ ಪುತ್ರ ಏಷೋಽಸೌ ಕೇಶವಾರ್ಯಸ್ಯ ಧೀಮತಃ ।**
**ನೃಸಿಂಹಾಖ್ಯೋ ರತ್ನಮಾಲಾಕರ್ತೇತಿ ಬಹುವಿಶ್ರುತಃ ॥ ೨೧ ॥**

ಶ್ರೀಕೇಶವಭಟ್ಟಾರಕರ ಎರಡನೆಯ ಮಕ್ಕಳು ಶ್ರೀನರಸಿಂಹಾಚಾರ್ಯರು. ಇವರು ರತ್ನಮಾಲಾಕಾರರೆಂದು ಬಹಳ ಪ್ರಸಿದ್ಧರಾದರು.

**ವಾಕ್ಯಾರ್ಥರತ್ನಮಾಲೇತಿ ಟಿಪ್ಪಣೀ ತೇನ ನಿರ್ಮಿತಾ ।**
**ವಾಕ್ಯಾರ್ಥಚಂದ್ರಿಕಾಭಾವಂ ವಿಶದಂ ವಿವೃಣೋತಿ ಯಾ ॥ ೨೨ ॥**

ಶ್ರೀನರಸಿಂಹಾಚಾರ್ಯರು ಶ್ರೀವಿದ್ಯಾಧೀಶರ ವಾಕ್ಯಾರ್ಥಚಂದ್ರಿಕಾ ಮತ್ತು ಶ್ರೀಕೇಶವಭಟ್ಟಾರಕರ ಶೇಷವಾಕ್ಯಾರ್ಥಚಂದ್ರಿಕಾ ಗ್ರಂಥಗಳಿಗೆ ವಾಕ್ಯಾರ್ಥರತ್ನಮಾಲಾ ಎಂಬ ವಿಸ್ತಾರವಾದ ಟಿಪ್ಪಣಿಯನ್ನು ಬರೆದಿದ್ದಾರೆ. ಇದರಲ್ಲಿ ಈ ಎರಡೂ ಗ್ರಂಥಗಳ ಭಾವವನ್ನು ವಿಶದವಾಗಿ ವಿವರಿಸಿದ್ದಾರೆ. (ಈ ಗ್ರಂಥದ ಹಸ್ತಲಿಖಿತಪ್ರತಿಯು ಶ್ರೀಮದುತ್ತರಾದಿ ಮಠದಲ್ಲಿ ಸಂಪೂರ್ಣವಾಗಿದೆ. ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿಯೂ ಇದರ ಒಂದು ಪ್ರತಿಯಿದೆ.)

**ನೃಸಿಂಹಾರ್ಯಾತ್ ಸಪ್ತಮೋಽಭೂತ್ ರಂಗಾಚಾರ್ಯ ಇತಿ ಶ್ರುತಃ ।**
**ಶ್ರೀಸತ್ಯಧೀರವರ್ಯಸ್ಯ ಪೂರ್ವಾಶ್ರಮಸುತಾಪತಿಃ ॥ ೨೩ ॥**

ಈ ರತ್ನಮಾಲಾ ನರಸಿಂಹಾಚಾರ್ಯರಿಂದ ಏಳನೆಯ ತಲೆಮಾರಿನವರು ಪಾಂಡುರಂಗಿ ರಂಗಾಚಾರ್ಯರು. ಇವರು ಶ್ರೀಸತ್ಯಧೀರತೀರ್ಥರ ಅಳಿಯಂದಿರು. (ರಂಗಾಚಾರ್ಯರ ತಂದೆಯವರಾದ ಅಪ್ಪಾಚಾರ್ಯರು ಮತ್ತು ಶ್ರೀಸತ್ಯವೀರರಿಗೂ ಬೀಗತನವಿತ್ತು. ರತ್ನಮಾಲಾಚಾರ್ಯರ ಸಂತತಿಯವರಾದ

ಈ ಪಾಂಡುರಂಗಿ ಮನೆತನದ ಈ ವಿಭಾಗದವರು ಸವಣೂರಿಗೆ ಹತ್ತುಮೈಲು ದೂರದಲ್ಲಿರುವ ಕಡಕೋಳ ಎಂಬ ಗ್ರಾಮದಲ್ಲಿ ವಾಸವಾಗಿದ್ದರು. ಈಗಲೂ ಇವರ ಸಂತತಿಯವರು ಕೆಲವರು ಅಲ್ಲಿರುವರು.)

**ಭೀಮಕೃಷ್ಣಜಯಾಖ್ಯಾಸ್ತು ತಸ್ಯ ಪುತ್ರಾಃ ತ್ರಯೋಽಭವನ್ ।**
**ಶ್ರೀಸತ್ಯಧ್ಯಾನತೀರ್ಥಸ್ಯ ಭಾಗಿನೇಯಾ ಬುಧೋತ್ತಮಾಃ . ॥ ೨೪ ॥**

ಈ ರಂಗಾಚಾರ್ಯರಿಗೆ ಭೀಮಾಚಾರ್ಯರು ಕೃಷ್ಣಾಚಾರ್ಯರು ಮತ್ತು ಜಯಾಚಾರ್ಯರೆಂದು ಮೂರು ಜನ ಮಕ್ಕಳು. ಇವರೆಲ್ಲ ಶ್ರೀಸತ್ಯಧ್ಯಾನ ತೀರ್ಥರ ಪೂರ್ವಾಶ್ರಮದ ಅಕ್ಕನ ಮಕ್ಕಳು. (ಶ್ರೀಸತ್ಯಧೀರರ ಪೂರ್ವಾಶ್ರಮದ ಮಗಳೇ ಶ್ರೀರಂಗಾಚಾರ್ಯರ ಧರ್ಮಪತ್ನಿ ಮತ್ತು ಶ್ರೀಸತ್ಯಧ್ಯಾನರ ಪೂರ್ವಾಶ್ರಮದ ಅಕ್ಕ. ಶ್ರೀಸತ್ಯಧ್ಯಾನರು ಶ್ರೀಸತ್ಯಧೀರರ ಪೂರ್ವಾಶ್ರಮದ ಮಕ್ಕಳು. ಕೃಷ್ಣಾಚಾರ್ಯರು ಮತ್ತು ಜಯಾಚಾರ್ಯರು ಇವರಿಗೆ ಶ್ರೀಸತ್ಯಧ್ಯಾನರು ಪೂರ್ವಾಶ್ರಮದ ಹೆಣ್ಣುಮಕ್ಕಳನ್ನು ಕೊಟ್ಟು ಮದುವೆ ಮಾಡಿದ್ದರಿಂದ ಇವರಿಬ್ಬರೂ ಅವರ ಅಳಿಯಂದಿರೂ ಆದರು. ಹೀಗೆ ಇವರಿಬ್ಬರೂ ಶ್ರೀಸತ್ಯಧ್ಯಾನತೀರ್ಥರ ಸೋದರಳಿಯ ಹಾಗೂ ಅಳಿಯ ಎಂಬ ಎರಡು ವಿಧವಾದ ಬಾಂಧವ್ಯವುಳ್ಳವರೂ ಆಗಿದ್ದರು.)

ಶ್ರೀಸತ್ಯಧ್ಯಾನತೀರ್ಥರು

**ಜ್ಞಾನೇ ದಾನೇ ಚ ವಿತ್ತಸ್ಯ ವಾಕ್ಯಾರ್ಥಪರಿಷತ್ಸು ಚ ।**
**ಅನ್ನದಾನೇ ಸಮೋ ನಾಸ್ತಿ ಸತ್ಯಧ್ಯಾನಯತೇಃ ಖಲು ॥ ೨೫ ॥**

ಪಾಂಡಿತ್ಯದಲ್ಲಿ, ಪಂಡಿತರಿಗೆ ಸಂಭಾವನೆ ಕೊಡುವದರಲ್ಲಿ, ವಾಕ್ಯಾರ್ಥ ಸಭೆಗಳನ್ನು ಏರ್ಪಡಿಸಿ ವಾದಮಾಡುವದರಲ್ಲಿ, ಅನ್ನದಾನಮಾಡುವದರಲ್ಲಿ ಶ್ರೀಸತ್ಯಧ್ಯಾನತೀರ್ಥರಿಗೆ ಸಮನಾದವರು ದುರ್ಲಭ.

**ವಾರಾಣಸ್ಯಾಂ ಕುಂಭಕೋಣೇ ಮಹೀಶೂರಪುರೇ ತಥಾ ।**
**ಆಸೇತುಹಿಮವತ್ ತೇನ ತಾಡಿತಾ ದ್ವೈತದುಂದುಭಿಃ ॥ ೨೬ ॥**

ಶ್ರೀಸತ್ಯಧ್ಯಾನತೀರ್ಥರು ಕಾಶಿ, ಕುಂಭಕೋಣ, ಮೈಸೂರು ಇತ್ಯಾದಿ ವಿದ್ಯಾಕೇಂದ್ರಗಳಲ್ಲಿ ವಾಕ್ಯಾರ್ಥಸಭೆಗಳನ್ನು ಏರ್ಪಡಿಸಿ ಆಸೇತುಹಿಮಾಚಲ

ದ್ವೈತಮತದ ವಿಜಯದುಂದುಭಿಯನ್ನು ಬಾರಿಸಿದರು. (ಶ್ರೀ ರಾಮಸುಬ್ಬಾ ಶಾಸ್ತ್ರಿಗಳು ಶ್ರೀ ಅನಂತಕೃಷ್ಣಶಾಸ್ತ್ರಿಗಳು ಮೊದಲಾದ ಪ್ರಮುಖ ಅದ್ವೈತ ವಿದ್ವಾಂಸರು ಈ ಸಭೆಗಳಲ್ಲಿ ಭಾಗಿಗಳಾಗಿದ್ದರು.)

**ಯತಯಶ್ಚಾಪಿ ತತ್‌ಶಿಷ್ಯಾಃ ಚಂದ್ರಿಕಾಪಠನೇ ರತಾಃ ।**
**ಪರಃಶತಂ ಛಾತ್ರಸಂಘಃ ಸುಧಾವಾಕ್ಯಾರ್ಥಕೋವಿದಃ ॥ ೨೭ ॥**

ಬೇರೆ ಬೇರೆ ಮಾಧ್ವಮಠಗಳ ಯತಿಗಳೂ ಶ್ರೀಸತ್ಯಧ್ಯಾನತೀರ್ಥರ ಶಿಷ್ಯರಾಗಿ ಅವರಲ್ಲಿ ತಾತ್ಪರ್ಯಚಂದ್ರಿಕಾಗ್ರಂಥದವರೆಗೆ ಪಾಠವನ್ನು ಓದಿದರು. (ಇವರಲ್ಲಿ ಭಂಡಾರಕೇರಿ ಮತ್ತು ಕುಂದಾಪುರ ಮಠಾಧೀಶರು ಪ್ರಮುಖರು.) ನೂರಾರು ವಿದ್ಯಾರ್ಥಿಗಳು ಇವರಲ್ಲಿ ಶ್ರೀಮನ್ನ್ಯಾಯಸುಧಾಗ್ರಂಥವನ್ನು ಓದಿ ವಾಕ್ಯಾರ್ಥಮಾಡುವದರಲ್ಲಿ ಚತುರರಾಗಿದ್ದರು. (ಇವರಲ್ಲಿ ಪಾಂಡುರಂಗಿ ಕೃಷ್ಣಾಚಾರ್ಯರು, ಜಯಾಚಾರ್ಯರು, ವರಖೇಡಿ ನರಸಿಂಹಾಚಾರ್ಯರು, ಚಿಂಚೋಳಿ ಕೃಷ್ಣಾಚಾರ್ಯರು, ಹುಲಗಿ ಹುಚ್ಚಾಚಾರ್ಯರು, ಮಳಗಿ ವೇದವ್ಯಾಸಾಚಾರ್ಯರು, ಯಜ್ಞವಿಠ್ಠಲಾಚಾರ್ಯರು, ಪಾಂಡುರಂಗಿ ಗುರುರಾಜಾಚಾರ್ಯರು, ಮಾಹುಲಿ ಗೋಪಾಲಾಚಾರ್ಯರು ಮೊದಲಾದವರು ಪ್ರಮುಖರು.)

**ಭಂಡಾರಕೇರಿಮಠಪಃ ವಿದ್ಯಾಮಾನ್ಯಯತೀಶ್ವರಃ ।**
**ತತ್ ಶಿಷ್ಯೇಷು ಅಗ್ರಣೀಃ ಆಸೀತ್ ಮೂರ್ಧನ್ಯಃ ಸಾತ್ವಿಕೇಷು ಚ ॥**

ಅಚ್ಯುತಪ್ರೇಕ್ಷಾಚಾರ್ಯರ ಪರಂಪರೆಯ ಮಠವಾದ ಶ್ರೀ ಭಂಡಾರಕೇರೀ ಮಠಾಧೀಶರಾದ ಶ್ರೀವಿದ್ಯಾಮಾನ್ಯತೀರ್ಥರು ಇವರಯತಿಶಿಷ್ಯರಲ್ಲಿ ಪ್ರಮುಖರು. ಇವರು ಬಹಳ ಸಾತ್ವಿಕರೂ, ವಿದ್ಯಾಪಕ್ಷಪಾತಿಗಳೂ, ಸದಾ ಪಾಠಪ್ರವಚನ ನಿರತರೂ ಆಗಿದ್ದಾರೆ. (ಮುಂದೆ ಇವರು ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಫಲಿಮಾರುಮಠಕ್ಕೆ ಪೀಠಾಧಿಪತಿಗಳಾಗಿ ಶ್ರೀಕೃಷ್ಣನ ಪರ್ಯಾಯ ಪೂಜೆಯನ್ನು ಮಾಡುವ ಭಾಗ್ಯ ಪಡೆದರು.)

**ಚಂದ್ರಿಕಾಮಂಡನಂ ಗೀತಾಸಭಾಸಾರಸ್ಯ ಸಂಗ್ರಹಃ ।**
**ಬ್ರಹ್ಮಸೂತ್ರಂ ಭೇದಪರಂ ಗ್ರಂಥರತ್ನಾನಿ ತಸ್ಯ ವೈ ॥ ೨೯ ॥**

ಚಂದ್ರಿಕಾಮಂಡನ, ಸಭಾಸಾರಸಂಗ್ರಹ (ಗೀತೋಪನ್ಯಾಸಗಳು) ಭೇದಪಂಚಾಶ್ಯೈವ ಬ್ರಹ್ಮಸೂತ್ರಾಣಿ, ಸಿವಿಲ್‌ಸೂಟು, ಗೀತಾಪ್ರತಿಪದಾರ್ಥ ಚಂದ್ರಿಕಾ ಇವು ಇವರ ಪ್ರಧಾನಗ್ರಂಥಗಳು. (ತಿರುನಲ್ವೇಲಿಯ ರಾಮಸುಬ್ಬಾ ಶಾಸ್ತ್ರಿಗಳೆಂಬವರು ಮಾಧ್ವತಾತ್ಪರ್ಯ ಚಂದ್ರಿಕಾಖಂಡನ ಎಂಬ ಗ್ರಂಥವನ್ನು ಬರೆದರು. ಅದನ್ನು ಖಂಡಿಸಿ ಶ್ರೀಸತ್ಯಧ್ಯಾನರು ಚಂದ್ರಿಕಾಮಂಡನ ಎಂಬ ಗ್ರಂಥವನ್ನು ಬರೆದರು. ಪೂರ್ವಾಶ್ರಮದಲ್ಲಿ ಶ್ರೀಸತ್ಯಧ್ಯಾನರ ಆಪ್ತಸ್ನೇಹಿತ ರಾದ ಗೌಡಗಿರಿ ವೆಂಕಟರಮಣಾಚಾರ್ಯ ಎಂಬವರೂ ಚಂದ್ರಿಕಾಪ್ರಕಾಶ ಪ್ರಸರ ಎಂಬ ಗ್ರಂಥವನ್ನು ಇದೇ ಸಂದರ್ಭದಲ್ಲಿ ಬರೆದರು.)

**ಮಧ್ವಸಿದ್ಧಾಂತಾಭಿವೃದ್ಧಿಕಾರಿಣೀ ಪರಿಷತ್ ಕೃತಾ ।**
**ಗುರೋಃ ಸಮಾರಾಧನೇ ತು ಮೃಷ್ಟಾನ್ನಂ ವರ್ಷಿತಂ ಮುದಾ ॥೩೦॥**

ಶ್ರೀಸತ್ಯಧ್ಯಾನರು ಮಧ್ವಸಿದ್ಧಾಂತಾಭಿವೃದ್ಧಿಕಾರಿಣೀ ಎಂಬ ಸಭೆ ಯನ್ನು ಸ್ಥಾಪಿಸಿ (ಪ್ರತಿವರ್ಷ ಡಿಸೆಂಬರ ತಿಂಗಳಲ್ಲಿ ಪದ್ಮಸರೋವರದಲ್ಲಿ ಈ ಸಭೆಯ ಅಧಿವೇಶನವನ್ನು ಏರ್ಪಡಿಸಿ) ವಿದ್ವತ್ಪರಿಷತ್ತುಗಳನ್ನು ಏರ್ಪಡಿಸಿ ದರು. ಅಲ್ಲದೆ, ತಮ್ಮ ಗುರುಗಳ ಮಹಾಸಮಾರಾಧನೆಯನ್ನು ಪ್ರತಿವರ್ಷ ಬೇರೆ ಬೇರೆ ನಗರಗಳಲ್ಲಿ ಏರ್ಪಡಿಸಿ ಲಕ್ಷಾಂತರ ಜನರಿಗೆ ಮೃಷ್ಟಾನ್ನಭೋಜನ ಮಾಡಿಸಿದರು. (ಪಂಡಿತರಿಗೆ ಬೆಳ್ಳಿಯ ಪಾತ್ರೆಗಳನ್ನು ಕೊಟ್ಟು ಸನ್ಮಾನ ಮಾಡಿದರು.)

ಕೃಷ್ಣಾಚಾರ್ಯರು ಮತ್ತು ಜಯಾಚಾರ್ಯರು

**ಸತ್ಯಧ್ಯಾನಸ್ಯ ವಾತ್ಸಲ್ಯಪಾತ್ರಮಾಸೀತ್ ವಿಶೇಷತಃ ।**
**ಕೃಷ್ಣಾಚಾರ್ಯಃ ಪಾಂಡುರಂಗೀ ನ್ಯಾಯವೇದಾಂತಕೋವಿದಃ ॥**

ರಂಗಾಚಾರ್ಯರ ಮಕ್ಕಳಾದ ಕೃಷ್ಣಾಚಾರ್ಯರು ಶ್ರೀಸತ್ಯಧ್ಯಾನ ತೀರ್ಥರ ವಿಶೇಷಪ್ರೀತಿಗೆ ಪಾತ್ರರಾಗಿದ್ದರು. ಇವರು ನ್ಯಾಯವೇದಾಂತ ಶಾಸ್ತ್ರಗಳಲ್ಲಿ ಅಸಾಧಾರಣ ಪಾಂಡಿತ್ಯವುಳ್ಳವರಾಗಿದ್ದರು. (ಇವರು ತಿರುಪತಿ ಯಲ್ಲಿ ಕಪಿಸ್ಥಲಂ ದೇಶಿಕಾಚಾರ್ಯರಲ್ಲಿ ನ್ಯಾಯಶಾಸ್ತ್ರದ ಅಧ್ಯಯನವನ್ನು ಮಾಡಿದರು. ಶ್ರೀಸತ್ಯಧ್ಯಾನತೀರ್ಥರಲ್ಲಿಯೇ ವೇದಾಂತಶಾಸ್ತ್ರದ ಅಧ್ಯಯನ

ವನ್ನು ಮಾಡಿದರು. ಸದಾಕಾಲ ಮಠದಲ್ಲಿಯೇ ಇದ್ದು ಪಾಠಪ್ರವಚನ ಮಾಡುತ್ತಿದ್ದರು.)

**ವಾಕ್ಯಾರ್ಥೇ ವಾ ಪ್ರವಚನೇ ಪ್ರಧಾನಾಂಗಂ ಯತೇರ್ಮುದಾ ।**
**ಕೃಷ್ಣಾಚಾರ್ಯ ಇತಿ ಖ್ಯಾತಿಃ ಲೋಕೇ ಅದ್ಯಾಪಿ ಚ ವಿಶ್ರುತಾ ॥**

ವಾಕ್ಯಾರ್ಥಸಭೆಗಳಲ್ಲಿಯೂ ಪಾಠಪ್ರವಚನದಲ್ಲಿಯೂ ಕೃಷ್ಣಾಚಾರ್ಯರು ಶ್ರೀಸತ್ಯಧ್ಯಾನ ತೀರ್ಥರಿಗೆ ಬಲಗೈಯಾಗಿದ್ದರು. (ಶ್ರೀಸತ್ಯಧ್ಯಾನತೀರ್ಥರೊಡನೆ ವಾಕ್ಯಾರ್ಥಮಾಡಲು ಬಂದ ಪಂಡಿತರು ಮೊದಲು ಕೃಷ್ಣಾಚಾರ್ಯರೊಡನೆ ವಾಕ್ಯಾರ್ಥ ಮಾಡಬೇಕಾಗುತ್ತಿತ್ತು. ಆ ಪಂಡಿತರಲ್ಲಿ ಯೋಗ್ಯ ಪಾಂಡಿತ್ಯವಿದೆ ಎಂದು ತಿಳಿದಮೇಲೆ ಶ್ರೀಸತ್ಯಧ್ಯಾನರ ಎದುರಿಗೆ ಶಾಸ್ತ್ರಾರ್ಥ ವಿಚಾರಮಾಡಲು ಅವರಿಗೆ ಅವಕಾಶ ಸಿಗುತ್ತಿತ್ತು. ಇದರಂತೆಯೇ ಮಠದಲ್ಲಿಯ ನಿತ್ಯಪಾಠದ ಬಹುಭಾಗವನ್ನು ಕೃಷ್ಣಾಚಾರ್ಯರೇ ನಿರ್ವಹಿಸುತ್ತಿದ್ದರು. ಇವರು ಕ್ರಿ.ಶ. ೧೮೮೬ ರಿಂದ ಕ್ರಿ.ಶ. ೧೯೩೪ ರ ಅವಧಿಯಲ್ಲಿ ಇದ್ದರು. ಇವರ ಮಕ್ಕಳೇ ಈಗ ಹುಬ್ಬಳ್ಳಿಯಲ್ಲಿ ಶ್ರೀಮನ್ನ್ಯಾಯಸುಧಾಪಾಠ ಮಾಡಿಕೊಂಡಿರುವ ಪಾಂಡುರಂಗಿ ಗುರುರಾಜಾಚಾರ್ಯರು.)

**ತಸ್ಯಾನುಜೋ ಜಯಾರ್ಯೋಽಪಿ ಖ್ಯಾತಿಮಾಪ ಸಭಾಸು ವೈ ।**
**ತರ್ಕೇ ವೇದಾಂತವಿದ್ಯಾಯಾಂ ಮಹತ್ ಪಾಂಡಿತ್ಯಮಾವಹನ್ ॥೩೩॥**

ಕೃಷ್ಣಾಚಾರ್ಯರ ತಮ್ಮಂದಿರಾದ ಜಯಾಚಾರ್ಯರೂ ತರ್ಕ ಮತ್ತು ವೇದಾಂತಶಾಸ್ತ್ರಗಳಲ್ಲಿ ಅಗಾಧ ಪಾಂಡಿತ್ಯವುಳ್ಳವರಾಗಿ ವಾಕ್ಯಾರ್ಥ ಸಭೆಗಳಲ್ಲಿ ಕೀರ್ತಿಯನ್ನು ಸಂಪಾದಿಸಿದರು. (ಇವರು ಶ್ರೀಸತ್ಯಧ್ಯಾನತೀರ್ಥರಲ್ಲಿಯೂ ತಮ್ಮ ಅಣ್ಣಂದಿರಾದ ಕೃಷ್ಣಾಚಾರ್ಯರಲ್ಲಿಯೂ ತರ್ಕ, ವೇದಾಂತಗಳನ್ನು ಓದಿದರು. ಇವರು ಕೃಷ್ಣಾಚಾರ್ಯರಿಗಿಂತ ಹತ್ತು ವರ್ಷ ಚಿಕ್ಕವರು.)

**ಮಠಸ್ಯ ಕಾರ್ಯನಿರ್ವಾಹಸಚಿವೋ ಮುಖ್ಯ ಏಷ ವೈ ।**
**ಅನ್ನದಾನೇ ಸ್ವರ್ಣದಾನೇ ಪ್ರಧಾನಾಂಗಂ ಯತೇರಭೂತ್ ॥ ೩೪ ॥**

ಜಯಾಚಾರ್ಯರು ಮಠದ ದಿವಾನರಾಗಿ ಮಠದ ಆಡಳಿತವನ್ನು ನಿರ್ವಹಿಸುವದರಲ್ಲಿ ಮುಖ್ಯರಾಗಿದ್ದರು. ಶ್ರೀಸತ್ಯಧ್ಯಾನರು ಕೈಕೊಂಡ

ಅನ್ನದಾನ, ಸಭೆ-ಸಮಾರಾಧನೆಗಳಲ್ಲಿ ಕೊಡುವ ಸಂಭಾವನೆ ಬೆಳ್ಳಿಯ ಪಾತ್ರೆಗಳ ದಾನ ಇವುಗಳ ಏರ್ಪಾಡು ಮಾಡುವದರಲ್ಲಿ ಇವರು ಮುಖ್ಯ ಸಹಾಯಕರಾಗಿದ್ದರು.

**ಕೃಷ್ಣಾಚಾರ್ಯಃ ಸಭಾಮಧ್ಯೇ ಜಯಾರ್ಯೋ ಮಠಕರ್ಮಣಿ ।**
**ಸತ್ಯಧ್ಯಾನಯತೀಶಸ್ಯ ದ್ವಾವೇತೌ ಭುಜಸನ್ನಿಭೌ ॥ ೩೫ ॥**

ಕೃಷ್ಣಾಚಾರ್ಯರು ವಾಕ್ಯಾರ್ಥಸಭೆಗಳಲ್ಲಿಯೂ ಜಯಾಚಾರ್ಯರು ಮಠದ ಆಡಳಿತದಲ್ಲಿಯೂ ಹೀಗೆ ಇವರಿಬ್ಬರೂ ಶ್ರೀಸತ್ಯಧ್ಯಾನತೀರ್ಥರಿಗೆ ಎರಡು ಭುಜಗಳಂತೆ ಇದ್ದರು.

ಶ್ರೀಸತ್ಯಪ್ರಜ್ಞತೀರ್ಥರು

**ಜಯಾರ್ಯೋಽಯಂ ಭಾಗ್ಯವಶಾತ್ ಯತಿಪೀಠಮವಾಪ್ತವಾನ್ ।**
**ಸತ್ಯಪ್ರಜ್ಞ ಇತಿ ಖ್ಯಾತಃ ಪಾಂಡುರಂಗಪುರೇಽವಸತ್ ॥ ೩೬ ॥**

ಜಯಾಚಾರ್ಯರು ಭಗವಂತನ ಅನುಗ್ರಹದಿಂದ ಶ್ರೀಸತ್ಯಧ್ಯಾನರಿಂದ ಯತ್ಯಾಶ್ರಮವನ್ನು ಪಡೆದು ಶ್ರೀಮದುತ್ತರಾದಿಮಠದ ಪೀಠಾಧಿಪತ್ಯವನ್ನು ಪಡೆದರು. ಪಂಢರಪುರ ಕ್ಷೇತ್ರದಲ್ಲಿ ಆಶ್ರಮವನ್ನು ಪಡೆದು ಅಲ್ಲಿಯೇ ವಾಸವಾಗಿದ್ದರು. ಶ್ರೀಸತ್ಯಪ್ರಜ್ಞರೆಂಬ ಆಶ್ರಮನಾಮವನ್ನು ಪಡೆದು ಖ್ಯಾತರಾದರು) (ಇವರು ವೃಷನಾಮ ಸಂವತ್ಸರ ಪುಷ್ಯ ಶುಕ್ಲಪಕ್ಷ ಚತುರ್ದಶೀ ೧-೧-೧೯೪೨ ರಂದು ಆಶ್ರಮವನ್ನು ಪಡೆದರು.)

**ಚೈತ್ರಶುಕ್ಲಾಷ್ಟಮೀವಾರೇ ಚಿತ್ರಭಾನೌ ಹಿ ವತ್ಸರೇ ।**
**ಸತ್ಯಧ್ಯಾನೋ ಯತಿಶ್ರೇಷ್ಠಃ ಜಗಾಮ ಹರಿಮಂದಿರಮ್ ॥ ೩೭ ॥**

(ಜಯಾಚಾರ್ಯರಿಗೆ ಆಶ್ರಮಕೊಟ್ಟು ಶ್ರೀಸತ್ಯಪ್ರಜ್ಞರೆಂದು ನಾಮಕರಣ ಮಾಡಿ ಅವರಿಂದ ಶ್ರೀಮೂಲರಾಮದೇವರ ಪೂಜೆಯನ್ನು ಮಾಡಿಸಿ ಸಂಪ್ರದಾಯ ರಹಸ್ಯಗಳನ್ನೆಲ್ಲ ತಿಳಿಸಿಕೊಟ್ಟು) ಯತಿಶ್ರೇಷ್ಠರಾದ ಶ್ರೀಸತ್ಯಧ್ಯಾನರು ಚಿತ್ರಭಾನುಸಂವತ್ಸರದ ಚೈತ್ರಶುದ್ಧ ಅಷ್ಟಮೀದಿನ ಇಹಯಾತ್ರೆಯನ್ನು ಮುಗಿಸಿ ಯೋಗನಿರತರಾಗಿ ವೃಂದಾವನಸ್ಥರಾಗಿ ಪರಮಾತ್ಮನ ಪಾದಾರವಿಂದಗಳನ್ನು ಸೇರಿದರು.

**ಗುರೋಃ ವೃಂದಾವನಂ ಕೃತ್ವಾ ವೇದನಿಧ್ಯಾರ್ಯಸನ್ನಿಧೌ ।**
**ಭೀಮರಥ್ಯಾಃ ತಟೇ ರಮ್ಯೇ ಸಮಾರಾಧನಮಾಚರತ್ ॥ ೩೮ ॥**

ಶ್ರೀಸತ್ಯಪ್ರಜ್ಞರು ತಮ್ಮ ಗುರುಗಳಾದ ಶ್ರೀಸತ್ಯಧ್ಯಾನರ ವೃಂದಾವನವನ್ನು ಪಂಢರಪುರದಲ್ಲಿ ಭೀಮಾನದಿಯ ದಂಡೆಯ ಮೇಲಿರುವ ಮಠದಲ್ಲಿ ಶ್ರೀವೇದನಿಧಿತೀರ್ಥರ ವೃಂದಾವನದ ಸಮೀಪದಲ್ಲಿ ನಿರ್ಮಿಸಿದರು. ಬಹಳ ವಿಜೃಂಭಣೆಯಿಂದ ಗುರುಗಳ ಮಹಾಸಮಾರಾಧನೆಯನ್ನು ಮಾಡಿದರು. (ಪಂಢರಪುರದಲ್ಲಿಯ ಮಠವು ಬಹಳ ಪ್ರಾಚೀನವಾದ ಮಠವು. ವಿದ್ಯಾಧೀಶ ವಿಜಯದಲ್ಲಿ ಇದು ಶ್ರೀಮಧ್ವಾಚಾರ್ಯರ ಪಾದಧೂಳಿಯಿಂದ ಪವಿತ್ರವಾದ ಮಠ ಎಂದು ವರ್ಣಿಸಲಾಗಿದೆ. ಆದ್ದರಿಂದ ಇದನ್ನು ಶ್ರೀಪದ್ಮನಾಭತೀರ್ಥರೇ ಕಟ್ಟಿಸಿರಬೇಕು. ಶ್ರೀವಿದ್ಯಾಧೀಶರು ತಮ್ಮ ಪೂರ್ವಾಶ್ರಮದಲ್ಲಿಯೇ ಈ ಮಠದ ಜೀರ್ಣೋದ್ಧಾರ ಮಾಡಿದ ಉಲ್ಲೇಖವೂ ವಿದ್ಯಾಧೀಶವಿಜಯದಲ್ಲಿದೆ. ಶ್ರೀವೇದನಿಧಿತೀರ್ಥರು ಶ್ರೀವಿದ್ಯಾಧೀಶರ ಅನಂತರದವರು. ಅವರ ಮೂಲ ವೃಂದಾವನ ಇಲ್ಲಿದೆ. ಅದರ ಸಮೀಪದಲ್ಲಿಯೇ ಶ್ರೀಸತ್ಯಧ್ಯಾನರ ಮೂಲ ವೃಂದಾವನವನ್ನು ನಿರ್ಮಿಸಲಾಗಿದೆ.)

**ಲಕ್ಷಾಧಿಕೇಭ್ಯೋ ವಿಪ್ರೇಭ್ಯೋ ಮೃಷ್ಟಾನ್ನಂ ಪ್ರದದೌ ಯತಿಃ ।**
**ಸತ್ಯಧ್ಯಾನಸ್ಯ ಶಿಷ್ಯತ್ವಂ ಖ್ಯಾಪಯಾಮಾಸ ಕಾರ್ಯತಃ ॥ ೩೯ ॥**

ಶ್ರೀಸತ್ಯಪ್ರಜ್ಞರು ತಮ್ಮ ಗುರುಗಳ ಮಹಾಸಮಾರಾಧನೆಯ ಕಾಲದಲ್ಲಿ ಲಕ್ಷಕ್ಕಿಂತಲೂ ಹೆಚ್ಚು ಜನರಿಗೆ ಮೃಷ್ಟಾನ್ನಭೋಜನ ಮಾಡಿಸಿದರು. ತಮ್ಮ ಈ ಅನ್ನದಾನದಿಂದ ತಾವು ಅನ್ನದಾನದಲ್ಲಿ ಅತಿಪ್ರಸಿದ್ಧರಾದ ಶ್ರೀಸತ್ಯಧ್ಯಾನರ ಶಿಷ್ಯರು ಎಂಬುದನ್ನು ಕಾರ್ಯತಃ ತೋರಿಸಿಕೊಟ್ಟರು.

**ಸುಧಾಪ್ರವಚನೇ ಸಕ್ತಃ ನಿತ್ಯಂ ರಾಮಾರ್ಚನೇ ರತಃ ।**
**ಉವಾಸ ವತ್ಸರಂ ತತ್ರ ಪಾಂಡುರಂಗಸ್ಯ ಸನ್ನಿಧೌ ॥ ೪೦ ॥**

ಶ್ರೀಸತ್ಯಪ್ರಜ್ಞರು ನಿತ್ಯವೂ ಸುಧಾಪಾಠಪ್ರವಚನದಲ್ಲಿ ನಿರತರಾಗಿ ಶ್ರೀ ಮೂಲರಾಮದೇವರನ್ನು ಪೂಜಿಸುತ್ತ ಒಂದು ವರ್ಷ ಕಾಲ ಪಂಢರಪುರದಲ್ಲಿಯೇ ಇದ್ದರು. (ಸುಧಾಪಾಠಹೇಳುವಾಗ ವಾಕ್ಯಾರ್ಥಚಂದ್ರಿಕಾದಲ್ಲಿಯ

ವಿಶೇಷಾಂಶಗಳನ್ನೆಲ್ಲ ಎತ್ತಿ ಹೇಳುವದು ಶ್ರೀಸತ್ಯಪ್ರಜ್ಞರ ಪಾಠದ ವೈಶಿಷ್ಟ್ಯವಾಗಿದ್ದಿತೆಂದು ಅವರಲ್ಲಿ ಓದಿದವರಿಂದ ತಿಳಿದುಬರುತ್ತದೆ.)

**ದಶಲಕ್ಷಮಿತಂ ತಾವತ್ ಋಣಂ ಪ್ರತ್ಯರ್ಪ್ಯ ವತ್ಸರೇ ।**
**ನಿಷ್ಕಿಂಚನತ್ವಂ ಯತಿನೋಽಸಾಧಯತ್ ಋಣಮೋಚನಾತ್ ॥೪೧॥**

ತಾವು ಆಶ್ರಮತೆಗೆದುಕೊಂಡ ಒಂದು ವರ್ಷದಲ್ಲಿಯೇ ಶ್ರೀಸತ್ಯಪ್ರಜ್ಞರು ಮಠಕ್ಕೆ ಇದ್ದ ಹತ್ತುಲಕ್ಷ ರೂಪಾಯಿಗಳ ಸಾಲವನ್ನು ತೀರಿಸಿಬಿಟ್ಟರು. ಯತಿಗಳು ನಿಷ್ಕಿಂಚನರಾಗಿರಬೇಕು ಎಂಬ ಕೀರ್ತಿಯನ್ನು ಸಾಲವನ್ನು ತೀರಿಸಿ ಏನೂ ಸಾಲವಿಲ್ಲದವರು ಎಂಬ ಅರ್ಥದಲ್ಲಿ ಪಡೆದರು.

**ರಾಯ್‌ಚೂರುನಗರೇ ರಮ್ಯೇ ಸಮಾರಾಧನಮಾಚರತ್ ।**
**ದ್ವಿತೀಯಮದ್ವಿತೀಯಂ ತತ್ ಜನೈರದ್ಯಾಪಿ ಸ್ಮರ್ಯತೇ ॥ ೪೨ ॥**

ಶ್ರೀಸತ್ಯಪ್ರಜ್ಞರು ತಮ್ಮ ಗುರುಗಳ ಎರಡನೆಯ ಮಹಾಸಮಾರಾಧನೆಯನ್ನು ರಾಯಚೂರು ನಗರದಲ್ಲಿ ಬಹಳ ವಿಜೃಂಭಣೆಯಿಂದ ನೆರವೇರಿಸಿದರು. ಈ ದ್ವಿತೀಯ ಮಹಾಸಮಾರಾಧನೆಯು ಅದ್ವಿತೀಯವಾಗಿತ್ತೆಂದು ಅದನ್ನು ಕಂಡ ಶಿಷ್ಯವರ್ಗದವರು ಇಂದಿಗೂ ಹೇಳುವರು.

**ಆತಗೂರುನಗರಂ ರಮ್ಯಂ ಕೃಷ್ಣಾತೀರೇ ವಿರಾಜಿತಮ್ ।**
**ಗಚ್ಛನ್ನುವಾಸ ತತ್ರೈವ ಮಾಸಾನ್ ಕತಿಪಯಾನ್ ಯತಿಃ ॥ ೪೩ ॥**

ರಾಯಚೂರು ಮಹಾಸಮಾರಾಧನೆಯು ಮುಗಿದಮೇಲೆ ಶ್ರೀಸತ್ಯಪ್ರಜ್ಞರು ಕೃಷ್ಣಾತೀರದಲ್ಲಿರುವ ಆತಗೂರು ಎಂಬ ಗ್ರಾಮಕ್ಕೆ ತೆರಳಿ ಅಲ್ಲಿಯೇ ಕೆಲವು ತಿಂಗಳಕಾಲ ಇದ್ದರು.

**ಸತ್ಯಕಾಮಂ ಸತ್ಯಧೀರಂ ಪ್ರೀಣಯನ್ ಪ್ರವಚನೇನ ಹಿ ।**
**ಯತಿಧರ್ಮಾನನ್ವತಿಷ್ಠತ್ ತಪೋವೈರಾಗ್ಯಸಿದ್ಧಿಮಾನ್ ॥ ೪೪ ॥**

ಆತಕೂರು ಗ್ರಾಮದಲ್ಲಿ ಮೂಲವೃಂದಾವನದ ರೂಪದಲ್ಲಿದ್ದ ಶ್ರೀಸತ್ಯಕಾಮರು ಮತ್ತು ಶ್ರೀಸತ್ಯಧೀರರನ್ನು ತಮ್ಮ ಪಾಠಪ್ರವಚನಗಳಿಂದ ಸಂತೋಷಪಡಿಸುತ್ತ ತಪಸ್ಸು ಮತ್ತು ವೈರಾಗ್ಯಗಳಿಂದ ಯುಕ್ತರಾಗಿ ಯತ್ಯಾಶ್ರಮಧರ್ಮಗಳ ಅನುಷ್ಠಾನವನ್ನು ಮಾಡಿದರು.

ಶ್ರೀಸತ್ಯಾಭಿಜ್ಞತೀರ್ಥರು

**ಮಠಸ್ಯ ಭಾರಮಾರೋಢುಮವೃಣೋತ್ ಶಿಷ್ಯಮುತ್ತಮಮ್ ।**
**ಸತ್ಯಾಭಿಜ್ಞೇತಿ ನಾಮ್ನಾ ತಂ ಖ್ಯಾಪಯಾಮಾಸ ಸಂಸದಿ ॥ ೪೫ ॥**

ಶ್ರೀಸತ್ಯಪ್ರಜ್ಞರು (ಅನಾರೋಗ್ಯದಿಂದ ತಾವು ಮಠದ ಆಡಳಿತವನ್ನು ನಡಿಸಿಕೊಂಡುಹೋಗುವದು ಶ್ರಮವೆಂದು ತಿಳಿದುಬಂದಾಗ) ಮಠದ ಭಾರ ವನ್ನು ವಹಿಸಲು ಯೋಗ್ಯರಾದ ಓರ್ವ ಶಿಷ್ಯರನ್ನು ಆಯ್ದುಕೊಂಡರು. ಅವರಿಗೆ ಆಶ್ರಮಕೊಟ್ಟು ಶ್ರೀಸತ್ಯಾಭಿಜ್ಞರೆಂಬ ಹೆಸರಿನಿಂದ ಪ್ರಸಿದ್ಧಿಗೆ ತಂದರು.

**ಚೈತ್ರಶುಕ್ಲದ್ವಿತೀಯಾಯಾಂ ಪಾರ್ಥಿವೇ ವತ್ಸರೇ ಗುರುಃ ।**
**ಯೋಗೇನಾಕ್ರಾಂತಚಿತ್ತಃಸನ್ ಜಗಾಮ ಹರಿಮಂದಿರಮ್ ॥ ೪೬ ॥**

ಶ್ರೀಸತ್ಯಪ್ರಜ್ಞರು ಪಾರ್ಥಿವಸಂವತ್ಸರ ಚೈತ್ರಶುದ್ಧ ದ್ವಿತೀಯಾದ ದಿವಸ ಯೋಗನಿರತರಾಗಿ ಇಹಯಾತ್ರೆಯನ್ನು ಮುಗಿಸಿ ಪರಮಾತ್ಮನ ಪಾದಾರವಿಂದ ಗಳನ್ನು ಸೇರಿದರು.

**ಕೃಷ್ಣವೇಣ್ಯಾಃ ತಟಾಕೇऽತ್ರ ವೃಂದಾವನಮಕಾರಯತ್ ।**
**ಸತ್ಯಾಭಿಜ್ಞಃ ಪುಣ್ಯಕರ್ಮಾ ಗುರುಚಿತ್ತಮನುಸ್ಮರನ್ ॥ ೪೭ ॥**

ಶ್ರೀಸತ್ಯಪ್ರಜ್ಞರ ಶಿಷ್ಯರಾದ ಶ್ರೀಸತ್ಯಾಭಿಜ್ಞರು ಆತಕೂರು ಗ್ರಾಮದಲ್ಲಿ ಕೃಷ್ಣಾನದೀತೀರದಲ್ಲಿ ಶ್ರೀಸತ್ಯಕಾಮ ಮತ್ತು ಶ್ರೀಸತ್ಯಧೀರರ ವೃಂದಾವನಗಳ ಸಮೀಪದಲ್ಲಿ ತಮ್ಮ ಗುರುಗಳ ಇಚ್ಛೆಯಂತೆ ಅವರ ವೃಂದಾವನವನ್ನು ಏರ್ಪಡಿಸಿದರು.

ಶ್ರೀಸತ್ಯಪ್ರಮೋದತೀರ್ಥರು

**ವತ್ಸರತ್ರಯಮಾಸೇವನ್ ಮೂಲರಾಮಂ ಯತೀಶ್ವರಃ ।**
**ಸತ್ಯಪ್ರಮೋದಮಕರೋತ್ ಉತ್ತರಾದಿಮಠೇಶ್ವರಮ್ ॥ ೪೮ ॥**

ಶ್ರೀಸತ್ಯಾಭಿಜ್ಞರು ಮೂರುವರ್ಷಗಳ ಕಾಲ ಶ್ರೀ ಮೂಲರಾಮದೇವರ ಪೂಜೆಯನ್ನು ಮಾಡಿ ಶ್ರೀಸತ್ಯಪ್ರಮೋದತೀರ್ಥರನ್ನು ತಮ್ಮ ಉತ್ತರಾಧಿಕಾರಿ ಗಳನ್ನಾಗಿ ಮಾಡಿ ಶ್ರೀಮದುತ್ತರಾದಿಮಠದ ಪೀಠಾಧಿಪತಿಗಳನ್ನಾಗಿ ಮಾಡಿ ದರು.

**ಷಟ್‌ತ್ರಿಂಶದ್ವರ್ಷತಃ ಪೀಠಮಲಂಕುರ್ವನ್ ಮಹೋಜ್ವಲಃ ।**
**ಸತ್ಯಪ್ರಮೋದತೀರ್ಥೋಽಯಂ ರಾಜತೇ ಹಂಸರಾಡಿವ ॥ ೪೯ ॥**

ಶ್ರೀಸತ್ಯಪ್ರಮೋದತೀರ್ಥರು ಈಗ ಮೂವತ್ತಾರು ವರ್ಷಗಳ ಕಾಲದಿಂದ ಪೀಠವನ್ನು ಅಲಂಕರಿಸಿ ಉಜ್ವಲವಾದ ಕೀರ್ತಿಯಿಂದ ವಿರಾಜಿಸುತ್ತ ಹಂಸಪಕ್ಷಿಯಂತೆ ಶೋಭಿಸುತ್ತಿರುವರು.

**ಸುಧಾಮಂಗಲವಾಂಗಲ್ಯದೀಪೇನಾರ್ಚನ್ ರಘೂತ್ತಮಮ್ ।**
**ವಸುಧಾಮಂಡನಂ ಕುರ್ವನ್ ಸುಧಾಮಂಡನಮಂಡಿತಃ ॥ ೫೦ ॥**

ಅನೇಕಸಲ ಶಿಷ್ಯರಿಗೆ ಶ್ರೀಮನ್ನ್ಯಾಯಸುಧಾಮಂಗಲವನ್ನು ಮಾಡಿಸಿ ಈ ಮಂಗಲಗಳೆಂಬ ಮಂಗಲದೀಪಗಳಿಂದ ಶ್ರೀ ಮೂಲರಾಮದೇವರನ್ನು ಪೂಜಿಸುತ್ತ ಸುಧಾಮಂಡನ ಎಂಬ ತಮ್ಮ ಗ್ರಂಥದಿಂದ ಭೂಷಿತರಾಗಿ ಭೂಮಂಡಲವನ್ನೆಲ್ಲ ಅಲಂಕರಿಸುತ್ತಿರುವರು.

ಉಪಸಂಹಾರ ಶ್ಲೋಕಗಳು

**ಪೂರ್ಣಪ್ರಜ್ಞಾತ್ ಪ್ರಮೋದಾಂತಂ ಯೇ ತಾವತ್‌ಗುರುಶೇಖರಾಃ ।**
**ಪ್ರಣಮಾಮಿ ಹಿ ತಾನ್ ಸರ್ವಾನ್ ಜ್ಞಾನವೈರಾಗ್ಯಸಿದ್ಧಯೇ ॥ ೫೧ ॥**

ಶ್ರೀಪೂರ್ಣಪ್ರಜ್ಞರಿಂದ ಆರಂಭಿಸಿ ಶ್ರೀಸತ್ಯಪ್ರಮೋದತೀರ್ಥರ ವರೆಗಿನ ಎಲ್ಲ ಗುರುಗಳನ್ನೂ ಜ್ಞಾನವೈರಾಗ್ಯಗಳನ್ನು ಪಡೆಯುವದಕ್ಕಾಗಿ ನಮಸ್ಕರಿಸುವೆನು.

**ತಮಣಾಚಾರ್ಯಪುತ್ರೇಣ ಕೃಷ್ಣಾಚಾರ್ಯೇಣ ಧೀಮತಾ ।**
**ಸತ್ಯಪ್ರಜ್ಞಸ್ಯ ಚರಿತಂ ಕೀರ್ತಿತಂ ಸ್ವಾತ್ಮತುಷ್ಟಯೇ ॥ ೫೨ ॥**

ತುಮ್ಮಿನಕಟ್ಟೆ ಪಾಂಡುರಂಗಿ ಹುಚ್ಚಾಚಾರ್ಯರ ಮೊಮ್ಮಗನೂ ತಮಣಾಚಾರ್ಯರ ಮಗನೂ ಆದ ಕೃಷ್ಣಾಚಾರ್ಯನೆಂಬವನು (ಲೌಕಿಕ ಜೀವನದಲ್ಲಿ ಕೆ. ಟಿ. ಪಾಂಡುರಂಗಿ ಎಂದು ಪ್ರಸಿದ್ಧನಾದವನು) ತನ್ನ ಮನಸ್ಸಂತೋಷಕ್ಕಾಗಿ ಶ್ರೀಸತ್ಯಪ್ರಜ್ಞರ ಈ ಚರಿತ್ರೆಯನ್ನು ವರ್ಣಿಸಿರುವನು. (ಈ ಹುಚ್ಚಾಚಾರ್ಯರು ರಾಣೇಬೆನ್ನೂರಿನಲ್ಲಿ ಶ್ರೀವಿದ್ಯಾಧೀಶರ ಪ್ರತಿಮೆ ಇರುವ ಮಠವನ್ನು ಸ್ಥಾಪಿಸಿರುವರು.)

**ಯ ಇದಂ ಪಠತೇ ಭಕ್ತ್ಯಾ ಶೃಣೋತಿ ಪರಮಾದರಾತ್ ।**
**ಗುರ್ವನುಗ್ರಹಪಾತ್ರಃ ಸ್ಯಾತ್ ಗುರುಭಕ್ತಿಂ ಲಭೇತ ಚ ॥ ೫೩ ॥**

ಶ್ರೀಸತ್ಯಪ್ರಜ್ಞರ ಈ ಚರಿತ್ರೆಯನ್ನು ಯಾರು ಭಕ್ತಿಯಿಂದ ಪಠಿಸುವರೋ ಅಥವಾ ಆದರದಿಂದ ಕೇಳುವರೋ ಅವರು ಗುರುಗಳ ಅನುಗ್ರಹಕ್ಕೆ ಪಾತ್ರರಾಗಿ ಅವರಲ್ಲಿ ಭಕ್ತಿಯನ್ನು ಪಡೆಯುವರು.

ಇತಿ ಶ್ರೀ ಪಾಂಡುರಂಗಿ ತಮ್ಮಣಾಚಾರ್ಯರ ಪುತ್ರನಾದ ಕೃಷ್ಣಾಚಾರ್ಯನು
ವಿರಚಿಸಿದ ಶ್ರೀಸತ್ಯಪ್ರಜ್ಞ ಚರಿತೆಯು ಮುಗಿಯಿತು.

# ಆನಂದಭಟ್ಟಾರಕ ವೃತ್ತಾಂತ

**ಅದ್ವೈತಪಂಡಿತಃ ಕಶ್ಚಿತ್ ವಾದಾರ್ಥಂ ಪತ್ರಮಾಲಿಖತ್ ॥ ೫-೧೯ ॥**

**ಏತದ್ದಿನೇ ಸ್ಥಲೇ ತತ್ರ ವಾದೋ ನಿಶ್ಚಯತೋ ಭವೇತ್ ।**
**ಇತಿ ಪತ್ರಾರ್ಥಮಾಲೋಕ್ಯ ವಾದಿರಾಟ್ ತತ್ಸಲಂಗತಃ ॥ ೨೦ ॥**

ಓರ್ವ ಅದ್ವೈತಪಂಡಿತರು ಶ್ರೀವಾದಿರಾಜತೀರ್ಥರಿಗೆ ವಾದಮಾಡಲು ಬರುವದಾಗಿ ಪತ್ರವನ್ನು ಬರೆದರು. ಇಂಥ ದಿವಸ ಇಂಥ ಸ್ಥಳದಲ್ಲಿ ವಾದವನ್ನು ಖಂಡಿತವಾಗಿ ಮಾಡುವೆನು ಎಂದು ಬರೆದರು. ಈ ಪತ್ರದ ಅಭಿಪ್ರಾಯವನ್ನು ತಿಳಿದು ಶ್ರೀವಾದಿರಾಜರು ಆ ಸ್ಥಲಕ್ಕೆ ಹೋದರು. (ಈ ಸ್ಥಲವು ಪೈಠಣ ನಗರವಿರಬೇಕೆಂದೂ ಈ ಪಂಡಿತರು ರಂಗೋಜೀಭಟ್ಟರಿರಬೇಕೆಂದೂ ಅಂದಾಜು ಮಾಡಲಾಗಿದೆ. ಈ ರಂಗೋಜಿಭಟ್ಟರು ಮುಂದೆ ಶ್ರೀವಿದ್ಯಾಧೀಶರೊಡನೆಯೂ ವಾದ ಮಾಡುವರು.)

**ನಿಶ್ಚಿತೇ ವಾಸರೇ ನಾಹಮಾಗಂತುಂ ಪ್ರಭವಾಮ್ಯತಃ ।**
**ಇತಃ ತೃತೀಯೇ ದಿವಸೇ ಸಮಾಗಂತೇತಿ ಸೂಚಿತಃ ॥ ೨೧ ॥**

ಬಳಿಕ ಆ ಅದ್ವೈತವಾದಿಯು ತಾನು ನಿಶ್ಚಯಿಸಿದ ದಿನ ತನಗೆ ಬರುವದಾಗುವದಿಲ್ಲ. ಇನ್ನು ಮೂರುದಿನ ಬಿಟ್ಟು ಬರುವೆನು ಎಂದು ಹೇಳಿ ಕಳಿಸಿದನು.

**ಪ್ರತೀಕ್ಷಮಾಣೋ ನಾಪಶ್ಯತ್ ವಾದಿನಂ ವಾದಿರಾಟ್ ಮುನಿಃ ।**
**ಸಾಮೀಪ್ಯಾತ್ ಕೃಷ್ಣಪರ್ಯಾಯಪೂಜಾಯಾಃ ಗಮನೋದ್ಯತಃ ॥**

**ಪಾಂಡುರಂಗ್ಯನ್ವಯೋದ್ಭೂತಮಾನಂದಾಖ್ಯಂ ಬುಧೋತ್ತಮವ್ ।**
**ನ್ಯಯಾಯುಜತ್ ತಜ್ಜಯಾಯ ದದೌ ಮಂತ್ರಾಕ್ಷತಾನ್ ಗುರುಃ ॥**

ಶ್ರೀವಾದಿರಾಜರು ಮತ್ತೆ ಮೂರುದಿನ ಆ ವಾದಿಯ ಮಾರ್ಗ ನಿರೀಕ್ಷಣೆ ಮಾಡಿದರೂ ಅವನು ಬರಲಿಲ್ಲ. ಶ್ರೀಕೃಷ್ಣನ ಪೂಜೆಯ ತಮ್ಮ ಪರ್ಯಾಯವು

ಬಹಳ ಸಮೀಪಕ್ಕೆ ಬಂದಿದ್ದು ತಾವು ಉಡುಪಿಗೆ ಹೊರಡಬೇಕಾದ್ದರಿಂದ ಪಾಂಡುರಂಗೀವಂಶದ ಆನಂದಭಟ್ಟಾರಕರೆಂಬ ಪಂಡಿತಶ್ರೇಷ್ಠರನ್ನು ಆ ವಾದಿಯನ್ನು ಜಯಿಸುವ ಕಾರ್ಯದಲ್ಲಿ ನಿಯಮಿಸಿ ಅವರಿಗೆ ಮಂತ್ರಾಕ್ಷತೆಗಳನ್ನು ಕೊಟ್ಟು ಅನುಗ್ರಹಿಸಿದರು.

**ತವಾಗಮನಪರ್ಯಂತಮತ್ರ ಸ್ಥಿತ್ವಾ ವಿಜಿತ್ಯ ತವ್ |**
**ರೂಪ್ಯಪೀಠಂ ಸಮಾಗಚ್ಛ ಕಾಮಿತಂ ಸೇತ್ಸ್ಯತೀತಿ ತವ್ || ೨೪ ||**

ಆ ಪಂಡಿತನು ಬರುವವರೆಗೆ ಇಲ್ಲಿಯೇ ಇದ್ದು ಅವನನ್ನು ವಾದದಲ್ಲಿ ಸೋಲಿಸಿ ಉಡುಪಿಗೆ ಬರಬೇಕು. ಈ ಕಾರ್ಯವನ್ನು ನಿರ್ವಹಿಸಿದರೆ ನಿಮ್ಮ ಅಭೀಷ್ಟಸಿದ್ಧಿಯಾಗುವದು ಎಂದು ಶ್ರೀವಾದಿರಾಜರು ಆನಂದಭಟ್ಟರಿಗೆ ಹೇಳಿದರು.

**ಆನಂದಭಟ್ಟಃ ಪಶ್ಚಾತ್ ತವಾಗತಂ ವಾದಿನಂ ಜಯನ್ |**
**ತಸ್ಮಾದ್ ವಾದಪರಾಭೂತಿಪತ್ರಂ ಪ್ರಾಪ್ಯ ಸಮಾಗತಃ || ೨೫ ||**

ಶ್ರೀವಾದಿರಾಜರ ಅಜ್ಞೆಯಂತೆ ಆನಂದಭಟ್ಟರು ಆ ವಾದಿಯು ಬರುವವರೆಗೆ ಅಲ್ಲಿದ್ದು ಬಂದಮೇಲೆ ಅವನನ್ನು ಜಯಿಸಿ ಅವನಿಂದ ಜಯಪತ್ರವನ್ನು ತೆಗೆದುಕೊಂಡು ಉಡುಪಿಗೆ ಬಂದರು.

**ಕೃಷ್ಣಪರ್ಯಾಯಸಕ್ತಶ್ರೀವಾದಿರಾಜಾಯ ಪತ್ರಕವ್ |**
**ಅರ್ಪಯಾಮಾಸ ಭವತಾಂ ದಯಯಾ ವಿಜಿತೋ ಬಲೀ || ೨೬ ||**

ಶ್ರೀಕೃಷ್ಣಪೂಜೆಯ ಪರ್ಯಾಯದಲ್ಲಿ ನಿರತರಾದ ಶ್ರೀವಾದಿರಾಜರಿಗೆ ಆನಂದಭಟ್ಟರು ತಾವು ತಂದ ಜಯಪತ್ರವನ್ನು ಒಪ್ಪಿಸಿ ತಮ್ಮ ಅನುಗ್ರಹದಿಂದ ಈ ಬಲಿಷ್ಠ ವಾದಿಯನ್ನು ಜಯಿಸಿದೆನು ಎಂದು ಹೇಳಿದರು. (ಈ ಘಟನೆಯು ಶ್ರೀವಾದಿರಾಜರ ಮೂರನೆಯ ಪರ್ಯಾಯದ ಕಾಲದಲ್ಲಿ ನಡೆಯಿತು ಎಂದು ತಿಳಿದುಬರುತ್ತದೆ.)

**ಇತ್ಯಾವೇದಯದಾನಂದಭಟ್ಟಃ ಸಂತಾನಕಾಂಕ್ಷಯಾ |**
**ವಾದಿರಾಜಂ ಪ್ರಾರ್ಥಯನ್ ಸಃ ಪುತ್ರಾವಾಪ್ತಿಃ ಭವೇದಿತಿ || ೨೭ ||**

ಹೀಗೆಂದು ಹೇಳಿ ಆನಂದಭಟ್ಟರು ಉತ್ತಮ ಪುತ್ರನನ್ನು ಪಡೆಯ ಬೇಕೆಂಬ ಅಪೇಕ್ಷೆಯಿಂದ 'ನನಗೆ ಉತ್ತಮ ಪುತ್ರನಾಗುವಂತೆ ಅನುಗ್ರಹಿಸ ಬೇಕು' ಎಂದು ಶ್ರೀವಾದಿರಾಜರಿಗೆ ಬೇಡಿಕೊಂಡರು

**ಗುರುರಾಜಾದ್ ವರಂ ಪ್ರಾಪ್ಯ ತುಷ್ಟಃ ಸ್ವಗೃಹಮಾಯಯೌ ।**
**ಗುರೂತ್ತಮಾನುಗ್ರಹೇಣ ಪುತ್ರಂ ಪ್ರಾಪ್ಯ ಕೃತೀ ಮುದಾ ॥ ೨೮ ॥**

**ಗುರುರಾಜಾಭಿಧಾನಂ ತಂ ಚಕಾರಾನಂದಭಟ್ಟಕಃ ।**
**ಪಿತ್ರೋರಾನಂದದಾಯೀ ಸ ವವೃಧೇ ಶುಕ್ಲಚಂದ್ರವತ್ ॥ ೨೯ ॥**

'ನಿನಗೆ ಉತ್ತಮಪುತ್ರನಾಗುವನು' ಎಂದು ಶ್ರೀವಾದಿರಾಜಗುರುರಾಜ ರಿಂದ ವರವನ್ನು ಪಡೆದು ಸಂತುಷ್ಟರಾಗಿ ಆನಂದಭಟ್ಟರು ಸ್ವಗೃಹಕ್ಕೆ ತೆರಳಿ ದರು. ಬಳಿಕ ಗುರುಗಳ ಅನುಗ್ರಹದಿಂದ ಅಂಥ ಪುತ್ರನನ್ನು ಪಡೆದು ಆ ಮಗುವಿಗೆ 'ಗುರುರಾಜ' ಎಂದೇ ಹೆಸರಿಟ್ಟರು. ಈ ಮಗುವು ತಂದೆ ತಾಯಿ ಗಳಿಗೆ ಸಂತೋಷವನ್ನು ಕೊಡುತ್ತ ಶುಕ್ಲಪಕ್ಷದ ಚಂದ್ರನಂತೆ ಬೆಳೆಯಿತು. (ಆನಂದಭಟ್ಟರಿಗೆ ಶ್ರೀನಿವಾಸಾಚಾರ್ಯ ಎಂಬ ಜ್ಯೇಷ್ಠಪುತ್ರರು ಇದ್ದರು. ಆದರೆ ಅವರು ಒಬ್ಬನೇ ಮಗನು ಸಾಲದು ದಿಗಂತಕೀರ್ತಿಯನ್ನು ಪಡೆಯಬಲ್ಲ ಇನ್ನೊಬ್ಬ ಮಗನು ಬೇಕು ಎಂದು ಶ್ರೀವಾದಿರಾಜರನ್ನು ಪ್ರಾರ್ಥಿಸಿದರು. ಇದರಂತೆ ಪಡೆದ ಮಗುವೇ ಈ ಗುರುರಾಜರು. ಇವರೇ ಮುಂದೆ ಶ್ರೀವಿದ್ಯಾ ಧೀಶರಾಗುವರು. ಶ್ರೀವಿದ್ಯಾಧೀಶರ ತಮ್ಮ ಕೇಶವಾಚಾರ್ಯರು ಶ್ರೀವಿದ್ಯಾ ಧೀಶರನ್ನು ತಮ್ಮ ಗ್ರಂಥಗಳಲ್ಲಿ ಗುರುರಾಜರೆಂದೇ ಸಂಬೋಧಿಸುವರು. ಶ್ರೀಗುರುರಾಜರ ಅಂದರೆ ಶ್ರೀವಿದ್ಯಾಧೀಶರ ಅನುಗ್ರಹದಿಂದ ಬರೆದ ಟಿಪ್ಪಣಿಗಳು ಎಂಬ ಅರ್ಥದಲ್ಲಿ ಶ್ರೀಕೇಶವಾಚಾರ್ಯರ ಟಿಪ್ಪಣಿಗಳಿಗೆ ಗುರುರಾಜೀಯಾ ಎಂದು ಪ್ರಸಿದ್ಧಿ ಬಂದಿತು. ಇದರಿಂದಾಗಿ ಕೇಶವಾಚಾರ್ಯರಿಗೇ ಮುಂದೆ ಗುರುರಾಜರು ಎಂದು ಪ್ರಸಿದ್ಧಿಯುಂಟಾಯಿತು. ಆದರೆ ಈ ವೃತ್ತಾಂತದಲ್ಲಿ ಉಲ್ಲೇಖಿಸಲ್ಪಟ್ಟ 'ಗುರುರಾಜ' ಎಂಬ ಹೆಸರು ಶ್ರೀವಿದ್ಯಾಧೀಶರನ್ನು ಉಲ್ಲೇಖಿಸುತ್ತದೆ.) (ಈ ಆನಂದಭಟ್ಟಾರಕರೇ ಮಧುಸೂಧನ ಸರಸ್ವತಿಯ ಅದ್ವೈತಸಿದ್ಧಿಯನ್ನು ಖಂಡಿಸಿ 'ನ್ಯಾಯಾಮೃತ ಕಂಟಕೋದ್ಧಾರ' ಎಂಬ

ನ್ಯಾಯಾಮೃತದ ಟಿಪ್ಪಣಿಯನ್ನು ಬರೆದವರು. ಇವರೇ ಪಾಂಡುರಂಗೀ ವಂಶದ ಮೂಲಪುರುಷರೆಂದು ಪರಿಗಣಿಸಲ್ಪಡುವರು.)

ಇತಿ ಶ್ರೀವಾದಿರಾಜ ಪೂಜ್ಯಚರಣಪ್ರಶಿಷ್ಯ ಶ್ರೀವೇದನಿಧಿತೀರ್ಥಾಂತೇವಾಸಿ ರಾಮಚಂದ್ರಾಚಾರ್ಯನು ಬರೆದ ಶ್ರೀವಾದಿರಾಜಗುರುವರ ಚರಿತಾಮೃತದ ಐದನೆಯ ಬಿಂದುವಿನಲ್ಲಿಯ ಪಾಂಡುರಂಗಿ ಆನಂದಭಟ್ಟಾರಕ ವೃತ್ತಾಂತವು. ಪಂಚಮ ಬಿಂದುವಿನ ಶ್ಲೋಕ ೧೯ ರಿಂದ ೨೯ ಪರ್ಯಂತ ಶ್ಲೋಕಗಳು. ಇದಕ್ಕೆ ಮೊದಲು ಕನಕದಾಸರ ವೃತ್ತಾಂತ, ಭೂತರಾಜರ ವೃತ್ತಾಂತಗಳಿರುವವು. ಈ ವಾದಿರಾಜ ಚರಿತಾಮೃತವು ವಾದಿರಾಜ ಗ್ರಂಥಪ್ರಕಾಶನ ಸಮಿತಿಯಿಂದ ಕ್ರಿ.ಶ. ೧೯೫೪ರಲ್ಲಿ ಮುದ್ರಿಸಿ ಪ್ರಕಾಶಿಸಲ್ಪಟ್ಟಿದೆ.

# ಶ್ರೀವಿದ್ಯಾಧೀಶರ ಸ್ತೋತ್ರಗಳು

(ಶ್ರೀವಿದ್ಯಾಧೀಶರ ಶಿಷ್ಯರು ರಚಿಸಿದ ಟಿಪ್ಪಣೀ ಗ್ರಂಥಗಳಿಂದ ಆಯ್ದವು)

**ಯದ್ ವಿದ್ಯಾಧೀಶಗುರೋಃ ಸುಶ್ರೂಷಾ ಅನ್ಯಾ ನ ರೋಚತೇ**
**ತಸ್ಮಾತ್ ।**
**ಅಸ್ತು ಏಷಾ ಭಕ್ತಿಯುಕ್ತಾ ಶ್ರೀವಿದ್ಯಾಧೀಶಪಾದಯೋಃ ಸೇವಾ ॥೧॥**

(ಶ್ರೀ ಕೇಶವಭಟ್ಟಾರಕರ ಎಲ್ಲ ಟಿಪ್ಪಣಿಗಳಲ್ಲಿಯೂ ಈ ಶ್ಲೋಕವಿದೆ.)

ಶ್ರೀವಿದ್ಯಾಧೀಶಗುರುಗಳಿಗೆ ಬೇರೆ ಯಾವ ಸೇವೆಯೂ ರುಚಿಸುವದಿಲ್ಲ. (ಶ್ರೀಮದಾಚಾರ್ಯರ ಗ್ರಂಥಗಳ ಪಾಠಪ್ರವಚನ, ಟಿಪ್ಪಣೀ ರಚನೆ ಇತ್ಯಾದಿ ಜ್ಞಾನಕಾರ್ಯವನ್ನು ಬಿಟ್ಟು ಬೇರೆ ಯಾವ ಸೇವೆಯೂ ಅಷ್ಟೊಂದು ರುಚಿಸುವದಿಲ್ಲ ಎಂದು ಅಭಿಪ್ರಾಯವು.) ಆದ್ದರಿಂದ ಭಕ್ತಿಪೂರ್ವಕವಾದ ಈ ವಾಙ್ಮಯ ಸೇವಾರೂಪವಾದ ಶ್ರೀವಿದ್ಯಾಧೀಶರ ಸೇವೆಯೇ ನಮಗಿರಲಿ.

**ವಿದ್ಯಾಧೀಶಂ ಚಂದ್ರಿಕಾಬ್ಧಿವಿಕ್ರೀಡನವಿಚಕ್ಷಣಮ್ ।**
**ವಿದ್ಯಾಗುರುಂ ಕುಲಗುರುಂ ನೌಮಿ ತಂ ನೋ ಜಗದ್ಗುರುಮ್ ॥ ೨ ॥**

(ಕೇಶವಭಟ್ಟಾರಕರ ತಾತ್ಪರ್ಯಚಂದ್ರಿಕಾ ಟಿಪ್ಪಣೀ ಗುರುರಾಜೀಯದಲ್ಲಿ ಈ ಶ್ಲೋಕ ಬಂದಿದೆ.)

**ವೇದವ್ಯಾಸಮತಾಪಗಾಪತಿವರಂ ಶ್ರೀಮಜ್ಜಯಪ್ರೋಕ್ತಸತ್**
**ಸರ್ಪಾವೇಷ್ಟಿತ ಮಧ್ವಸನ್ಮುನಿವರ ಗ್ರಂಥಾಗವರ್ಯೇಣ ಯಃ ।**
**ಸಂಲೋಡ್ಯಾಖಿಲಸನ್ನ್ಯಯಾಮೃತವರಂ ತತ್ತ್ವಾದಿಸದ್ದೀಪಿಕಾಮ್**
**ಸತ್ತಾತ್ಪರ್ಯಸುಚಂದ್ರಿಕಾಂ ತರುವರಂ ಯಃ ತರ್ಕ-**
**ಸತ್ತಾಂಡವಮ್ ॥ ೩ ॥**

**ನಿಷ್ಕಾಸ್ಯಾದ್ಭುತಖಂಡನತ್ರಯ ಮುಖವ್ಯಾಖ್ಯಾನರತ್ನೋಚ್ಚಯಮ್**
**ದೃಷ್ಟ್ವಾ ಕುತ್ಸಿತಯುಕ್ತ್ಯರಾತಿಪಿಹಿತಾನ್ ಶ್ರೀವ್ಯಾಸತೀರ್ಥೋ**
**ಬುಧಃ ।**

*

**ಸ್ವೋಕ್ತಿಂ ರಕ್ಷಿತುಮತ್ರ ಯಃ ಪ್ರತಿಪದಂ ಸಮ್ಯಗ್ ವಿಶೇಷಾರ್ಥಕಃ**
**ವಿದ್ಯಾಧೀಶಯತೀಂದ್ರ ಸದ್ಗುರುವರಃ ಕಿಂ ನಾವತೀರ್ಣೋ**
**ಭುವಿ ॥ ೪ ॥**

(ತಾತ್ಪರ್ಯಚಂದ್ರಿಕಾ ಗುರುರಾಜೀಯ ಮತ್ತು ಶೇಷವಾಕ್ಯಾರ್ಥ ಚಂದ್ರಿಕಾದಲ್ಲಿ ಈ ಶ್ಲೋಕಗಳು ಬಂದಿದೆ.)

ಶ್ರೀವ್ಯಾಸತೀರ್ಥರು ಶ್ರೀವೇದವ್ಯಾಸರ ಸಿದ್ಧಾಂತಗಳೆಂಬ ಸಮುದ್ರವನ್ನು ಶ್ರೀಮಧ್ವಾಚಾರ್ಯರ ಗ್ರಂಥಗಳೆಂಬ ಮಂದರಪರ್ವತದಿಂದ ಶ್ರೀಜಯತೀರ್ಥರ ಟೀಕಾಗ್ರಂಥಗಳೆಂಬ ಸರ್ಪವನ್ನು ಕಟ್ಟಿ ಆಲೋಡನೆ ಮಾಡಿ ನ್ಯಾಯಾಮೃತ ವೆಂಬ ಅಮೃತವನ್ನೂ, ತಾತ್ಪರ್ಯಚಂದ್ರಿಕಾ ಎಂಬ ಕಲ್ಪವೃಕ್ಷವನ್ನೂ, ತರ್ಕತಾಂಡವವನ್ನೂ, ಖಂಡನತ್ರಯವೇ ಮೊದಲಾದ ರತ್ನಗಳನ್ನೂ ಹೊರಗೆ ತೆಗೆದರು. ಇವುಗಳಿಗೆ ಅದ್ವೈತಿಗಳು (ಅದ್ವೈತಸಿದ್ಧಿಯೇ ಮೊದಲಾದ ತಮ್ಮ ಗ್ರಂಥಗಳಲ್ಲಿ) ಕುತ್ಸಿತವಾದ ಯುಕ್ತಿಗಳಿಂದ ದೂಷಣೆಮಾಡಲು ತೊಡಗಿದ್ದರಿಂದ ತಮ್ಮ ವಾಕ್ಯಗಳ ಸರಿಯಾದ ಅರ್ಥವನ್ನು ಪ್ರತಿಯೊಂದು ಪದಕ್ಕೂ ವ್ಯಕ್ತ ಪಡಿಸಲು ಶ್ರೀವ್ಯಾಸತೀರ್ಥರೇ ಶ್ರೀವಿದ್ಯಾಧೀಶ ಯತಿಗಳ ರೂಪದಲ್ಲಿ ಅವತರಿಸಿರ ಬಹುದಲ್ಲವೇ ?

**ಶ್ರೀಮತ್ ಸುಧಾದ್ಯುತಾಂಬೋಧಿ ವಿಕ್ರೀಡನ ವಿಚಕ್ಷಣಾನ್ ।**
**ಶ್ರೀಮದ್ವಿದ್ಯಾಧೀಶತೀರ್ಥಮುನೀನ್ ವಂದೇ ಗುರೂನ್**
**ಮಮ ॥ ೫ ॥**

(ಶೇಷವಾಕ್ಯಾರ್ಥಚಂದ್ರಿಕಾದಲ್ಲಿ)

ಶ್ರೀಮನ್ನ್ಯಾಯಸುಧಾಗ್ರಂಥ ಎಂಬ ಮಹಾಸಾಗರದಲ್ಲಿ ಕ್ರೀಡಿಸು ವದರಲ್ಲಿ ಚತುರರಾದ ನನ್ನ ಗುರುಗಳಾದ ಶ್ರೀವಿದ್ಯಾಧೀಶತೀರ್ಥರಿಗೆ ವಂದಿಸು ವೆನು.

**ವಿದ್ವನ್ಮತ್ತೇಭಕುಂಭಾದ್ರಿವಿಪಾಟನವಿಚಕ್ಷಣಃ ।**
**ವಿದ್ಯಾಧೀಶನೃಸಿಂಹೋ ಮೇ ಗುರುಃ ನಿತ್ಯಂ ಭವೇನ್ಮುದೇ ॥ ೬ ॥**

(ಶೇ.ವಾ.ಚಂ ಮೊದಲನೆಯ ಅಧ್ಯಾಯದ ಕೊನೆಗೆ)

ಪರಕೀಯ ವಿದ್ವಾಂಸರೆಂಬ ಮತ್ತಗಜಗಳ ಕುಂಭಸ್ಥಳಗಳನ್ನು ಕೆತ್ತುವದರಲ್ಲಿ ಸಿಂಹಸದೃಶರಾದ ಶ್ರೀವಿದ್ಯಾಧೀಶರು ನನಗೆ ಹರ್ಷವನ್ನುಂಟು ಮಾಡಲಿ.

**ಶ್ರೀಮದ್ವಿದ್ಯಾಧೀಶತೀರ್ಥಂ ಸರ್ವವಿದ್ಯಾಸ್ವಧೀಶ್ವರಮ್ ।**
**ವಿದ್ಯಾಗುರುಂ ಕುಲಗುರುಂ ನೌಮಿ ತನ್ಮೇ ಜಗದ್ಗುರುಮ್ ॥ ೭ ॥**

(ಕೇಶವಭಟ್ಟಾರಕರ ಋಗ್ಭಾಷ್ಯ ಟಿಪ್ಪಣಿಯಲ್ಲಿ)

ಎಲ್ಲ ವಿದ್ಯೆಗಳಲ್ಲಿಯೂ ಪಾರಂಗತರಾದ ನನಗೆ ವಿದ್ಯಾಗುರುಗಳೂ ಕುಲಗುರುಗಳೂ ಆದ ಜಗದ್ಗುರು ಶ್ರೀವಿದ್ಯಾಧೀಶತೀರ್ಥರಿಗೆ ನಮಿಸುವೆನು.

**ಯಸ್ಯ ಪ್ರಮಾಚಂದ್ರಿಕಯಾ ಧ್ವಾಂತಂ ವಿಧ್ವಂಸಮಾಯಯೌ ।**
**ಶ್ರೀಶತತ್ವಪ್ರಬೋಧಾಯ ವಿದ್ಯಾಧೀಶಬುಧಂ ಭಜೇ ॥ ೮ ॥**

(ಕೇಶವಭಟ್ಟಾರಕರ ಕಥಾಲಕ್ಷಣ ಟಿಪ್ಪಣಿಯ ಕೊನೆಗೆ)

ಯಾರ ಸಮ್ಯಗ್ ಜ್ಞಾನವೆಂಬ ಬೆಳದಿಂಗಳಿನಿಂದ ಅಜ್ಞಾನವೆಂಬ ಕತ್ತಲೆಯು ನಾಶವಾಗಿ ಹೋಗುವದೋ ಆ ವಿದ್ಯಾಧೀಶಗುರುಗಳನ್ನು ಪರಮಾತ್ಮನ ಜ್ಞಾನವನ್ನು ಪಡೆಯುವದಕ್ಕಾಗಿ ಭಜಿಸುವೆನು.

**ವಿದ್ಯಾಧೀಶಮುನೀಂದ್ರಾ ಯೇ ಸರ್ವವಿದ್ಯಾವಿಶಾರದಾಃ ।**
**ವಿದ್ಯಾಗುರೂನ್ ಕುಲಗುರೂನ್ ನೌಮಿ ತಾನ್ ಮೇ ಜಗದ್ಗುರೂನ್ ॥ ೯ ॥**

(ಕೇಶವಭಟ್ಟಾರಕರ ಪ್ರಮಾಣಲಕ್ಷಣ ಟಿಪ್ಪಣಿಯ ಕೊನೆಗೆ)

ಶ್ರೀವಿದ್ಯಾಧೀಶಮುನಿಗಳು ಸರ್ವವಿದ್ಯಾಪಾರಂಗತರು. ನನಗೆ ವಿದ್ಯಾಗುರುಗಳೂ, ಕುಲಗುರುಗಳೂ ಆದ ಈ ಜಗದ್ಗುರುಗಳನ್ನು ವಂದಿಸುವೆನು.

**ಯೇನಾಲಾಭಿ ಸಮಸ್ತಶಾಸ್ತ್ರಜಮಹಾಜ್ಞಾನಂ ಸಮಾಷೋಡಶಮ್ ।**
**ಯೇನಾಬೋಧಿ ರಮೇಶತತ್ವಮಪವಾದ್ಯುಕ್ತಿಶ್ಚ ದೂರೀಕೃತಾ ॥**

**ಯೇನಾಕಾರಿ ವಿರಕ್ತಿರಚ್ಯುತಪದೇ ಭಕ್ತಿಶ್ಚ ಲೋಕಶ್ರುತಾ ।**
**ವಿದ್ಯಾಧೀಶಯತಿಃ ಸ ಮೇ ಪರಗುರುಃ ವಿದ್ಯಾಪ್ರದೀಪ್ತ್ಯೈಭವೇತ್**
**॥ ೧೦ ॥**

(ಕೇಶವಭಟ್ಟಾರಕರ ಮಕ್ಕಳು ನರಸಿಂಹಾಚಾರ್ಯರು ಬರೆದ
ವಾಕ್ಯಾರ್ಥರತ್ನಮಾಲಾದ ಆರಂಭದಲ್ಲಿ)

ಸಮಸ್ತಶಾಸ್ತ್ರಗಳ ಜ್ಞಾನವನ್ನೂ ಹದಿನಾರೇ ವರ್ಷಕ್ಕೆ ಪಡೆದ (ತಮ್ಮ ಪಾಠಪ್ರವಚನ ಮತ್ತು ಟಿಪ್ಪಣಿಗಳ ದ್ವಾರಾ), ಪರಮಾತ್ಮತತ್ತ್ವವನ್ನು ಸದಾಕಾಲ ಬೋಧಿಸುತ್ತಿದ್ದ, ಪರಮತವಾದಿಗಳ ದುಷ್ಟ ಯುಕ್ತಿಗಳನ್ನೆಲ್ಲ ನಿರಾಸಮಾಡಿದ, ಭಗವಂತನ ಪಾದಾರವಿಂದಗಳಲ್ಲಿ ಅಪಾರವಾದ ಭಕ್ತಿಯನ್ನು ಮಾಡಿದ, ಪರಮವೈರಾಗ್ಯಶಾಲಿಗಳಾದ, ನನಗೆ ಪರಗುರುಗಳಾದ (ನನ್ನ ಗುರುಗಳಾದ ಕೇಶವಭಟ್ಟಾರಕರ ಗುರುಗಳಾದ), ಶ್ರೀವಿದ್ಯಾಧೀಶಯತಿಗಳು ನನ್ನ ವಿದ್ಯೆಯನ್ನು ಬೆಳಕಿಗೆ ತರಲಿ.

**ಯದ್ಧಸ್ತನಿಸ್ಸೃತರಮೇಶಪದಾಭಿಷೇಕ-**
**ತೀರ್ಥೇನ ಶುಷ್ಕತರವಃ ಸರಸಾ ಗಯಾಯಾಮ್ ॥**
**ಜಾತಾ ವಿಪಶ್ಚಿತಿ ಜನೇ ಬಹುದೇಶಸಂಸ್ಥೇ**
**ತಂ ದೈವತಂ ಪರಪುಮಾಂಸಮಹಂ ನಮಾಮಿ ॥ ೧೧ ॥**

(ವಾಕ್ಯಾರ್ಥರತ್ನಮಾಲಾದಲ್ಲಿ ಆದಿಯಲ್ಲಿ)

ದೇಶದ ನಾನಾಭಾಗಗಳಿಂದ ಅನೇಕ ವಿದ್ವಾಂಸರ ಸಮಕ್ಷಮದಲ್ಲಿ ಗಯಾ ಕ್ಷೇತ್ರದಲ್ಲಿ ಶ್ರೀವಿದ್ಯಾಧೀಶರು ಶ್ರೀಮೂಲರಾಮದೇವರಿಗೆ ಅಭಿಷೇಕಮಾಡಿ ತೆಗೆದ ತೀರ್ಥದ ಹನಿಗಳಿಂದ ಒಣಗಿದ ಮರವು ಚಿಗಿಯಿತು. ಈ ಮಹಾ ಪುರುಷರೂ ದೇವಾಂಶರೂ ಆದ ಶ್ರೀವಿದ್ಯಾಧೀಶರಿಗೆ ನಮಸ್ಕರಿಸುವೆನು.

**ವಿದ್ಯಾವನೀಸ್ಥಲೀಯಸ್ಯ ಧ್ವಾನ್ತೈಃ ದಧ್ವನ್ಯತೇऽನಿಶಮ್ ।**
**ದ್ರಾವಯಂತಿ ಜಗನ್ನಿದ್ರಾಂ ವಿದ್ಯಾಧೀಶಹರಿಂ ನುಮಃ ॥ ೧೨ ॥**

(ವಿಷ್ಣುಸ್ತುತಿ ವ್ಯಾಖ್ಯಾನದ ಆದಿಯಲ್ಲಿ)

ಶ್ರೀವಿದ್ಯಾಧೀಶರೆಂಬ ಸಿಂಹರು ಸಕಲವಿದ್ಯೆಗಳೆಂಬ ಅರಣ್ಯದಲ್ಲಿ ಗರ್ಜಿಸುತ್ತಿರುವರು. ಅವರ ಈ ಗರ್ಜನೆಯಿಂದ ಜಗತ್ತಿನಲ್ಲಿಯ ಜನರ ಅಜ್ಞಾನವೆಂಬ ನಿದ್ರೆಯು ದೂರವಾಗುವದು.

**ವಿದ್ಯಾಧೀಶಪದಾಂಭೋಜರಸಸಿಕ್ತಾ ಗಿರೋ ಲತಾಃ**
**ಸ್ಮಾರಂ ಸ್ಮಾರಂ ಸಂಗಮಿತಿ ತ್ರಿವಿಕ್ರಮಪದಕ್ರಮ್ಯಃ ॥ ೧೩ ॥**

(ವಿಷ್ಣುಸ್ತುತಿ ವ್ಯಾಖ್ಯಾನದ ಕೊನೆಯಲ್ಲಿ)

ಶ್ರೀವಿದ್ಯಾಧೀಶರ ಪಾದಕಮಲಗಳಲ್ಲಿಯ ಮಧುರಸದಿಂದ ಸಿಂಪಡಿಸಲ್ಪಟ್ಟ ಈ ನನ್ನ ವಿಷ್ಣುಸ್ತುತಿ ವ್ಯಾಖ್ಯಾನರೂಪವಾದ ಮಾತುಗಳ ಬಳ್ಳಿಗಳನ್ನು ವಿಷ್ಣುಸ್ತುತಿ ಕರ್ತೃಗಳಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಪಾದಕಮಲಗಳಲ್ಲಿ ಸಮರ್ಪಿಸುವೆನು. (ಅವರ ಮಾತುಗಳಿಗೆ ಹೊಂದಿಸುವೆನು )

**ವಿದ್ಯಾಧೀಶೋ ವಿಪುಲಮಹಿಮಾ ಸರ್ವವಿದ್ಯಾಪ್ರವೀಣಃ ।**
**ಮಾದ್ಯದ್ವಾದಿದ್ವಿರದದಲನೇ ಪಂಚವಕ್ತ್ರಾಯಮಾಣಃ ॥**
**ವೈರಾಗ್ಯಾದ್ಯೈಃ ಯುತ ಉರುಗುಣೈಃ ಭಿಕ್ಷುಭೂಷಾಯಮಾಣೈಃ**
**ಯತ್ಕಗ್ರೋೞಭೂದ್ಧರಣಿವಲಯೇ ವೃದ್ಧಿಮುಚ್ಛುದ್ಧಕೀರ್ತಿಃ ॥ ೧೪ ॥**

(ಶ್ರೀಸತ್ಯಬೋಧವಿಜಯ ಸರ್ಗ ೧, ಶ್ಲೋಕ ೫೫)

ಅಗಾಧ ಮಹಿಮೆಯುಳ್ಳವರೂ, ಸರ್ವವಿದ್ಯಾಪ್ರವೀಣರೂ ಉನ್ಮತ್ತರಾದ ಪರಮತವಾದಿಗಳೆಂಬ ಆನೆಗಳನ್ನು ಸೀಳುವದರಲ್ಲಿ ಸಿಂಹನಂತೆ ಇದ್ದವರೂ ಯತಿಗಳಿಗೆ ಭೂಷಣಪ್ರಾಯವಾದ ವೈರಾಗ್ಯಾದಿಗುಣಗಳಿಂದ ಭೂಷಿತರೂ ಭೂಮಂಡಲದಲ್ಲೆಲ್ಲ ಪ್ರಸೃತವಾದ ಶುದ್ಧವಾದ ಕೀರ್ತಿಯಿದ್ದವರೂ ಆದ ಶ್ರೀವಿದ್ಯಾಧೀಶರೆಂಬ ಯತಿಶ್ರೇಷ್ಠರು ಆಗಿಹೋದರು.

**ಶುಕವತ್ ಶಿಕ್ಷಿತೋ ಯೇನ ವೇದಾಂತಾರ್ಥವಿನಿಶ್ಚಯೇ**
**ತಂ ವಂದೇ ಸದ್ಗುರುಂ ವಿದ್ಯಾಧೀಶಾಖ್ಯಮನಿಶಂ ವರಮ್ ॥ ೧೫ ॥**

(ಸೌತ್ರಾರ್ಥಶಬ್ದಭಾವಾರ್ಥಪ್ರಕಾಶ
ಎಂಬ ಗ್ರಂಥದ ಆದಿಯಲ್ಲಿ)

ವೇದಾಂತದ ವಿಷಯಗಳನ್ನು ನಿಶ್ಚಿತವಾಗಿ ತಿಳಿದುಕೊಳ್ಳಲು ಯಾರು ನನಗೆ ಗಿಳಿಗೆ ಬೋಧನೆಮಾಡಿದಂತೆ ಬೋಧನೆ ಮಾಡಿರುವರೋ ಆ ಶ್ರೀವಿದ್ಯಾಧೀಶರೆಂಬ ಗುರುಗಳಿಗೆ ನಮಸ್ಕಾರ ಮಾಡುವೆನು.

**ವಿದ್ಯಾಧೀಶಾಂಬುಧರಃ ಕನಕಮಯೀಂ ವೃಷ್ಟಿಮದ್ಭುತಾಂ ವರ್ಷನ್**
**ದಾರಿದ್ರ್ಯದಾವದೂನಾನ್ ಧಯತ ವನಸ್ಪತೀನ್ ಸಾಧೂನ್ ॥ ೧೬ ॥**

(ಶ್ರೀಸತ್ಯನಿಧಿವಿಲಾಸ ಸರ್ಗ ೩, ಶ್ಲೋಕ ೩೨)

ಶ್ರೀವಿದ್ಯಾಧೀಶರೆಂಬ ಮೋಡವು ದಾರಿದ್ರ್ಯವೆಂಬ ಅಡವಿಯ ಬೆಂಕಿಯಿಂದ ಬಳಲಿದ ಸಜ್ಜನರೆಂಬ ವನಸ್ಪತಿಗಳನ್ನು ಅದ್ಭುತವಾದ ಕನಕವೃಷ್ಟಿಯನ್ನು ಮಾಡಿ ಶಾಂತಗೊಳಿಸಿತು.

# ಶ್ರೀಸತ್ಯವಿಜಯರ ಸ್ತೋತ್ರಗಳು

**ಶ್ರೀವಿಭೀಷಣಸಾಮ್ರಾಜ್ಯಪ್ರದರಾಮಪದಾಂಬುಜೇ ।**
**ಸಂಸಕ್ತಃ ಸತ್ಯವಿಜಯಹಂಸೋ ಮೇ ಭಾಸತಾಂ ಹೃದಿ ॥ ೧ ॥**

(ಶ್ರೀಸತ್ಯಪ್ರಿಯತೀರ್ಥವಿರಚಿತ ಕರ್ಮನಿರ್ಣಯದ ಟಿಪ್ಪಣಿಯ ಆದಿಯಲ್ಲಿ)

ವಿಭೀಷಣನಿಗೆ ಲಂಕೆಯ ಸಾಮ್ರಾಜ್ಯವನ್ನು ಕೊಟ್ಟ ಶ್ರೀರಾಮನ ಪಾದ ಕಮಲಗಳಲ್ಲಿ ನಿರತರಾದ ಶ್ರೀಸತ್ಯವಿಜಯರೆಂಬ ಯತಿಶ್ರೇಷ್ಠರು ನನ್ನ ಮನಸ್ಸಿನಲ್ಲಿ ಬೆಳಗಲಿ.

**ಅತಿಸತ್ಯವಾದನಿರತೋಽತನುಧೀಃ**
**ಸುಕೃತಾಂತಸಂಪ್ರವಚನೇ ಚತುರಃ ।**
**ಸ ಉದೈಷ್ಟ ಸತ್ಯವಿಜಯೋ ವಿಜಯೀ**
**ಸಕಲಾಸು ದಿಕ್ಷು ಯುತಪೂರ್ಣಮುನೇಃ ॥ ೨ ॥**

ಬಹಳ ಸತ್ಯವಾದಿಗಳೂ ಅತ್ಯಂತ ಪ್ರತಿಭಾಶಾಲಿಗಳೂ ಸಚ್ಛಾಸ್ತ್ರಪ್ರವಚನದಲ್ಲಿ ಚತುರರೂ ಎಲ್ಲ ದಿಕ್ಕುಗಳಲ್ಲಿಯೂ ವಾಕ್ಯಾರ್ಥದಲ್ಲಿ ಜಯವನ್ನು ಸಂಪಾದಿಸಿದವರೂ ಆದ ಶ್ರೀಸತ್ಯವಿಜಯರು ಶ್ರೀಸತ್ಯಪೂರ್ಣರಿಂದ ಆಶ್ರಮಪಡೆದವರಾಗಿದ್ದರು.

# ಶ್ರೀಸತ್ಯವಿಜಯ ಸ್ತೋತ್ರಪಂಚಕಮ್

**ಶ್ರೀಸತ್ಯವಿಜಯಂ ವಂದೇ ಸರ್ವಾಭೀಷ್ಟಪ್ರದಾಯಕಮ್ ।**
**ಶ್ರೀಮದಾನಂದತೀರ್ಥಾರ್ಯಪಾದಯೋಃ ಭಕ್ತಿದಂ ಸದಾ ॥ ೧ ॥**

ಶ್ರೀಆನಂದತೀರ್ಥರ ಪಾದಕಮಲಗಳಲ್ಲಿ ಭಕ್ತಿಯನ್ನು ಒದಗಿಸಿಕೊಡುವ ಎಲ್ಲ ಅಭೀಷ್ಟಗಳನ್ನೂ ಕೊಡುವ ಶ್ರೀಸತ್ಯವಿಜಯರಿಗೆ ನಮಸ್ಕರಿಸುವೆನು.

**ಸತ್ಯಜೈತ್ರಾಭಿದಂ ನೌಮಿ ಶ್ರೀಮಂತಂ ಶ್ರೀಪ್ರದಂ ಮಮ ।**
**ಜ್ಞಾನದಂ ಭಕ್ತಿದಂ ಮೇsದ್ಯ ಜಯತೀರ್ಥಾರ್ಯಸೇವಕಮ್ ॥ ೨ ॥**

ಶ್ರೀಜಯತೀರ್ಥರ ಸೇವೆಯಲ್ಲಿ (ಅವರ ಗ್ರಂಥಗಳ ಪಾಠಪ್ರವಚನದ್ವಾರಾ) ನಿರತರಾದ, ಜ್ಞಾನ ಮತ್ತು ಭಕ್ತಿಗಳನ್ನು ಒದಗಿಸಿಕೊಡುವ ಶ್ರೀಸಂಪನ್ನರಾದ ಮತ್ತು ನಮಗೆಲ್ಲ ಸಂಪತ್ತನ್ನು ಕೊಡುವ ಶ್ರೀಸತ್ಯವಿಜಯರಿಗೆ ನಮಸ್ಕರಿಸುವೆನು.

**ಸತ್ಯಪೂರ್ಣಾಬ್ಧಿಸಂಭೂತಂ ಭಕ್ತಸ್ವಾಂತೋತ್ಪಲಂ ಸದಾ ।**
**ವಿಕಾಸಯಂತಂ ಸಂಶುದ್ಧಂ ಸತ್ಯಜೈತ್ರೇಂದುಮಾಶ್ರಯೇ ॥ ೩ ॥**

ಶ್ರೀಸತ್ಯಪೂರ್ಣರೆಂಬ ಸಾಗರದಿಂದ ಉದಯಿಸಿದ, ಭಕ್ತರ ಮನಸ್ಸುಗಳೆಂಬ ನೀಲಕಮಲಗಳನ್ನು ವಿಕಸಿತಗೊಳಿಸುವ, ಅತ್ಯಂತ ಶುದ್ಧರಾದ ಶ್ರೀಸತ್ಯವಿಜಯರೆಂಬ ಚಂದ್ರನನ್ನು ಆಶ್ರಯಿಸುವೆನು.

**ವೇದಾಂತಶಾಸ್ತ್ರೇಷು ಸದಾ ರಮಂತಮ್**
**ಸ್ವಭಕ್ತಸಂರಕ್ಷಣಬದ್ಧಚಿತ್ತಮ್ ।**
**ಮಹಾನುಭಾವಂ ಭುವನೈಕವಂದ್ಯಮ್**
**ವಂದೇ ಗುರುಂ ಸತ್ಯಜಯಾಭಿಧಾನಮ್ ॥ ೪ ॥**

ವೇದಾಂತಶಾಸ್ತ್ರದಲ್ಲಿ ಸದಾಕಾಲವೂ ನಿರತರಾದ ತಮ್ಮ ಭಕ್ತರ ರಕ್ಷಣೆಯಲ್ಲಿ ಬದ್ಧಚಿತ್ತರಾದ ಮಹಾನುಭಾವರಾದ ಜಗತ್ತಿಗೆಲ್ಲ ವಂದ್ಯರಾದ ಶ್ರೀಸತ್ಯವಿಜಯ ಗುರುಗಳಿಗೆ ನಮಸ್ಕರಿಸುವೆನು.

**ಬಂಧುಸ್ತ್ವಂ ಗುರುರಿಷ್ಟದೈವತಮಿತಿ ತ್ವತ್ಪಾದಪಂಕೇರುಹಮ್ ।**
**ಪ್ರಾಪ್ತಂ ಮಾಂ ಪರಿಪಾಲಯೇತಿ ಸತತಂ ಯಾಚೇ ನಿಬದ್ಧಾಂಜಲಿಃ ॥**
**ಚಿತ್ತಂ ಮದ್ಗುಣದೋಷಚಿಂತನವಿಧೌ ನೂನಂ ಮನಾಕ್**
**ಮಾ ಕೃಥಾಃ ।**
**ನಾನ್ಯಾ ಮೇ ಗತಿರಸ್ತಿ ಸತ್ಯವಿಜಯಸ್ವಾಮಿನ್**
**ತ್ವದಂಘ್ರಿಂ ವಿನಾ ॥ ೫ ॥**

ಶ್ರೀಸತ್ಯವಿಜಯಸ್ವಾಮಿಗಳೇ ! ತಾವೇ ನನಗೆ ಬಂಧುಗಳು, ಗುರುಗಳು, ಇಷ್ಟದೇವತೆಯು ಎಂದು ತಮ್ಮ ಪಾದಕಮಲಗಳಿಗೆ ನಾನು ಶರಣಾಗತನಾಗಿ ಬಂದಿದ್ದೇನೆ. ನನ್ನನ್ನು ಕಾಪಾಡಬೇಕೆಂದು ಕೈಯೊಡ್ಡಿ ಬೇಡುವೆನು. ನನ್ನ ಗುಣ ಮತ್ತು ದೋಷಗಳನ್ನು ತಾವು ಪರಿಗಣಿಸಬಾರದು. ತಮ್ಮ ಪಾದಗಳನ್ನು ಬಿಟ್ಟರೆ ನನಗೆ ಬೇರೆ ಗತಿಯಿಲ್ಲ. (ಶ್ರೀಸತ್ಯವಿಜಯರು ದೇವರಪೆಟ್ಟಿಗೆಗಳನ್ನೆಲ್ಲ ಆರಣಿಯ ರಾಜನಾದ ಕೃಷ್ಣಾಜೀಪಂತನಿಗೆ ಕೊಟ್ಟು ಶ್ರೀಸತ್ಯಪ್ರಿಯರನ್ನು ಶೀಘ್ರವಾಗಿ ಕರೆಯಿಸಿ ಅವರಿಗೆ ಇವುಗಳನ್ನು ಒಪ್ಪಿಸಬೇಕೆಂದು ಹೇಳಿ ವೃಂದಾವನಸ್ಥರಾದರು. ದೂರದಲ್ಲಿದ್ದ ಶ್ರೀಸತ್ಯಪ್ರಿಯರು ಇಪ್ಪತ್ತೆರಡು ದಿನಗಳಾದಮೇಲೆ ಬಂದು ವೃಂದಾವನದಲ್ಲಿದ್ದ ತಮ್ಮ ಗುರುಗಳನ್ನು ಅನನ್ಯಭಾವದಿಂದ ಪ್ರಾರ್ಥಿಸಿದ್ದು ಈ ಐದನೆಯ ಶ್ಲೋಕವಲ್ಲದೆ. ಈ ಶ್ಲೋಕವು ಅವರು ಭಕ್ತಿಪರವಶರಾಗಿ ರಚಿಸಿದ್ದು ಎಂದು ಐತಿಹ್ಯವಿದೆ. ಉಳಿದ ನಾಲ್ಕು ಶ್ಲೋಕಗಳ ಕರ್ತೃಗಳು ಯಾರು ಎಂದು ತಿಳಿದುಬರುವದಿಲ್ಲ. ರೂಢಿಯಲ್ಲಿ ಎಲ್ಲ ಶ್ಲೋಕಗಳೂ ಶ್ರೀಸತ್ಯಪ್ರಿಯರ ಶ್ಲೋಕಗಳೆಂದೇ ಹೇಳುವರು.)

**ರಾಮಪೂಜಾರತಾನ್ ನಿತ್ಯಂ ಗುರುಪಾದಪ್ರಪೂಜಕಾನ್ ।**
**ಶ್ರೀಸತ್ಯಜಯತೀರ್ಥಾಖ್ಯಾನ್ ಪ್ರಪದ್ಯೇ ಜ್ಞಾನಸಿದ್ಧಯೇ ॥ ೬ ॥**

ನಿತ್ಯವೂ ಶ್ರೀರಾಮದೇವರ ಮತ್ತು ಗುರುಗಳ ಪೂಜೆಯಲ್ಲಿ ನಿರತರಾದ ಶ್ರೀಸತ್ಯವಿಜಯತೀರ್ಥರನ್ನು ಜ್ಞಾನಪ್ರಾಪ್ತಿಗಾಗಿ ಆಶ್ರಯಿಸುವೆನು.

(ಮಧುಸೂದನ ಭಿಕ್ಷು ವಿರಚಿತ ತಿಥಿನಿರ್ಣಯ ಟೀಕಾಯಾಮ್)

# ಶ್ರೀಸತ್ಯಪ್ರಜ್ಞರ ಸ್ತೋತ್ರಗಳು

**ಶಮದಮಯುತಂ ವಿಪ್ರಶ್ರೇಷ್ಠಂ ಜಯಾರ್ಯಮಿಹೈಷ ಸತ್-**
**ಸಮಯಪಟುಧೀಧುರ್ಯಂ ತುರ್ಯಾಶ್ರಮವ್ರತಸಂಸ್ಥಿತಮ್ ।**
**ವ್ಯಧಿತ ಚ ಪದಂ ಸತ್ಯಪ್ರಜ್ಞೇತ್ಯಮುಷ್ಯ ಗುಣೋಚಿತಮ್**
**ರಹಸಿ ಕೃಪಯಾ ಬ್ರಹ್ಮಾಪ್ಯಸ್ಮೈ ಸುಗೋಪಮುಪಾದಿಶತ್ ॥ ೧ ॥**

(ಶ್ರೀಸತ್ಯಧ್ಯಾನವಿಜಯ ಸರ್ಗ ೫, ಶ್ಲೋಕ ೫೯)

ಶಮದಮಾದಿಗುಣಸಂಪನ್ನರೂ ಸಮಯಗಳನ್ನು (ಷಡ್ದರ್ಶನಗಳನ್ನು) ತಿಳಿದುಕೊಂಡವರಲ್ಲಿ ಅಗ್ರಗಣ್ಯರೂ ಆದ ಪಾಂಡುರಂಗಿ ಜಯಾಚಾರ್ಯರೆಂಬ ವಿಪ್ರಶ್ರೇಷ್ಠರಿಗೆ ಸನ್ಯಾಸಾಶ್ರಮವನ್ನು ಕೊಟ್ಟು ಅವರ ಗುಣಕ್ಕೆ ಒಪ್ಪುವ 'ಸತ್ಯಪ್ರಜ್ಞ' ಎಂಬ ನಾಮಕರಣವನ್ನು ಮಾಡಿ ಅತಿಗೋಪ್ಯವಾದ ಪರಮಾತ್ಮ ರಹಸ್ಯವನ್ನು ಅವರಿಗೆ ಏಕಾಂತದಲ್ಲಿ ಉಪದೇಶಿಸಿದರು.

**ವಾಕ್ಯಾರ್ಥಚಂದ್ರಿಕಾಗೋಭಿಃ ಪ್ರೀಣಯಂತಂ ಸತೋಽನಿಶಮ್ ।**
**ಸತ್ಯಪ್ರಜ್ಞಮುನೀಂದ್ರಂ ತಂ ಪ್ರಪದ್ಯೇ ಶಿಷ್ಯವತ್ಸಲಮ್ ॥ ೧ ॥**

ವಾಕ್ಯಾರ್ಥಚಂದ್ರಿಕಾಪ್ರವಚನದಿಂದ ಸಜ್ಜನರನ್ನು ಸಂತೋಷಪಡಿಸುತ್ತಿದ್ದ, ಶಿಷ್ಯವತ್ಸಲರಾದ, ಶ್ರೀಸತ್ಯಪ್ರಜ್ಞಮುನಿಶ್ರೇಷ್ಠರಿಗೆ ಶರಣಾಗತನಾಗುವೆನು.

**ಅಕಾಮಸ್ಯಾಪಿ ಕಾಮೌ ದ್ವೌ ಪ್ರಾವರ್ತೇತಾಂ ಕ್ಷಣೇ ಕ್ಷಣೇ ।**
**ವಾಕ್ಯಾರ್ಥಚಂದ್ರಿಕಾಪಾಠೇ ಶ್ರೀರಾಮಾಂಘ್ರ್ಯರ್ಚನೇ ಸದಾ ॥ ೨ ॥**

ಯಾವದೇ ವಿಧವಾದ ಕಾಮನೆಗಳು ಇಲ್ಲದ ಶ್ರೀಸತ್ಯಪ್ರಜ್ಞರಿಗೆ ಎರಡು ಕಾಮನೆಗಳು ಇದ್ದವು. ನಿರಂತರ ವಾಕ್ಯಾರ್ಥಚಂದ್ರಿಕಾಪಾಠ ಹೇಳುವದು ಒಂದು ಕಾಮನೆಯು. ನಿರಂತರ ಶ್ರೀಮೂಲರಾಮದೇವರ ಪಾದಸೇವೆ ಮಾಡಬೇಕೆಂಬುದು ಇನ್ನೊಂದು ಕಾಮನೆಯು.

**ಅಶನೇ ರಾಗಹೀನೋಽಪಿ ವಸನೇಽಭೂತ್ ಸರಾಗವಾನ್ ।**
**ವಿಷಯಾದ್ ವಿಮುಖಃ ಶಬ್ದವಿಷಯೇ ಸರ್ವದೋನ್ಮುಖಃ ॥ ೩ ॥**

ಅಶನ ಅಂದರೆ ಆಹಾರಾದಿಗಳಲ್ಲಿ ರಾಗ ಅಂದರೆ ಅಭಿಮಾನವಿಲ್ಲದೇ ಇದ್ದ ಅವರಿಗೆ ವಸನ ಅಂದರೆ ತಮ್ಮ ಕಾವಿ ಬಟ್ಟೆಯಲ್ಲಿ ರಾಗ ಅಂದರೆ ಕಾವಿಬಣ್ಣವಿತ್ತು. ಲೌಕಿಕ ವಿಷಯಗಳಿಂದ ವಿಮುಖರಾದ ಅವರು ಶಬ್ದವಿಷಯ ಅಂದರೆ ಶಾಸ್ತ್ರ ವಿಷಯನಾದ ಪರಮಾತ್ಮನಲ್ಲಿ ಯಾವಾಗಲೂ ಅಭಿಮುಖರಾಗಿದ್ದರು.

**ಪ್ರತ್ಯಪ್ಯಾರ್ಥಂ ಸ ಧನಿನಾಂ ವಿಮುಕ್ತೋ ಲೌಕಿಕಾತ್ ಋಣಾತ್ ।**
**ಗುರೋಃ ನ ಅಲೌಕಿಕಾತ್ ಯಸ್ಮಾತ್ ನೈವಾಸ್ಯಾಸ್ತಿ**
**ಪ್ರತಿಕ್ರಿಯಾ ॥ ೪ ॥**

ಮಠಕ್ಕೆ ಸಾಲಕೊಟ್ಟ ಧನಿಕರ ಸಾಲವನ್ನು ತೀರಿಸಿ ಅವರು ಲೌಕಿಕ ಋಣದಿಂದ ಮುಕ್ತರಾದರು. ಆದರೆ ಗುರುಗಳು ತಮಗೆ ಮಾಡಿದ ಅನುಗ್ರಹದ ಅಲೌಕಿಕ ಋಣದಿಂದ ಮುಕ್ತರಾಗಲಿಲ್ಲ. ಯಾಕಂದರೆ ಅದು ತೀರಿಸಿ ಮುಗಿಸಲು ಬರುವಂಥದಲ್ಲ.

**ಚಾತಕಾನಿವ ಶಿಷ್ಯಾಣಾಂ ಮುಖೋದ್ಗತ ಸುಧಾರಸೈಃ ।**
**ಸಭಾಯಾಂ ಗುರುಮೇಘೋಽಯಂ ಚಿತ್ರಂ ಶಾಂತತೃಷೋಽಭವತ್**
**॥ ೫ ॥**

(ಶ್ರೀಸತ್ಯಾಭಿಜ್ಞವಿಜಯ ಸರ್ಗ ೧, ಶ್ಲೋಕ ೫, ೩೧–೩೪)

ಚಾತಕಪಕ್ಷಿಗಳಂತೆ ಇರುವ ಶಿಷ್ಯರ ಬಾಯಿಂದ ಬಂದ ಶ್ರೀಮನ್ನ್ಯಾಯ ಸುಧಾದ ಅನುವಾದರೂಪ ನೀರಿನ ಹನಿಗಳಿಂದ ವಿದ್ವತ್ಸಭೆಗಳಲ್ಲಿ ಮೇಘಸದೃಶರಾದ ಶ್ರೀಸತ್ಯಪ್ರಜ್ಞಗುರುಗಳು ತಮ್ಮ (ಶಿಷ್ಯರಿಂದ ಸುಧಾಶ್ರವಣದ) ನೀರಡಿಕೆಯನ್ನು ಪೂರೈಸಿಕೊಂಡು ಸಂತೋಷಪಟ್ಟರು. (ಮೇಘಗಳ ತುಂತುರುಹನಿಗಳಿಂದ ಚಾತಕಗಳು ನೀರಡಿಕೆಯನ್ನು ಪೂರೈಸಿಕೊಳ್ಳುವದು ಕವಿಸಮಯ. ಆದರೆ ಇಲ್ಲಿ ಮೇಘವೇ ಚಾತಕಗಳಿಂದ ನೀರಡಿಕೆಯನ್ನು ಪೂರೈಸಿಕೊಂಡಿತು ಎಂದು ಹೇಳಿ ಗುರುಗಳ ಶಿಷ್ಯವಾತ್ಸಲ್ಯ ಮತ್ತು ಶಿಷ್ಯರು ಮಾಡಿದ ಸುಧಾನುವಾದವನ್ನು ಕೇಳಿ ಪರಮ ಪ್ರೀತರಾಗುತ್ತಿದ್ದುದನ್ನು ಕವಿಯು ವಿವರಿಸಿದ್ದಾನೆ.)

(ಶ್ರೀಕಟ್ಟೇ ಕೇಶವಾಚಾರ್ಯರು ಬರೆದ ಶ್ರೀಸತ್ಯಧ್ಯಾನವಿಜಯ ಮತ್ತು ಶ್ರೀಸತ್ಯಾಭಿಜ್ಞವಿಜಯಗಳಿಂದ ಈ ಮೇಲಿನ ಶ್ಲೋಕಗಳನ್ನು ಆಯ್ದುಕೊಳ್ಳಲಾಗಿದೆ.)

# ಆನಂದಭಟ್ಟಾರಕರ ಸ್ತೋತ್ರಗಳು

(ಶ್ರೀಆನಂದಭಟ್ಟಾರಕರು ಶ್ರೀವಿದ್ಯಾಧೀಶಸ್ವಾಮಿಗಳ
ಪೂರ್ವಾಶ್ರಮದ ತಂದೆಯವರು)

**ಯದ್ಧಸ್ತಾಂಬುಜಸಂಗತೋಽಹಮಭವಂ ದೇವ್ಯಾಃ ಕಟಾಕ್ಷಾಶ್ರಯಃ**
**ಯದ್ವ್ಯಾಖ್ಯಾನದಿವಾಕರೇಣ ವಿದುಷಾಮಂತಸ್ತಮಃ ಸಂಹೃತಮ್ ।**
**ಯೇ ಪ್ರೀತಾ ಭುವಿ ಚಂದನದ್ರುಮ ಇವ ಸ್ವೀಯಂ ಸ್ವವತ್ ಕುರ್ವತೇ**
**ತಾನ್ ವ್ಯಾಖ್ಯಾನಿರತಾನ್ ಭಜೇ ಪರಗುರೂನ್ ಆನಂದಭಟ್ಟಾರಕಾನ್ ॥ ೧ ॥**

(ಶೇ. ವಾ. ಚಂ.)

ಶ್ರೀಆನಂದಭಟ್ಟಾರಕರ ಆಶ್ರಯವನ್ನು ಪಡೆದು ನಾನು ಲಕ್ಷ್ಮೀದೇವಿಯ ಕಟಾಕ್ಷಕ್ಕೆ ಪಾತ್ರನಾದೆನು. ಆನಂದಭಟ್ಟರ ಪ್ರವಚನವೆಂಬ ಸೂರ್ಯಕಿರಣಗಳಿಂದ ವಿದ್ವಾಂಸರ ಸಂದೇಹಗಳೂ ದೂರಾಗುತ್ತಿದ್ದವು. ಆನಂದಭಟ್ಟರು ಚಂದನವೃಕ್ಷದಂತೆ ಎಲ್ಲರನ್ನೂ ತಮ್ಮವರನ್ನಾಗಿ ಮಾಡಿಕೊಳ್ಳುತ್ತಿದ್ದರು. ನಿರಂತರವಾಗಿ ಶ್ರೀಮಧ್ವಶಾಸ್ತ್ರದ ಪ್ರವಚನದಲ್ಲಿಯೇ ನಿರತರಾದ ನನಗೆ ಪರಮಗುರುಗಳಾದ ಶ್ರೀಆನಂದ ಭಟ್ಟಾರಕರನ್ನು ಭಜಿಸುವೆನು.

**ಶ್ರೀಮದಾನಂದೋಪಪದಾಚಾರ್ಯಾನ್ ಸದ್ಗುಣಶಾಲಿನಃ ।**
**ಸರ್ವಶಾಸ್ತ್ರಪ್ರವಕ್ತೄಂಶ್ಚ ವಂದೇಽಹಂ ಧೀವಿಶುದ್ಧಯೇ ॥ ೨ ॥**

(ಶ್ರೀಕೇಶವಭಟ್ಟಾರಕರ ಪ್ರಮಾಣಲಕ್ಷಣ ಟಿಪ್ಪಣಿಯ ಆದಿಯಲ್ಲಿ)

ಸದ್ಗುಣಸಂಪನ್ನರೂ ಸರ್ವಶಾಸ್ತ್ರಗಳ ಪ್ರವಚನದಲ್ಲಿ ನಿರತರೂ ಆದ ಶ್ರೀಆನಂದಾಚಾರ್ಯರನ್ನು ನನ್ನ ಬುದ್ಧಿಶುದ್ಧಿಗಾಗಿ ನಮಸ್ಕರಿಸುವೆನು.

**ಪುಣ್ಯಸ್ತಂಭನಿವಾಸಿಗೌತಮಸರಿತ್ ಸ್ನಾನಾಗ್ನಿಹೋತ್ರಾದಿಸತ್**
**ಶ್ರೌತಾರ್ಷಾದಿಗುರೂಕ್ತಕರ್ಮನಿಚಯೈಃ ಶ್ರೀಶಪ್ರಪೂಜಾರತಾನ್**
**ಶ್ರೀಮಧ್ವೀಯಸುಶಾಸ್ತ್ರಕಂಟಕಹರಾನ್ ತದ್ವ್ಯಾಕೃತೌ ಪಂಡಿತಾನ್**
**ವಂದೇ ವ್ಯಾಪ್ತಸುಶಿಷ್ಯಸಂತತಿಯುತಾನಾನಂದಭಟ್ಟಾರಕಾನ್ ॥ ೩ ॥**

(ವಾಕ್ಯಾರ್ಥರತ್ನಮಾಲಾ ಆದಿಯಲ್ಲಿ)

ಪುಣ್ಯಸ್ತಂಭಪುರದಲ್ಲಿ (ಈಗಿನ ಪುಣತಾಂಬೆಯಲ್ಲಿ) ಗೋದಾವರೀನದಿಯ ಸ್ನಾನ ಅಗ್ನಿಹೋತ್ರ ಶ್ರೌತಸ್ಮಾರ್ತಕರ್ಮಗಳು ಇವುಗಳಿಂದ ಭಗವಂತನ ಪೂಜೆಯಲ್ಲಿ ನಿರತರಾದ ಶ್ರೀಮಧ್ವಾಚಾರ್ಯರ ಶಾಸ್ತ್ರಕ್ಕೆ ಬಂದ ಕಂಟಕವನ್ನು ಪರಿಹರಿಸಿದ (ಶ್ರೀವ್ಯಾಸರಾಜರ ನ್ಯಾಯಾಮೃತಕ್ಕೆ ಮಧುಸೂದನ ಸರಸ್ವತಿಯು ಬರೆದ ಅದ್ವೈತಸಿದ್ಧಿಯೆಂಬ ಖಂಡನಗ್ರಂಥದ ಖಂಡನವನ್ನು ಮಾಡಿ ಬರೆದ ನ್ಯಾಯಾಮೃತ-ಕಂಟಕೋದ್ಧಾರ ಎಂಬ ಟಿಪ್ಪಣಿಯಿಂದ ಪರಿಹರಿಸಿದ ಎಂದು ಅಭಿಪ್ರಾಯವು), ಮಧ್ವಶಾಸ್ತ್ರದ ವ್ಯಾಖ್ಯಾನವನ್ನು ಮಾಡುವದರಲ್ಲಿ ಕುಶಲರಾದ, ಎಲ್ಲ ಕಡೆಗೂ ವ್ಯಾಪಿಸಿದ ಶಿಷ್ಯರಿರುವ ಆನಂದಭಟ್ಟಾರಕರನ್ನು ವಂದಿಸುವೆನು.

## ಶ್ರೀನಿವಾಸಾಚಾರ್ಯರ ಸ್ತೋತ್ರಗಳು

(ಶ್ರೀನಿವಾಸಾಚಾರ್ಯರು ಆನಂದಭಟ್ಟಾರಕರ ಜ್ಯೇಷ್ಠಪುತ್ರರು,
ಶ್ರೀವಿದ್ಯಾಧೀಶಸ್ವಾಮಿಗಳ ಪೂರ್ವಾಶ್ರಮದ ಅಣ್ಣಂದಿರು)

**ಯಃ ಶ್ರೀನಿವಾಸಮೃಗರಾಟ್ ಸಕಲಾನ್ ಮದಾಂಧ-**
**ಮಾಯಾವಿಸಿಂಧುರಕುಸುಂಭಗಿರೀನ್ ವಿದಾರ್ಯ**
**ಸತ್ತರ್ಕತೀಕ್ಷ್ಣನಖರೈಃ ವಿರರಾಜ ಮಧ್ವ-**
**ಸಿದ್ಧಾಂತಚಾರುವಿಪಿನೇ ತಮಲಂ ಭಜೇಽಹಮ್ ॥ ೧ ॥**

(ಶೇಷವಾಕ್ಯಾರ್ಥಚಂದ್ರಿಕಾದ ಆದಿಯಲ್ಲಿ)

ಮದವೇರಿದ ಮಾಯಾವಾದಿಗಳೆಂಬ ಮದ್ದಾನೆಗಳ ಕುಂಭಸ್ಥಲಗಳನ್ನು ತಮ್ಮ ತೀಕ್ಷ್ಣವಾದ ತರ್ಕಗಳೆಂಬ ಉಗುರುಗಳಿಂದ ಭೇದಿಸಿ ಮಧ್ವಸಿದ್ಧಾಂತವೆಂಬ ಅರಣ್ಯದಲ್ಲಿ ವಿರಾಜಮಾನರಾದ ಶ್ರೀನಿವಾಸಾಚಾರ್ಯರೆಂಬ ಸಿಂಹವನ್ನು ಭಜಿಸುವೆನು.

**ಶ್ರೀನಿವಾಸಾಭಿಧಾಚಾರ್ಯಾನ್ ಸರ್ವಶಾಸ್ತ್ರವಿಶಾರದಾನ್**
**ಜ್ಞಾನಭಕ್ತ್ಯಾದಿಸಂಪನ್ನಾನ್ ಸರ್ವದಾ ಪ್ರಣತೋಽಸ್ಮ್ಯಹಮ್ ॥೨॥**

(ಕೇಶವಭಟ್ಟಾರಕರ ಪ್ರಮಾಣಲಕ್ಷಣ ಟಿಪ್ಪಣಿಯ ಆದಿಯಲ್ಲಿ)

ಎಲ್ಲ ಶಾಸ್ತ್ರಗಳಲ್ಲಿ ವಿಶಾರದರೂ ಜ್ಞಾನಭಕ್ತ್ಯಾದಿಸಂಪನ್ನರೂ ಆದ ಶ್ರೀನಿವಾಸಾಚಾರ್ಯರಿಗೆ ಸದಾ ನಮಸ್ಕರಿಸುವೆನು.

**ಇನೋದಯಸ್ನಾನಸುರಾರ್ಚನಾಗ್ನಿಹೋತ್ರಾದಿಸತ್ಕರ್ಮರತಾತಿ**
**ಶುದ್ಧವತ್ ।**
**ಶ್ರೀಶ್ರೀನಿವಾಸಾಭಿಧವಾರ್ಯವಯಂ ಪಿತೃವ್ಯಮಾನೌ-**
**ಮ್ಯತಿಧೀರಶಿಷ್ಯಕಮ್ ॥ ೩ ॥**

(ವಾಕ್ಯಾರ್ಥರತ್ನಮಾಲಾದ ಆದಿಯಲ್ಲಿ)

ಸೂರ್ಯೋದಯದ ಕಾಲದಲ್ಲಿ ಸ್ನಾನ, ದೇವತಾರ್ಚನೆ, ಅಗ್ನಿಹೋತ್ರಾದಿ ಸತ್ಕಾರ್ಯಗಳು ಇವುಗಳಲ್ಲಿ ನಿರತರಾದ ಪ್ರತಿಭಾಶಾಲಿಗಳಾದ ಅನೇಕ ಶಿಷ್ಯರನ್ನು ಪಡೆದಿದ್ದ ಶ್ರೀನಿವಾಸಾಚಾರ್ಯರೆಂಬ ನನ್ನ ದೊಡ್ಡಪ್ಪ ಅವರಿಗೆ ನಮಸ್ಕರಿಸುವೆನು.

## ಶ್ರೀಕೇಶವಭಟ್ಟಾರಕರ (ಗುರುರಾಜರ) ಸ್ತೋತ್ರಗಳು

**ವಿದ್ಯಾಧೀಶಗುರೋರಶೇಷಸಮಯಾನಭ್ಯಸ್ಯಮಾಧ್ವೀಯ ಸತ್-**
**ತಂತ್ರಾರ್ಥಂ ಪ್ರವಿಚಾರ್ಯ ಚಾರುಹೃದಯಂ ಶಾಸ್ತ್ರಪ್ರವಕ್ತಾಭವತ್।**
**ದುರ್ವಾದೀಂದ್ರಸುಭಂಗಕೃತ್ ವರನದೀಸ್ನಾನಾಗ್ನಿಹೋತ್ರಾದಿಕೃತ್**
**ಶ್ರೀಮಧ್ವೇಶವರಾರ್ಚನೇ ರತಮನಾಃ ಶ್ರೀಕೇಶವಾರ್ಯಾಹ್ವಯಃ**
**॥ ೧ ॥**

(ವಾಕ್ಯಾರ್ಥರತ್ನಮಾಲಾದ ಆದಿಯಲ್ಲಿ)

ಶ್ರೀಕೇಶವಾಚಾರ್ಯರು ಶ್ರೀವಿದ್ಯಾಧೀಶಗುರುಗಳಿಂದ ಸಕಲಶಾಸ್ತ್ರಗಳ ಅಧ್ಯಯನವನ್ನು ಮಾಡಿದರು. ಶ್ರೀಮಧ್ವಶಾಸ್ತ್ರವನ್ನು ಮತ್ತೆ ಮತ್ತೆ ಆಲೋಡನೆ ಮಾಡಿದರು. ಬಳಿಕ ಶ್ರೀಮಧ್ವಶಾಸ್ತ್ರದ ಪ್ರವಚನದಲ್ಲಿ ನಿರತರಾದರು. ದುರ್ವಾದಿಗಳೆನ್ನೆಲ್ಲ ಜಯಿಸಿದರು. ನದೀಸ್ನಾನ ಅಗ್ನಿಹೋತ್ರಾದಿಗಳಲ್ಲಿ ನಿರತರಾದರು. ನಿರಂತರವಾಗಿ ಶ್ರೀಮಧ್ವಾಚಾರ್ಯರ ಮತ್ತು ಭಗವಂತನ ಪೂಜಾದಿಗಳಲ್ಲಿಯೇ ಆಸಕ್ತರಾಗಿದ್ದರು.



**ಗುರುರಾಜರ ವೃಕ್ಷ**

(● ಶೂರ್ಪಾಲಿಯಲ್ಲಿ ಕೃಷ್ಣಾನದಿಯ ದಂಡೆಯಮೇಲೆ ಶ್ರೀ ನರಸಿಂಹದೇವರ ಮಂದಿರದ ಎಡಬದಿಯಲ್ಲಿ (ಸುಮಾರು ಇನ್ನೂರು ಅಡಿ ದೂರದಲ್ಲಿ) ಇರುವ ಶ್ರೀ ಗುರುರಾಜರ ವೃಕ್ಷ)

**ಯದ್ವ್ಯಾಖ್ಯಾನಸ್ಯ ಶಾಲಾ ತು ಅಹಮಹಮಿಕತಯಾ**
**ಶಿಷ್ಯಸಂಘೇನಪೂರ್ಣಾ**
**ವ್ಯಾಖ್ಯಾಚಾತುರ್ಯದೂರೀಕೃತಕುಮತಿಜನಾ ಶಿಷ್ಯವಾಕ್**
**ಸಾರಯುಕ್ತಾ**
**ಸಾಯಂ ಜ್ಞಾತ್ಯಾದಿಶಿಷ್ಯಪ್ರಸುತವರನಾವಳ್ಯಪೂರ್ವಾನ್ನಜಾತ**
**ಪ್ರೀತ್ಯಾ ಯುಕ್ತಾ ಗುರುಂ ತಂ ಪಿತರಮಪಿ ಪತಿಂ ನೌಮಿ ಮೇ**
**ರೂಪದೀಪಮ್ ॥ ೨ ॥**

ಶ್ರೀಕೇಶವಾಚಾರ್ಯರು ಪಾಠಮಾಡುವ ಶಾಲೆಯು ಯಾವಾಗಲೂ ಶಿಷ್ಯರಿಂದ 'ನಾ ಮುಂದೆ' 'ನೀ ಮುಂದೆ' ಎಂದು ತುಂಬಿರುತ್ತಿತ್ತು. ಇವರ ವ್ಯಾಖ್ಯಾನಚಾತುರ್ಯದಿಂದ ದುರ್ವಾದಿಗಳೆಲ್ಲ ದೂರೀಕರಿಸಲ್ಪಡುತ್ತಿದ್ದರು. ಶಿಷ್ಯರ ಅನುವಾದದ ಸಾರ ತುಂಬಿ ತುಳುಕುತ್ತಿತ್ತು. ಸಾಯಂಕಾಲ ಬಂಧುಗಳೂ ಶಿಷ್ಯರೂ ಪ್ರೀತಿಯಿಂದ ಮೃಷ್ಟಾನ್ನಭೋಜನ ಮಾಡುತ್ತಿದ್ದರು. ಇಂಥ ನನ್ನ ತಂದೆಯವರೂ ಗುರುಗಳೂ ಆದ ಶ್ರೀಕೇಶವಾಚಾರ್ಯರನ್ನು ನನುಸ್ಕರಿಸುವೆನು.

**ಯಸ್ಯಾನುಗ್ರಹಲೇಶತೋಽಹಮಭವಂ ವಿದ್ವತ್ಸುಮಾನಾಶ್ರಯಃ**
**ಯದ್ವಾಚಾನುಗತೇಃ ಮದೀಯವಚನಂ ವಿದ್ವನ್ಮನೋಗೋಚರಮ್ ।**
**ಯೋ ಮಚ್ಛಿಕ್ಷಣಸಿದ್ಧಯೇ ಮಮ ಕರೇಣಾಲೇಖಯತ್ ವ್ಯಾಕೃತೀಃ**
**ತತ್ಸೇವಾಂ ಕರವಾಣಿ ಕಾಂ ತದುದಿತಾರ್ಥಾಲೋಚನಾದೇಃ**
**ಪರಮ್ ॥ ೩ ॥**

(ವಾಕ್ಯಾರ್ಥರತ್ನಮಾಲಾದ ಆದಿಯಲ್ಲಿ)

ನನ್ನ ತಂದೆಯವರಾದ ಶ್ರೀಕೇಶವಾಚಾರ್ಯರ ಅನುಗ್ರಹಲೇಶದಿಂದಲೇ ನಾನು ವಿದ್ವಾಂಸರಲ್ಲಿ ಮಾನ್ಯತೆಯನ್ನು ಪಡೆದೆನು. ಅವರ ವಾಕ್ಯಗಳನ್ನು ಅನುಸರಿಸಿ ಕೊಂಡೇ ನನ್ನ ವಾಕ್ಯಗಳಿರುವದರಿಂದ ಅವು ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿವೆ. ನಾನು ಸುಶಿಕ್ಷಿತನಾಗಲಿ ಎಂದು ಅವರು ನನ್ನ ಕೈಯಿಂದ ಟಿಪ್ಪಣಿಗಳನ್ನು ಬರಿಸಿ ದರು. ಇಂಥ ಮಹನೀಯರ ಸೇವೆಯನ್ನು ಅವರ ಬರೆದಿಟ್ಟ ಗ್ರಂಥಗಳ ಆಲೋಚನೆ ಯನ್ನು ಬಿಟ್ಟು ಬೇರೆ ಯಾವ ರೀತಿಯಿಂದ ಮಾಡಲಿ?

# ಗಡ್ಡದ ಶ್ರೀನಿವಾಸಾಚಾರ್ಯರು

(ಶ್ರೀಸತ್ಯವಿಜಯಸ್ವಾಮಿಗಳ ಪೂರ್ವಾಶ್ರಮದ ತ-ದೆಯವರು,
ಕೇಶವಭಟ್ಟಾರಕರ ಮಕ್ಕಳು, ರತ್ನಮಾಲಾಕರ್ತರ ಅಣ್ಣಂದಿರು)

**ಯೋ ವೈ ಶಾಸ್ತ್ರಚತುಷ್ಟಯೇಽತಿನಿಪುಣಃ ದೂರೀಕೃತಾಜ್ಞಾನಕಃ**
**ದುರ್ವಾದೀಂದ್ರವಿದಾರಣೇಽತಿಚತುರಃ ದಾನೇ ತು ಕರ್ಣೋಪಮಃ ।**
**ಗುರ್ವಾನುಗ್ರಹವಾರಿಧಿಃ ಮಯಿ ಪರಂ ಸ್ನೇಹಂ ದಯಾಂ**
**ಚಾಕರೋತ್**
**ಜ್ಯೇಷ್ಠಭ್ರಾತರಮಾಶ್ರಯೇ ಸುಮತಯೇ ಶ್ರೀಶ್ರೀನಿವಾಸಂ**
**ಗುರುಮ್ ॥**

ನಾಲ್ಕೂ ಶಾಸ್ತ್ರಗಳಲ್ಲಿ ಅತಿನಿಪುಣರಾದ, ಅಜ್ಞಾನವನ್ನು ಪರಿಹರಿಸುವ, ದುರ್ವಾದಿಗಳನ್ನು ಖಂಡಿಸುವದರಲ್ಲಿ ಅತಿಚತುರರಾದ, ದಾನಕೊಡುವದರಲ್ಲಿ ಕರ್ಣನಂತಿದ್ದ, ಅನುಗ್ರಹವನ್ನು ಮಾಡುವದರಲ್ಲಿ ಸಾಗರದಂತಿದ್ದ, ನನ್ನಲ್ಲಿ ಪರಮಪ್ರೀತಿಯನ್ನೂ ದಯೆಯನ್ನೂ ತೋರಿಸುವ ನನ್ನ ಅಣ್ಣಂದಿರಾದ ಶ್ರೀನಿವಾಸಾಚಾರ್ಯರನ್ನು ಆಶ್ರಯಿಸುವೆನು.

# ಪಾಂಡುರಂಗಿ ಮನೆತನದ ಟಿಪ್ಪಣಿಕಾರರು
## ಮತ್ತು
## ಪಾಠಪ್ರವಚನ ನಿರತರು

ಪಾಂಡುರಂಗಿ ಮನೆತನದ ಇತಿಹಾಸವು ಕಳೆದ ಐದುನೂರು ವರ್ಷಗಳಿಂದ ತಿಳಿದುಬರುತ್ತದೆ. ಈಗ ತಿಳಿದುಬರುವ ಮಾಹಿತಿಯಂತೆ ಶ್ರೀಆನಂದಭಟ್ಟಾರಕರು ಮೂಲಪುರುಷರೆಂದು ಪರಿಗಣಿಸಲ್ಪಡುತ್ತಾರೆ. ಈ ಮನೆತನದವರು ಹಿಂದೆ ಬಹಳ ಕಾಲ ಪಾಂಡುರಂಗಕ್ಷೇತ್ರ ಅಂದರೆ ಪಂಢರಪುರದಲ್ಲಿ ಇದ್ದದ್ದರಿಂದ ಇವರಿಗೆ ಈ ಹೆಸರು ಬಂದಿದೆ. ಇವರ ಪೂರ್ವಜರಲ್ಲಿ ಓರ್ವರಿಗೆ ಪಾಂಡುರಂಗನ ಪ್ರತ್ಯಕ್ಷದರ್ಶನ ವಾದುದರಿಂದ ಈ ಹೆಸರು ಬಂದಿದೆ ಎಂಬ ಪರಂಪರೆಯೂ ಇದೆ. ಪಾಂಡುರಂಗ ಕ್ಷೇತ್ರಕ್ಕೆ ಶಾಸನಗಳಲ್ಲಿ ಪಾಂಡುರಂಗಪಲ್ಲೀ ಎಂಬ ಹೆಸರಿದೆ. ಅದರ ಸಂಕ್ಷಿಪ್ತ ರೂಪವೇ ಪಾಡುರಂಗಿ ಎಂದಾಗಿದೆ. ಆನಂದಭಟ್ಟಾರಕರ ಕಾಲಕ್ಕೂ ಅದಕ್ಕೂ ಮೊದಲೂ ಈ ಮನೆತನಕ್ಕೆ ಇದೇ ಹೆಸರು ಇದೆ. ಪುಣತಾಂಬೆಗೆ ಹೋಗುವುದ ಕ್ಕಿಂತ ಮೊದಲು ಈ ಮನೆತನದವರು ಪಂಢರಪುರದಲ್ಲಿ ಇದ್ದರು. ಆನಂದಭಟ್ಟರು ಪುಣತಾಂಬೆಯಲ್ಲಿ ಇದ್ದರು.

ಈ ಮನೆತನದವರು ಶ್ರೀಪದ್ಮನಾಭತೀರ್ಥರ ಪೂರ್ವಾಶ್ರಮದ ವಂಶದ ವರೆಂದೂ ಶ್ರೀಪದ್ಮನಾಭತೀರ್ಥರು ಮೂಲತಃ ಪೈಠಣದವರಾಗಿದ್ದು ಆಶ್ರಮ ವಾದ ಮೇಲೆ ಪಂಢರಪುರಕ್ಕೆ ಬಂದು ಈಗ ಅಲ್ಲಿದ್ದ ಮಠವನ್ನು ಕಟ್ಟಿಸಿದರೆಂದೂ ಅಲ್ಲಿ ಶ್ರೀಮಧ್ವಾಚಾರ್ಯರನ್ನು ಬರಮಾಡಿಕೊಂಡಿದ್ದರೆಂದೂ ಶ್ರೀಪದ್ಮನಾಭತೀರ್ಥರ ಪೂರ್ವಾಶ್ರಮದ ಈ ಮನೆತನದವರೂ ಆಗಿನಿಂದ ಪಂಢರಪುರದಲ್ಲಿಯೇ ನೆಲಿಸಿದ್ದು ನಂತರ ಪುಣತಾಂಬೆಗೆ ಹೋಗಿ ನೆಲಿಸಿದರೆಂದೂ ಒಂದು ಪರಂಪರೆಯಿದೆ. ಪಂಢರಪುರದ ಈ ಮಠವನ್ನು ಶ್ರೀವಿದ್ಯಾಧೀಶರು ತಮ್ಮ ಪೂರ್ವಾಶ್ರಮದಲ್ಲಿಯೇ ಜೀರ್ಣೋದ್ಧಾರಮಾಡಿದ ಉಲ್ಲೇಖವಿದೆ. ಆ ಮಠಕ್ಕೆ ಶ್ರೀಮಧ್ವಾಚಾರ್ಯರು ಬಂದುಹೋದ, ಅವರ ಪಾದಧೂಳಿಯಿಂದ ಆ ಸ್ಥಾನವು ಪವಿತ್ರವಾದ ಉಲ್ಲೇಖವೂ ಇದೆ.

ಪುಣತಾಂಬೆಗೆ ಯಾವಾಗ ಹೋದರು ತಿಳಿದುಬರುವದಿಲ್ಲ. ಅಲ್ಲಿ ಐದಾರು ತಲೆಮಾರು ಇದ್ದಂತೆ ಕಾಣುತ್ತದೆ. ಮುಂದೆ ಪುಣತಾಂಬೆಯ ಮೇಲೆ ಮುಸಲ್ಮಾನರ ದಾಳಿಯಾದಾಗ ಕ್ರಿ.ಶ. ೧೬೦೦ ಸುಮಾರಿಗೆ ಮತ್ತೆ ಪಂಢರಪುರಕ್ಕೆ ಬಂದು

ನೆಲಸಿದರು. ಅಲ್ಲಿಂದ ಮುಂದೆ ಶೂರ್ಪಾಲಿಯಲ್ಲಿ ಕೆಲಕಾಲವಿದ್ದು ನಂತರ ಧಾರವಾಡ ಜಿಲ್ಲೆಯ ಮಾಸೂರು ಮತ್ತು ಬೇರೆ ಬೇರೆ ಗ್ರಾಮಗಳಲ್ಲಿ ನೆಲಸಿದರು. ಮೈಸೂರಿನಲ್ಲಿಯೂ ಒಂದು ಮನೆತನವು ನೆಲೆಸಿತು. ದಕ್ಷಿಣ ಭಾರತದಲ್ಲಿಯ ತಂಜಾವೂರು ಕುಂಭಕೋಣಗಳ ಕಡೆಗೂ ಕೆಲವರು ಹೋದರು. ಆಂಧ್ರದಲ್ಲಿಯ ರಾಜಮಹೇಂದ್ರಿ ವಿಜಯನಗರಗಳ ಕಡೆಗೂ ಕೆಲವರು ಹೋದರು. ಈಗ ಪಾಂಡುರಂಗಿ ಮನೆತನದವರು ಉತ್ತರ ಕರ್ನಾಟಕ ಮೈಸೂರು ಬೆಂಗಳೂರು ಮದ್ರಾಸ್ ಕುಂಭಕೋಣಮ್ ತಂಜಾವೂರು ಮತ್ತು ವಿಶಾಖಪಟ್ಟಣಗಳಲ್ಲಿ ನೆಲೆಸಿರುವರು.

## ಪಾಂಡುರಂಗಿ ಆನಂದಭಟ್ಟಾರಕರು (ಕ್ರಿ.ಶ. ೧೫೦೦ ರಿಂದ ೧೫೮೦)

ಪಾಂಡುರಂಗಿ ಆನಂದಭಟ್ಟಾರಕರು ಗೋದಾವರೀತೀರದ ಪುಣ್ಯಸ್ತಂಭಪುರ ಎಂಬಲ್ಲಿ ವಾಸವಾಗಿದ್ದರು. ಇವರ ತಂದೆಯವರು ತ್ರಿವಿಕ್ರಮಾಚಾರ್ಯರು. ಇವರು ಪುಣ್ಯಸ್ತಂಭಪುರದಲ್ಲಿಯ ತ್ರಿವಿಕ್ರಮ ದೇವಾಲಯದಲ್ಲಿ ಪಾಠಪ್ರವಚನ ಮಾಡಿಕೊಂಡು ಇರುತ್ತಿದ್ದರು. ಈ ಪುಣ್ಯಸ್ತಂಭಪುರವು ಇಂದಿನ ಮಹಾರಾಷ್ಟ್ರದ ಅಹಮ್ಮದನಗರ ಜಿಲ್ಲೆಯಲ್ಲಿಯ ಪುಣತಾಂಬಾ ಎಂಬ ಗ್ರಾಮವಾಗಿದೆ. ಆನಂದ ಭಟ್ಟರಿಗೆ ತಿಮ್ಮಣ್ಣ ಭಟ್ಟೋಪಾಧ್ಯಾಯರೆಂಬ ಅಣ್ಣಂದಿರಿದ್ದರು. ಇವರೂ ದೊಡ್ಡ ವಿದ್ವಾಂಸರಾಗಿದ್ದರು. ಬಾಲ್ಯದಲ್ಲಿ ಆನಂದಭಟ್ಟರು ಅಷ್ಟು ಓದಿರಲಿಲ್ಲ. ಆದ್ದರಿಂದ ಇವರ ಅತ್ತಿಗೆಯವರು ಇವರಿಗೆ ಮನೆಗೆಲಸ ಹಚ್ಚುತ್ತಿದ್ದರು. ಒಂದು ದಿನ ಇವರೂ ಪಾಠ ನಡೆಯುತ್ತಿದ್ದಲ್ಲಿ ಹೋಗಿ ಕುಳಿತಾಗ ನಿನಗೇನು ಅಲ್ಲಿ ಕೆಲಸ? ಎಂದು ಅತ್ತಿಗೆಯವರು ಅವಹೇಳನ ಮಾಡಿದರು. ಆಗ ಆನಂದಭಟ್ಟರು ಊರ ಮುಂದಿನ ತೋಟದ ಬಾವಿಯಲ್ಲಿ ಬೀಳಲು ಹೋದರು. ಅಲ್ಲಿಯ ವೃದ್ಧ ತೋಟಗನು ನಿಮ್ಮ ಕುಲದೇವರಿಗೆ ನಡೆದುಕೋ ಎಂದು ಬುದ್ಧಿಹೇಳಿದನು. ಆದನ್ನು ಕೇಳಿ ಆನಂದ ಭಟ್ಟರು ಕೊಲ್ಹಾಪುರಕ್ಕೆ ಹೋದರು. ಅಲ್ಲಿ ಹನ್ನೆರಡು ವರುಷ ಮಹಾಲಕ್ಷ್ಮಿಯ ತಪಸ್ಸು ಮಾಡಿದರು. ಒಂದು ರಾತ್ರಿ ಮಹಾಲಕ್ಷ್ಮಿಯು ಸ್ವಪ್ನದಲ್ಲಿ ಬಂದು ನಾಳೆ ಸರ್ಪರೂಪದಿಂದ ದರ್ಶನಕೊಡುವೆನು. ನನ್ನನ್ನು ಎಷ್ಟು ಬೆರಳುಗಳಿಂದ ಮುಟ್ಟುವಿಯೋ ಅಷ್ಟು ತಲೆಮಾರು ನಿನ್ನ ವಂಶದಲ್ಲಿ ವಿದ್ಯೆ ಸಂತತಿ ಐಶ್ವರ್ಯ ಸಮೃದ್ಧವಾಗಿರುವವು ಎಂದು ಹೇಳಿದಳು. ಮರುದಿನ ಆನಂದಭಟ್ಟರು ನಿತ್ಯದಂತೆ ತಪಸ್ಸನ್ನು ಆರಂಭಿಸಿದರು. ಅಂದಿನ ತಪಸ್ಸಿನ ಸಮಯ ಮುಗಿಯುವ ಹೊತ್ತಿಗೆ

ಒಂದು ದೊಡ್ಡ ಸರ್ಪವು ಕಾಣಿಸಿಕೊಂಡಿತು. ಅದು ಮೂರುಸಲ ಮಹಾಲಕ್ಷ್ಮಿಯ ಗರ್ಭಗುಡಿಯಲ್ಲಿ ಪ್ರದಕ್ಷಿಣೆ ಹಾಕಿ ಬಿಲದಲ್ಲಿ ಪುನಃ ಪ್ರವೇಶಿಸಲು ಆರಂಭಿಸಿತು. ಆಗ ಆನಂದಭಟ್ಟರಿಗೆ ನಿನ್ನೆ ರಾತ್ರಿ ಕನಸಿನಲ್ಲಿ ಲಕ್ಷ್ಮೀದೇವಿಯು ಹೇಳಿದ್ದು ನೆನಪಾಯಿತು. ಕೂಡಲೇ ಅವರು ಅದನ್ನು ಮುಟ್ಟಲು ಧಾವಿಸಿದರು. ಎರಡೂ ಕೈಗಳ ಹತ್ತು ಬೆರಳುಗಳಿಂದ ಒಮ್ಮೆ ಮುಟ್ಟಿದರು. ಅಷ್ಟರಲ್ಲಿ ಹಾವು ಬಿಲವನ್ನು ಸೇರಿತು. ಇನ್ನೊಂದುಸಲ ಕಿರುಬೆರಳು ಮಾತ್ರ ತಾಕಿತು. ಹೀಗೆ ಆನಂದಭಟ್ಟರು ಹನ್ನೊಂದು ಬೆರಳುಗಳಿಂದ ಸರ್ಪರೂಪದಿಂದ ಬಂದ ಲಕ್ಷ್ಮಿಯನ್ನು ಮುಟ್ಟಿ ಹನ್ನೊಂದು ತಲೆಮಾರು ವಿದ್ಯೆ ಸಂತತಿ ಐಶ್ವರ್ಯಗಳನ್ನು ಪಡೆದರು. ಇದೇ ರೀತಿ ಮುಂದೆ ಪಾಂಡುರಂಗೀ ಮನೆತನದಲ್ಲಿ ಅನೇಕರು ಮಹಾಲಕ್ಷ್ಮಿಯ ತಪಸ್ಸನ್ನು ಮಾಡಿ ಅನುಗ್ರಹ ಪಡೆದಿರುವರು. ಇತ್ತೀಚೆಗೆ ತಿರುಪತಿ ಹುಚ್ಚಾಚಾರ್ಯರೆಂದು ಪ್ರಸಿದ್ಧರಾದ ಪಾಂಡುರಂಗಿ ಹುಚ್ಚಾಚಾರ್ಯರು ಈ ರೀತಿ ಲಕ್ಷ್ಮೀದೇವಿಯ ಅನುಗ್ರಹವನ್ನು ಪಡೆದವರಲ್ಲಿ ಒಬ್ಬರು.

ಹೀಗೆ ಲಕ್ಷ್ಮೀದೇವಿಯ ಅನುಗ್ರಹಪಡೆದು ಆನಂದಭಟ್ಟರು ಕಾಶಿಗೆ ತೆರಳಿದರು. ಅಲ್ಲಿ ಚತುಃಶಾಸ್ತ್ರಗಳ ಅಧ್ಯಯನ ಮಾಡಿದರು. ಕಾಶಿಯಿಂದ ಮರಳಿ ಬರುವಾಗ ಓರ್ವಪಂಡಿತನು ಹದಿನಾಲ್ಕು ಮಣೆಗಳನ್ನು ಹಾಕಿಕೊಂಡು ಕುಳಿತು ತಾನು ಚತುರ್ದಶ ವಿದ್ಯಾಪಾರಂಗತನೆಂದೂ ಒಂದೊಂದರಲ್ಲಿ ಸೋಲಿಸಿದರೆ ಒಂದೊಂದು ಮಣೆಯಿಂದ ಕೆಳಗಿಳಿಯುತ್ತೇನೆಂದೂ ಈ ದಾರಿಯಿಂದ ಹೋಗುವ ಪಂಡಿತರಿಗೆಲ್ಲ ಇದೊಂದು ಆಹ್ವಾನವೆಂದೂ ಹೇಳುತ್ತಿದ್ದನು. ಆನಂದಭಟ್ಟರು ಆ ಪಂಡಿತನನ್ನು ಹದಿನಾಲ್ಕು ವಿದ್ಯೆಗಳಲ್ಲಿ ಸೋಲಿಸಿ ಎಲ್ಲ ಮಣೆಗಳಿಂದಲೂ ಅವನನ್ನು ಕೆಳಗಿಳಿಸಿ ಅವನಿಂದ ಜಯಪತ್ರವನ್ನು ಪಡೆದರು.

ಆನಂದಭಟ್ಟರು ಶ್ರೀರಘೂತ್ತಮತೀರ್ಥರಲ್ಲಿಯೂ ತಮ್ಮ ತಂದೆ ಮತ್ತು ಅಣ್ಣಂದಿರಲ್ಲಿಯೂ ವೇದಾಂತಶಾಸ್ತ್ರದ ಅಧ್ಯಯನವನ್ನು ಮಾಡಿದರು. ಶ್ರೀವ್ಯಾಸರಾಜರ ನ್ಯಾಯಾಮೃತಗ್ರಂಥಕ್ಕೆ ಉತ್ತರರೂಪವಾಗಿ ಮಧುಸೂಧನ ಸರಸ್ವತೀ ಎಂಬ ಅದ್ವೈತ ವಿದ್ವಾಂಸರು 'ಅದ್ವೈತಸಿದ್ಧಿ' ಎಂಬ ಗ್ರಂಥವನ್ನು ಬರೆದರು. ಇದನ್ನು ಖಂಡಿಸಿ ಆನಂದಭಟ್ಟಾರಕರು ನ್ಯಾಯಾಮೃತಕಂಟಕೋದ್ಧಾರ ಎಂಬ ಗ್ರಂಥವನ್ನು ಬರೆದರು. ನ್ಯಾಯಾಮೃತಕ್ಕೆ ವ್ಯಾಖ್ಯಾನರೂಪವಾದ ಈ ಗ್ರಂಥವು ಶ್ರೇಷ್ಠವಾದ ವಾದಗ್ರಂಥವಾಗಿದೆ. ಇದೇ ಕಾಲಕ್ಕೆ ಇವರ ಊರಾದ ಪುಣತಾಂಬೆ

ಯಲ್ಲಿಯೇ ಇದ್ದ ವ್ಯಾಸರಾಮಾಚಾರ್ಯರು 'ನ್ಯಾಯಾಮೃತತರಂಗಿಣೀ' ಎಂಬ ಗ್ರಂಥವನ್ನೂ ಕುಂಭಕೋಣದಲ್ಲಿದ್ದ ಶ್ರೀವಿಜಯೀಂದ್ರತೀರ್ಥರು 'ನ್ಯಾಯಾಮೃತಾ-ಮೋದ'ವೆಂಬ ಗ್ರಂಥವನ್ನೂ ಬರೆದರು. ಈ ಮೂರರಲ್ಲಿಯೂ ಅದ್ವೈತ ಸಿದ್ಧಿಯನ್ನು ಬಲವಾಗಿ ಖಂಡಿಸಲಾಗಿದೆ. ಈ ಗ್ರಂಥದಿಂದಾಗಿ ಆನಂದಭಟ್ಟರು ಕಂಟಕೋದ್ಧಾರಕರ್ತರೆಂದೇ ಪ್ರಸಿದ್ಧರಾಗಿದ್ದಾರೆ.

ಉಡುಪಿ ಸೋದೆಮಠಾಧೀಶರಾದ ಶ್ರೀವಾದಿರಾಜತೀರ್ಥರಿಗೆ ಆನಂದಭಟ್ಟರ ಮೇಲೆ ಬಹಳ ವಾತ್ಸಲ್ಯವಿದ್ದಿತು. ಶ್ರೀವಾದಿರಾಜರು ಉತ್ತರಭಾರತದ ಸಂಚಾರ ವನ್ನು ಮುಗಿಸಿಕೊಂಡು ಉಡುಪಿಗೆ ಮರಳುತ್ತಿರುವಾಗ ಓರ್ವ ಅದ್ವೈತಪಂಡಿತನು ಒಂದು ಸ್ಥಳವನ್ನು ನಿರ್ದೇಶಿಸಿ ಅಲ್ಲಿಗೆ ಬರಬೇಕೆಂದು ಅವರನ್ನು ವಾದಕ್ಕೆ ಕರೆದನು. ಶ್ರೀವಾದಿರಾಜರು ಅಲ್ಲಿಗೆ ಹೋದರು. ಆದರೆ ಅವನು ಅಲ್ಲಿಗೆ ಬರಲಿಲ್ಲ. ಮತ್ತೆ ಮೂರುದಿನಗಳ ಅವಧಿಯನ್ನು ಕೇಳಿದನು. ಅನಂತರವೂ ಬರಲಿಲ್ಲ. ಶ್ರೀವಾದಿ-ರಾಜರು ಉಡುಪಿಯಲ್ಲಿ ಪರ್ಯಾಯಕ್ಕೆ ಕುಳಿತುಕೊಳ್ಳಲು ಹೋಗಬೇಕಾದ್ದರಿಂದ ಪಾಂಡುರಂಗಿ ಆನಂದಭಟ್ಟಾರಕರಿಗೆ ಮಂತ್ರಾಕ್ಷತೆ ಕೊಟ್ಟು ಆ ವಾದಿಯನ್ನು ಜಯಿಸಿ ಬರಬೇಕೆಂದು ಹೇಳಿ ಅವರನ್ನು ಅಲ್ಲಿಯೇ ಇರಿಸಿ ತಾವು ಪ್ರಯಾಣ ಮಾಡಿದರು. ಮುಂದೆ ಆನಂದಭಟ್ಟಾರಕರು ಆ ವಾದಿಯನ್ನು ಜಯಿಸಿ ಜಯ ಪತ್ರವನ್ನು ತೆಗೆದುಕೊಂಡುಹೋಗಿ ಶ್ರೀವಾದಿರಾಜರಿಗೆ ಸಮರ್ಪಿಸಿದರು. ಶ್ರೀವಾದಿ-ರಾಜರು ಆನಂದಭಟ್ಟಾರಕರಿಗೆ ಬೆಳ್ಳಿಯ ಹಯಗ್ರೀವದೇವರ ಮೂರ್ತಿ ಮತ್ತು ರತ್ನಗರ್ಭಶಾಲಿಗ್ರಾಮವನ್ನು ಕೊಟ್ಟು ಅನುಗ್ರಹಿಸಿದರು. ನಮ್ಮಂಥ ಪುತ್ರನು ನಿಮಗೆ ಆಗುವನು ಎಂದು ಆಶೀರ್ವದಿಸಿದರು. ಈ ಘಟನೆಯು ಶ್ರೀವಾದಿರಾಜರ ಮೂರನೆಯ ಪರ್ಯಾಯಕಾಲದಲ್ಲಿ ನಡೆದಂತೆ ಕಾಣುತ್ತದೆ. ಹೀಗೆ ಶ್ರೀವಾದಿ-ರಾಜರ ಅನುಗ್ರಹದಿಂದ ಪಡೆದ ಪುತ್ರರೇ ಆನಂದಭಟ್ಟರ ಎರಡನೆಯ ಮಕ್ಕಳಾದ ನರಸಿಂಹಾಚಾರ್ಯರು. ಇವರೇ ಮುಂದೆ ಶ್ರೀವಿದ್ಯಾಧೀಶರಾಗುವರು. ಶ್ರೀವಾದಿ-ರಾಜಗುರುವರ ಚರಿತೆಯಲ್ಲಿ ಈ ಘಟನೆಯ ಉಲ್ಲೇಖವಿದೆ.

ಆನಂದಭಟ್ಟಾರಕರಿಗೆ ಶ್ರೀನಿವಾಸಾಚಾರ್ಯರೆಂಬ ಜ್ಯೇಷ್ಠಪುತ್ರರಾದರು. ಇವರ ನಂತರ ಅನೇಕವರ್ಷ ಮಕ್ಕಳಾಗಲಿಲ್ಲ. ಆಗ ಇವರ ಕುಲದೇವರಾದ ಶ್ರೀನರಸಿಂಹದೇವರಿಗೆ ನಡೆದುಕೊಂಡರು. ಶ್ರೀನರಸಿಂಹದೇವರ ಅನುಗ್ರಹದಿಂದಲೂ ಮೇಲೆ ಹೇಳಿದಂತೆ ಶ್ರೀವಾದಿರಾಜರ ಅನುಗ್ರಹದಿಂದಲೂ ಎರಡನೆಯ ಮಕ್ಕಳಾದ

ನರಸಿಂಹಾಚಾರ್ಯರು ಹುಟ್ಟಿದರು. ಇವರಿಗೆ ಸಕಾಲದಲ್ಲಿ ಉಪನಯನಮಾಡಿ ಆನಂದಭಟ್ಟಾರಕರು ಸಕಲಶಾಸ್ತ್ರಾಭ್ಯಾಸ ಮಾಡಿಸಿದರು. ಹದಿನಾರು ವರುಷದಲ್ಲಿಯೇ ಇವರು ದೊಡ್ಡ ವಿದ್ವಾಂಸರಾದರು. ಇವರಿಗೆ ವಿವಾಹಮಾಡಿ ಗೃಹಸ್ಥಾಶ್ರಮಿಗಳನ್ನಾಗಿ ಮಾಡಿದರು. ತ್ರಿವಿಕ್ರಮ ದೇವಾಲಯದಲ್ಲಿ ಇವರಿಂದಲೇ ಪಾಠ ಹೇಳಿಸಿ ಸಂತೋಷಪಟ್ಟರು. ಇವರು ಶಿವಪಂಡಿತ, ವಿಶ್ವಪಂಡಿತ, ಗೋಲಿಂಗ ಪಂಡಿತ ಮೊದಲಾದ ಪಂಡಿತರನ್ನು ವಾದದಲ್ಲಿ ಸೋಲಿಸಿದ್ದನ್ನು ಕಂಡು ಸಂತೋಷಪಟ್ಟರು. ಆನಂದಭಟ್ಟಾರಕರ ಮೂರನೆಯ ಮಕ್ಕಳು ಕೇಶವಭಟ್ಟಾರಕರು. ಇವರು ನರಸಿಂಹಾಚಾರ್ಯರಿಗಿಂತ ಅಂದರೆ ಶ್ರೀವಿದ್ಯಾಧೀಶರಿಗಿಂತ ವಯಸ್ಸಿನಲ್ಲಿ ಬಹಳ ಚಿಕ್ಕವರು. ಇವರು ಆನಂದಭಟ್ಟಾರಕರ ಅಣ್ಣಂದಿರಾದ ತಿಮ್ಮಣ್ಣಭಟ್ಟೋಪಾಧ್ಯಾಯರ ಮಕ್ಕಳೆಂದೂ ಆದರೆ ಆನಂದಭಟ್ಟಾರಕರೇ ಇವರ ಪಾಲನ ಪೋಷಣೆ ಮಾಡಿ ದೊಡ್ಡವರನ್ನಾಗಿ ಮಾಡಿದ್ದರಿಂದ ಇವರು ಆನಂದಭಟ್ಟರ ಮಕ್ಕಳೆಂದೇ ಪ್ರಸಿದ್ಧಿಯಾಯಿತೆಂದೂ ಒಂದು ಪರಂಪರೆಯಿದೆ. ಹೀಗೆ ಶ್ರೀನಿವಾಸಾಚಾರ್ಯ, ನರಸಿಂಹಾಚಾರ್ಯ, ಕೇಶವಾಚಾರ್ಯರೆಂಬ ಮೂರು ಜನ ವಿದ್ವಾಂಸರಾದ ಮಕ್ಕಳನ್ನು ಪಡೆದು, ನರಸಿಂಹಾಚಾರ್ಯರು ಮುಂದೆ ಶ್ರೀವಿದ್ಯಾಧೀಶರಾದ್ದರಿಂದ ಅಂಥ ಯತಿಶ್ರೇಷ್ಠರ ಪೂರ್ವಾಶ್ರಮದ ತಂದೆಯೆನಿಸಿಕೊಂಡು ಶ್ರೀವಾದಿರಾಜರ ಅನುಗ್ರಹಕ್ಕೆ ಪಾತ್ರರಾಗಿದ್ದು ಕಂಟಕೋದ್ಧಾರವೆಂಬ ಗ್ರಂಥದಿಂದ ಶ್ರೀವ್ಯಾಸರಾಜರ ಸೇವೆಯನ್ನು ಮಾಡಿ ಎಂಬತ್ತು ವರ್ಷಕಾಲ ಮಧ್ವಶಾಸ್ತ್ರದ ಸೇವೆ ಮಾಡುತ್ತ ಜೀವಿಸಿದ್ದ ಆನಂದಭಟ್ಟಾರಕರು ಪರಮಾತ್ಮನ ಪಾದವನ್ನು ಸೇರಿದರು. ಇಂಥ ಪುಣ್ಯಪುರುಷರು ಮೂಲಪುರುಷರಾಗಿದ್ದ ಪಾಂಡುರಂಗಿ ಮನೆತನದಲ್ಲಿ ಇವರ ಮತ್ತು ಶ್ರೀವಿದ್ಯಾಧೀಶರ ಪುಣ್ಯದ ಬಲದಿಂದ ಅನೇಕ ತಪಸ್ವಿಗಳೂ ವಿದ್ವಾಂಸರೂ ಆಗಿ ಹೋಗಿದ್ದಾರೆ. ಈ ಮನೆತನದವರು ಇಂದಿಗೂ ಯಥಾಶಕ್ತಿ ಜ್ಞಾನಕಾರ್ಯ, ಧರ್ಮಕಾರ್ಯಗಳಲ್ಲಿ ನಿರತರಾಗಿದ್ದಾರೆ. ಈಗಿರುವವರು ಇವರಿಂದ ಹದಿಮೂರನೆಯ ತಲೆಮಾರಿನವರು.

## ಪಾಂಡುರಂಗಿ ಶ್ರೀನಿವಾಸಾಚಾರ್ಯರು (ಕ್ರಿ.ಶ. ೧೫೪೦–೧೬೦೦)

ಇವರು ಆನಂದಭಟ್ಟಾರಕರ ಜ್ಯೇಷ್ಠಪುತ್ರರು. ಇವರ ಉಲ್ಲೇಖವು ವಿದ್ಯಾಧೀಶ ವಿಜಯದ ಮೊದಲನೆಯ ಸರ್ಗದಲ್ಲಿ ಬಂದಿದೆ. ಈ ಜ್ಯೇಷ್ಠ ಪುತ್ರನೊಬ್ಬನೇ ಸಾಲದು ಎಂದು ಶ್ರೀನರಸಿಂಹದೇವರ ಸೇವೆಮಾಡಿ ನರಸಿಂಹಾಚಾರ್ಯರೆಂಬ

ಇನ್ನೊಬ್ಬ ಮಗನನ್ನು ಪಡೆದರು ಎಂದು ಅಲ್ಲಿ ಉಲ್ಲೇಖ ಬಂದಿದೆ. ಕೇಶವ ಭಟ್ಟಾರಕರೂ ತಮ್ಮ ಶೇಷವಾಕ್ಯಾರ್ಥಚಂದ್ರಿಕಾ, ಋಗ್ಭಾಷ್ಯ ಟಿಪ್ಪಣೀ ಮತ್ತು ಪ್ರಮಾಣಲಕ್ಷಣ ಟಿಪ್ಪಣಿಗಳ ಆರಂಭದಲ್ಲಿ ಇವರಿಗೆ ಭಕ್ತಿಯಿಂದ ನಮಸ್ಕರಿಸುತ್ತಾರೆ. ಕೇಶವಾಚಾರ್ಯರ ಮಕ್ಕಳಾದ ರತ್ನಮಾಲಾಕರ್ತೃ ನರಸಿಂಹಾಚಾರ್ಯರೂ ತಮ್ಮ ವಾಕ್ಯಾರ್ಥರತ್ನಮಾಲಾದ ಆರಂಭದಲ್ಲಿ ಭಕ್ತಿಯಿಂದ ಇವರಿಗೆ ನಮಸ್ಕರಿಸುತ್ತಾರೆ. ಇವರು ತಮ್ಮ ಪಿತೃವ್ಯ ಅಂದರೆ ಕಕ್ಕಂದಿರು ಎಂದು ಹೇಳುತ್ತಾರೆ. ಆದ್ದರಿಂದ ಇವರು ಕೇಶವಭಟ್ಟಾರಕರ ಅಣ್ಣಂದಿರು ತಂದೆಯುವರಲ್ಲ. ಇವರು ಅಗ್ನಿಹೋತ್ರವನ್ನು ಇಟ್ಟಿದ್ದರೆಂದೂ ಇವರಿಗೆ ಅನೇಕ ಶಿಷ್ಯರಿದ್ದರೆಂದೂ ರತ್ನಮಾಲಾದಲ್ಲಿ ವರ್ಣಿಸಿದ್ದಾರೆ.

ಇವರು ಶ್ರೀಜಯತೀರ್ಥರ ತತ್ವಪ್ರಕಾಶಿಕಾಕ್ಕೆ ಹರಿತತ್ವಸುಬೋಧಿನೀ ಎಂಬ ಟಿಪ್ಪಣಿಯನ್ನು ಬರೆದಿರುವರು. ಇದರ ಕೊನೆಯಲ್ಲಿ

ಆನಂದಾಚಾರ್ಯಪಿತೃತಃ ಶ್ರುತ್ವಾ ತತ್ವಪ್ರಕಾಶಿಕಾಮ್ ।
ಶ್ರೀನಿವಾಸೋಽಕರೋತ್ ಟೀಕಾಂ ಹರಿತತ್ವಸುಬೋಧಿನೀಮ್ ॥

'ಇತಿ ಶ್ರೀಮದ್ರಘೂತ್ತಮ ಪೂಜ್ಯಪಾದ ಶಿಷ್ಯೇಣ ಆನಂದಾಚಾರ್ಯ ಸುತೇನ ಶ್ರೀನಿವಾಸೇನ ಕೃತಾಯಾಂ ತತ್ವಸುಬೋಧಿನ್ಯಾಂ ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ ಎಂದಿದೆ'. ಇದರಿಂದ ಇವರು ಆನಂದಭಟ್ಟಾರಕರ ಮಕ್ಕಳೆಂಬುದೂ ಶ್ರೀರಘೂತ್ತಮತೀರ್ಥರು ಮತ್ತು ತಮ್ಮ ತಂದೆ ಆನಂದಭಟ್ಟಾರಕರಲ್ಲಿ ಓದಿದ್ದರೆಂದೂ ತಿಳಿದುಬರುತ್ತದೆ. ಇವರ ಟಿಪ್ಪಣಿಯು ಬಹುಮಟ್ಟಿಗೆ ತತ್ವಪ್ರಕಾಶಿಕಾಭಾವ ಬೋಧವನ್ನು ಹೋಲುತ್ತದೆ. ವಿದ್ಯಾಧೀಶವಿಜಯದಲ್ಲಿ ಮೊದಲನೆಯ ಸರ್ಗದಲ್ಲಿ ಇವರ ಉಲ್ಲೇಖ ಬಂದರೂ ಮುಂದಿನ ಸರ್ಗಗಳಲ್ಲಿ ಬರುವದಿಲ್ಲ. ಕೇಶವಭಟ್ಟಾರಕರ ಉಲ್ಲೇಖವು ಎರಡು-ಮೂರುಸಾರೆ ಬರುವದು. ಇವರದು ಒಮ್ಮೆ ಮಾತ್ರ ಬಂದಿದೆ. ಕೇಶವಭಟ್ಟಾರಕರೂ ಅವರ ಮಕ್ಕಳಾದ ರತ್ನಮಾಲಾಕಾರರೂ ಇವರನ್ನು ಗೌರವದಿಂದ ಉಲ್ಲೇಖಿಸುವರು. ಇದರಿಂದ ಇವರ ತಮ್ಮಂದಿರಾದ ನರಸಿಂಹಾಚಾರ್ಯರೂ (ಶ್ರೀವಿದ್ಯಾಧೀಶರ ಪೂರ್ವಾಶ್ರಮದ ಹೆಸರು) ಕೇಶವಾಚಾರ್ಯರೂ ಪುಣತಾಂಬೆಯ ಮೇಲೆ ದಾಳಿಯಾಗಿ ಆ ನಗರವನ್ನು ಬಿಟ್ಟಾಗ ಇವರೂ ಬಿಟ್ಟಿರಬೇಕೆಂದೂ ಆದರೆ ಅವರೊಡನೆ ಪೈಠಣ, ಪಂಢರಪುರಗಳಿಗೆ ಹೋಗದೆ ಬೇರೆ ಕಡೆಗೆ ಹೋಗಿರಬಹು

ದೆಂದೂ ಊಹಿಸಬಹುದು. ಇವರು ರಾಜಮಹೇಂದ್ರಿಯ ಹತ್ತಿರ ಸಪ್ತಗೋದಾವರೀ ಪ್ರದೇಶಕ್ಕೆ (ಕೋಣಸೀಮೆಗೆ) ಹೋಗಿ ನೆಲಸಿದರೆಂದು ಪರಂಪರೆಯಿದೆ. ವಿಶಾಖಪಟ್ಟಣ, ವಿಜಯನಗರಮ್, ಗುಂಟೂರುಗಳಲ್ಲಿ ಕೆಲವು ಪಾಂಡುರಂಗಿ ಮನೆತನಗಳು ಈಗಲೂ ಇವೆ. ಬೆಂಗಳೂರಿನಲ್ಲಿದ್ದ ಸರ್ವೆಂಟ್ಸ್ ಆಫ್ ಇಂಡಿಯಾ ನಾಯಕರ ಗುಂಪಿನಲ್ಲಿ ಒಬ್ಬರಾದ ಪಿ. ಕೋದಂಡರಾಯರು ಇವರ ಸಂತತಿಗೆ ಸೇರಿದವರು. ವಿಶಾಖಪಟ್ಟಣದಲ್ಲಿದ್ದ ಸುಪ್ರಸಿದ್ಧ ವಕೀಲರಾದ ಪಿ. ನರಸಿಂಗರಾಯರು ಕೋದಂಡರಾಯರ ತಮ್ಮಂದಿರು. ಈ ಪಿ. ನರಸಿಂಗರಾಯರ ಮಕ್ಕಳು ಮತ್ತು ಈ ಸಂತತಿಗೆ ಸೇರಿದ ಇನ್ನೂ ಕೆಲವು ಪಾಂಡುರಂಗಿಯವರು ವಿಜಯನಗರಮ್, ವಿಶಾಖಪಟ್ಟಣ ಮತ್ತು ಹೈದರಾಬಾದಗಳಲ್ಲಿ ಇರುವರು. ಇವರೆಲ್ಲ ತೆಲಗು ಮಾತನಾಡುವರು. ತಾವೆಲ್ಲ ಆನಂದಭಟ್ಟಾರಕರ ಸಂತತಿ ಎಂಬುದನ್ನು ನೆನಸಿಟ್ಟುಕೊಂಡಿರುವರು. ಹೀಗೆ ಆನಂದಭಟ್ಟಾರಕರ, ಜ್ಯೇಷ್ಠ ಪುತ್ರರ ಸಂತತಿಯು ಆಂಧ್ರದಲ್ಲಿ ಮುಂದುವರೆದಿದೆ. ಇವರು ' ತತ್ತ್ವಸಂಗ್ರಹ ' ಎಂಬ ಹೆಸರಿನ ಪ್ರಮೇಯ ಗ್ರಂಥವೊಂದನ್ನು ಬರೆದಂತೆಯೂ ತಿಳಿದುಬರುತ್ತದೆ.

### ಪಾಂಡುರಂಗಿ ನರಸಿಂಹಾಚಾರ್ಯರು (ಶ್ರೀವಿದ್ಯಾಧೀಶರು)
### (ಕ್ರಿ.ಶ. ೧೫೫೦–೧೬೩೦)

ಇವರ ಪೂರ್ವಾಶ್ರಮದ ಚರಿತ್ರೆಯನ್ನು ಮಾತ್ರ ಇಲ್ಲಿ ಉಲ್ಲೇಖಿಸುವೆವು. ಸಮಗ್ರಚರಿತ್ರೆಯು ಅಣುವಿದ್ಯಾಧೀಶವಿಜಯ ಮತ್ತು ವಿದ್ಯಾಧೀಶಮಹಿಮಾವರ್ಣನಗಳೆಂಬ ಈಗ ಪ್ರಕಟಿಸಿದ ಸಂಸ್ಕೃತಕಾವ್ಯಗಳಲ್ಲಿ ಬಂದಿದೆ. ಆನಂದಭಟ್ಟಾರಕರಿಗೆ ಶ್ರೀನಿವಾಸಾಚಾರ್ಯರೆಂಬ ಹಿರಿಯಮಕ್ಕಳಿದ್ದದ್ದನ್ನು ಮೇಲೆ ಹೇಳಿದ್ದೇವೆ. ಬಳಿಕ ಅವರು ಒಂದೇ ಸಂತಾನ ಸಾಲದು ಎಂದು ತಮ್ಮ ಕುಲದೇವರಾದ ನರಸಿಂಹದೇವರ ಉಪಾಸನೆಯನ್ನು ಮಾಡಿ ನರಸಿಂಹಾಚಾರ್ಯರೆಂಬ ಈ ಎರಡನೆಯ ಮಕ್ಕಳನ್ನು ಪಡೆದರೆಂದು ಶ್ರೀವಿದ್ಯಾಧೀಶವಿಜಯದಲ್ಲಿ ಹೇಳಿದೆ. ಶ್ರೀವಾದಿರಾಜ ಗುರುವರಚರಿತದಲ್ಲಿ ಶ್ರೀಆನಂದಭಟ್ಟಾರಕರು ಅದ್ವೈತಪಂಡಿತನನ್ನು ಸೋಲಿಸಿ ಅವನಿಂದ ಪಡೆದ ಜಯಪತ್ರವನ್ನು ಶ್ರೀವಾದಿರಾಜರಿಗೆ ಒಪ್ಪಿಸಿ ಅವರ ಅನುಗ್ರಹದಿಂದ ಈ ಪುತ್ರನನ್ನು ಪಡೆದರೆಂದು ಹೇಳಿದೆ.

ಇತ್ಯಾವೇದಯದಾನಂದಃಸೃಷ್ಟಿಃ ಸಂತಾನಕಾಂಕ್ಷಯಾ ।
ವಾದಿರಾಜಂ ಪ್ರಾರ್ಥಯನ್ ಸಃ ಪುತ್ರಾವಾಪ್ತಿಃ ಭವೇದಿತಿ ॥

ಗುರುರಾಜಾದ್ ವರಂ ಪ್ರಾಪ್ಯ ತುಷ್ಟಃ ಸ್ವಗೃಹಮಾಯಯೌ ।
ಗುರೂತ್ತಮಾನುಗ್ರಹೇಣ ಪುತ್ರಂ ಪ್ರಾಪ್ಯ ಕೃತೀ ಮುದಾ ॥

ಎಂದು ಅಲ್ಲಿ ಹೇಳಿದೆ. ಹೀಗೆ ಶ್ರೀನರಸಿಂಹದೇವರು ಮತ್ತು ಶ್ರೀವಾದಿರಾಜರ ಅನುಗ್ರಹದಿಂದ ಹುಟ್ಟಿದ ಈ ನರಸಿಂಹಾಚಾರ್ಯರಿಗೆ ಆನಂದಭಟ್ಟಾರಕರು ಸಕಾಲ ದಲ್ಲಿ ಉಪನಯನ ಮಾಡಿ ಶಾಸ್ತ್ರಪಾಠಗಳನ್ನು ಹೇಳಿಕೊಟ್ಟರು. ಹದಿನಾರು ವರ್ಷಕ್ಕೇ ಇವರನ್ನು ದೊಡ್ಡವಿದ್ವಾಂಸರನ್ನಾಗಿ ಮಾಡಿದರು. ತಾವು ವೃದ್ಧರಾದ್ದ ರಿಂದ ಇವರಿಂದಲೇ ತಾವು ವಾಸವಾಗಿರುವ ತ್ರಿವಿಕ್ರಮ ದೇವಾಲಯದಲ್ಲಿ ಪಾಠ ವನ್ನು ಹೇಳಿಸಿ ಸಂತೋಷಪಟ್ಟರು. ಪುಣತಾಂಬಾ, ಪೈಠಣ ಮೊದಲಾದ ನಗರ ಗಳಲ್ಲಿದ್ದ ಪಂಡಿತರೊಡನೆ ವಾಕ್ಯಾರ್ಥವನ್ನು ಏರ್ಪಡಿಸಿ ಇವರ ಪಾಂಡಿತ್ಯವು ಎಲ್ಲ ಕಡೆಗೂ ಹರಡುವಂತೆ ಮಾಡಿದರು. ಮುಂದೆ ಕೆಲವರ್ಷಗಳಾದಮೇಲೆ ಆನಂದ ಭಟ್ಟಾರಕರು ವೈಕುಂಠವಾಸಿಗಳಾದರು. ಬಳಿಕ ಕೆಲವು ವರ್ಷಗಳಾದ ಮೇಲೆ ಪುಣತಾಂಬೆಯ ಮೇಲೆ ಮುಸಲ್ಮಾನರ ದಾಳಿಯಾಯಿತು. ಆಗ ನರಸಿಂಹಾ-ಚಾರ್ಯರು ಪುಣತಾಂಬೆಯನ್ನು ಬಿಟ್ಟು ನಾಸಿಕತ್ರ್ಯಂಬಕ, ಸಂಗಮನೇರ, ಪೈಠಣಗಳಲ್ಲಿ ಕೆಲಕಾಲವಿದ್ದು ಪಂಢರಪುರಕ್ಕೆ ಬಂದರು. ಈ ಸಂಚಾರದಲ್ಲಿ ನಾಗನಾಥನ ಮಗನಾದ ದತ್ತಪಂಡಿತನೆಂಬವನು ನರಸಿಂಹಾಚಾರ್ಯರಿಗೆ ತುಂಬ ಸೇವೆ ಮಾಡಿದನು. ಮರ್ಯಾದೆ ಮಾಡಿದನು. ಇವನು ಶಿವಾಜಿಯ ತಂದೆ ಶಹಾಜಿಯ ಸರದಾರನಾಗಿದ್ದನು. ಪೈಠಣದಲ್ಲಿ ಅಧಿಕಾರಿಯಾಗಿದ್ದನು. ಮುಂದೆ ಇವನೇ ಬೆಂಗಳೂರಿನ ಕೋಟೆಗೆ ಸರದಾರನಾಗಿ ನಿಯಮಿಸಲ್ಪಟ್ಟನು. ಇವನು ಶ್ರೀವಿದ್ಯಾಧೀಶರಿಗೆ ಬಹಳ ಸೇವೆ ಮಾಡಿದನು. ಪಂಢರಪುರದಿಂದ ನರಸಿಂಹಾ-ಚಾರ್ಯರು ಲಕ್ಷ್ಮಣಪಂಡಿತನೆಂಬ ದಿವಾನನ ಆಹ್ವಾನದಿಂದ ವಿಜಾಪುರಕ್ಕೆ ಬಂದರು. ಅಲ್ಲಿಂದ ಮುಂದೆ ಶ್ರೀವೇದವ್ಯಾಸತೀರ್ಥರು ಇವರನ್ನು ಮಣ್ಣೂರಿಗೆ ಕರಿಸಿಕೊಂಡು ಆಶ್ರಮಕೊಟ್ಟು ಶ್ರೀಮದುತ್ತರಾದಿಮಠದ ಪೀಠಾಧಿಪತಿಗಳನ್ನಾಗಿ ಮಾಡಿದರು. ಇವರ ಮುಂದಿನ ಚರಿತ್ರೆಯನ್ನು ಅಣುವಿದ್ಯಾಧೀಶವಿಜಯದಲ್ಲಿ ಕೊಟ್ಟಿರುವೆವು. ಇವರಿಗೆ ಕೃಷ್ಣ ಅಥವಾ ರಾಮಕೃಷ್ಣ ಎಂಬ ಹೆಸರಿನ ಮಗನು ಇದ್ದನು. ಇವನು ಬಹುಕಾಲ ಜೀವಿಸಲಿಲ್ಲ. ಶ್ರೀವಿದ್ಯಾಧೀಶರು ತಮ್ಮ ವಾಕ್ಯಾರ್ಥಚಂದ್ರಿಕಾ ಟಿಪ್ಪಣಿಯನ್ನು ಬರೆಯುತ್ತಿದ್ದಾಗ ಒಂದು ಕಡೆಗೆ ಸ್ವಲ್ಪ ಆಲೋಚಿಸಿ ಬರೆಯ ಬೇಕೆಂದು ನಿಲ್ಲಿಸಿದ್ದರು. ನಿರಂತರವೂ ಅವರ ಸೇವೆಯಲ್ಲಿಯೇ ನಿರತನಾಗಿ ಅವರ

ಗ್ರಂಥಗಳ ಕೈಬರಹದ ಪ್ರತಿಗಳನ್ನು ಸಿದ್ಧಪಡಿಸುತ್ತಿದ್ದ ಈ ಕೃಷ್ಣನು ಆ ಪಂಕ್ತಿಯನ್ನು ಪೂರ್ಣ ಮಾಡಿದನು. ಮುಂದೆ ಇದು ಶ್ರೀವಿದ್ಯಾಧೀಶರ ಗಮನಕ್ಕೆ ಬಂದಾಗ ಅವರಿಗೆ ಅಸಮಾಧಾನವಾಯಿತು. ಅದರಿಂದ ಇವನು ಅಲ್ಪಾಯುಷಿಯಾದನೆಂದು ಒಂದು ದಂತ ಕಥೆಯಿದೆ. ಮಹಾತ್ಮರು ಹೀಗೆ ಹೇಳಿರಲಾರರು. ಕೃಷ್ಣನು ಅಲ್ಪಯುಷಿಯಾದ್ದರಿಂದ ಈ ಕಥೆ ಯಾರೋ ಕಲ್ಪಿಸಿರಬಹುದು. ಶ್ರೀವಿದ್ಯಾಧೀಶರು ಶ್ರೀವೇದವ್ಯಾಸತೀರ್ಥರು ವೃಂದಾವನಸ್ಥರಾದ ಮೇಲೆ ತಾವು ಉಡುಪಿಗೆ ಹೋಗಿ ಅಲ್ಲಿ ಚಾತುರ್ಮಾಸ್ಯಕ್ಕೆ ಕುಳಿತಾಗ ವಾಕ್ಯಾರ್ಥಚಂದ್ರಿಕಾ ಟಿಪ್ಪಣಿಯನ್ನು ಬರೆದರು. ಆಗ ಅದರಲ್ಲಿಯ ಪಂಕ್ತಿಯನ್ನು ಪೂರ್ಣಮಾಡುವಷ್ಟು ವಿದ್ಯಾವಂತನೂ ಪ್ರೌಢವಯಸ್ಸಿನವನೂ ಅಂದರೆ ಸುಮಾರು ಇಪತ್ತನಾಲ್ಕು ಇಪ್ಪತ್ತೈದು ವಯಸ್ಸಿನವನು ಈ ಕೃಷ್ಣನು ಆಗಿದ್ದನು. ಇವನಿಗೆ ಆಗ ಆನಂದಾಚಾರ್ಯ, ವಿದ್ಯಾಧೀಶ ಎಂಬ ಇಬ್ಬರು ಮಕ್ಕಳಿದ್ದರು. ವಿದ್ಯಾಧೀಶನೆಂಬ ಹೆಸರಿನ ಮಗುವು ವಿದ್ಯಾಧೀಶರು ಪೀಠಕ್ಕೆ ಬಂದನೇಲೆಯೇ ಹುಟ್ಟಿದ್ದರಿಂದ ಆ ನಾಮಧೇಯವನ್ನು ಪಡೆದಿದ್ದನು. ಈ ಮಗುವು ಎರಡಾರುವರುಷದ ಮಗುವಿರಬಹುದು. ಕೃಷ್ಣನು ಅಲ್ಪಾಯುಷಿಯಾದ್ದರಿಂದ ಕೇಶವಭಟ್ಟಾರಕರೇ ಈ ಇಬ್ಬರೂ ಮಕ್ಕಳ ಪಾಲನೆ ಪೋಷಣೆಗಳನ್ನು ಮಾಡಿದರು. ಈ ಕೃಷ್ಣನ ಮೊದಲನೆಯ ಮಗ ಆನಂದಾಚಾರ್ಯರ ಸಂತತಿಯವರೇ ಈಗಿನ ಮಿಶ್ರಕೋಟಿ ಪಾಂಡುರಂಗಿಯವರು. ಎರಡನೆಯ ಮಗ ವಿದ್ಯಾಧೀಶಾಚಾರ್ಯರ ಸಂತತಿಯವರೇ ಮಾಸೂರು, ತುಮ್ಮಿನಕಟ್ಟಿ, ಕಿತ್ತೂರು, ಧಾರವಾಡ, ಇತ್ಯಾದಿ ಸ್ಥಳಗಳಲ್ಲಿರುವ ಪಾಂಡುರಂಗಿ ಮನೆತನದವರು. ಇನ್ನಿತರರು ಶ್ರೀಕೇಶವಭಟ್ಟಾರಕರ ಸಂತತಿಗೆ ಸೇರಿದವರು.

ಈ ವಿದ್ಯಾಧೀಶನಿಗೂ ಮಕ್ಕಳಾಗಲಿಲ್ಲ. ಅವನು ತನ್ನ ಅಣ್ಣ ಆನಂದಾಚಾರ್ಯನ ಮಗ ವೇದವ್ಯಾಸನನ್ನು ದತ್ತಕತೆಗೆದುಕೊಂಡನು. ಆನಂದಾಚಾರ್ಯನಿಗೆ ವೇದವ್ಯಾಸಾಚಾರ್ಯರು ಮತ್ತು ಕೃಷ್ಣಾಚಾರ್ಯರು ಎಂದು ಇಬ್ಬರು ಮಕ್ಕಳು. ಆನಂದಾಚಾರ್ಯನ ತಮ್ಮ ವಿದ್ಯಾಧೀಶನಿಗೆ ದತ್ತಕ ಬಂದ ವೇದವ್ಯಾಸಾಚಾರ್ಯರ ಸಂತತಿಯು ಮಾಸೂರು, ತುಮ್ಮಿನಕಟ್ಟಿ, ಶಿವಮೊಗ್ಗ, ಕಿತ್ತೂರು, ಕುರುಬಗಟ್ಟಿ ಇತ್ಯಾದಿ ಪಾಂಡುರಂಗಿ ಮನೆತನಗಳ ವಿಭಾಗಗಳಾಗಿ ಮುಂದುವರೆಯಿತು. ಆನಂದಾಚಾರ್ಯನ ಇನ್ನೊಬ್ಬ ಮಗ ಕೃಷ್ಣಾಚಾರ್ಯನ ಸಂತತಿಯು ಮಿಶ್ರಕೋಟಿ

ಪಾಂಡುರಂಗಿ ಎಂದು ಮುಂದುವರಿದಿದೆ. ಇನ್ನಿತರರು ಕೇಶವಭಟ್ಟಾರಕರ ಸಂತತಿಗೆ ಸೇರಿದವರು.

**ಪಾಂಡುರಂಗಿ ಕೇಶವಾಚಾರ್ಯರು (ಗುರುರಾಜರು) ೧೫೭೦–೧೬೫೦**

ಇವರು ಆನಂದಭಟ್ಟಾರಕರ ಮೂರನೆಯ ಮಕ್ಕಳು. ಶ್ರೀವಿದ್ಯಾಧೀಶರ ಪೂರ್ವಾಶ್ರಮದ ತಮ್ಮಂದಿರು. ಇವರು ಆನಂದಭಟ್ಟಾರಕರ ಅಣ್ಣಂದಿರಾದ ತಿಮ್ಮಣ್ಣಭಟ್ಟೋಪಾಧ್ಯಾಯರ ಮಕ್ಕಳಾಗಿದ್ದು ಆನಂದಭಟ್ಟರು ಪಾಲನೆ ಪೋಷಣೆ ಮಾಡಿದ್ದರಿಂದ ಅವರ ಮಕ್ಕಳೆಂದೇ ಪ್ರಸಿದ್ಧಿಯಾಯಿತೆಂಬ ಪರಂಪರೆಯನ್ನು ಈ ಹಿಂದೆಯೇ ಉಲ್ಲೇಖಿಸಿದ್ದೇವೆ. ವಿದ್ಯಾಧೀಶವಿಜಯದಲ್ಲಿ ಇವರು ಶ್ರೀವಿದ್ಯಾಧೀಶರ ಪೂರ್ವಾಶ್ರಮದ ಅಣ್ಣನ ಮಕ್ಕಳು ಎಂದು ಉಲ್ಲೇಖಿಸಲಾಗಿದೆ (ಸರ್ಗ ೭, ಶ್ಲೋಕ ೪೩). ಆದರೆ ಇವರ ಮಕ್ಕಳಾದ ರತ್ನಮಾಲಾ ನರಸಿಂಹಾಚಾರ್ಯರು ಶ್ರೀವಿದ್ಯಾಧೀಶರ ಪೂರ್ವಾಶ್ರಮದ ಅಣ್ಣಂದಿರಾದ ಶ್ರೀನಿವಾಸಾಚಾರ್ಯರು ತಮ್ಮ ಪಿತೃವ್ಯರು ಅಂದರೆ ಕಕ್ಕಂದಿರು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದ್ದರಿಂದ ಇವರು ಶ್ರೀವಿದ್ಯಾಧೀಶರ ಪೂರ್ವಾಶ್ರಮದ ದೊಡ್ಡಪ್ಪ ತಿಮ್ಮಣ್ಣಭಟ್ಟೋಪಾಧ್ಯಾಯರ ಮಕ್ಕಳಾದ್ದರಿಂದ ತಮ್ಮಂದಿರು ಎಂಬುದೇ ಹೆಚ್ಚು ಸಂಭವನೀಯವಾಗಿದೆ. ಅವರ ಪೂರ್ವಾಶ್ರಮದ ಅಣ್ಣನ ಮಕ್ಕಳೆಂಬುದು ಅಷ್ಟೊಂದು ಸರಿಹೊಂದುವದಿಲ್ಲ. ಇವರು ತಿಮ್ಮಣ್ಣಭಟ್ಟರ ಮಕ್ಕಳಾಗಿದ್ದು ಆನಂದಭಟ್ಟರಿಂದ ಪೋಷಿಸಲ್ಪಟ್ಟರು ಎಂಬ ಬಗ್ಗೆ ವಾಕ್ಯಾರ್ಥರತ್ನಮಾಲಾದಲ್ಲಿ ಹಿನ್ನಲೆಯನ್ನೂ ಕೊಟ್ಟಿದ್ದಾರೆ.

ಯದ್ಧಸ್ತಾಂಬುಜಸಂಗತೋಽಹಮಭವಂ ದೇವ್ಯಾಃ ಕಟಾಕ್ಷಾಶ್ರಯಃ ।
ಯದ್ವ್ಯಾಖ್ಯಾನದಿವಾಕರೇಣ ವಿದುಷಾಮಂತಸ್ತಮಃ ಸಂಹೃತಮ್ ॥
ಯೇಃ ಪ್ರೀತಾ ಭುವಿ ಚಂದನದ್ರುಮ ಇವ ಸ್ವೀಯಂ ಸ್ವವತ್ಕುರ್ವತೇ
ತಾನ್ ವ್ಯಾಖ್ಯಾನಿರತಾನ್ ಭಜೇ ಪರಗುರೂನಾನಂದಭಟ್ಟಾರಕಾನ್ ।

(ಸುಧಾ ಟಿಪ್ಪಣೀ ಶೇಷವಾಕ್ಯಾರ್ಥಚಂದ್ರಿಕಾಯಾಃ
ಆರಂಭೇ ಆನಂದಮಯಾಧಿಕರಣೇ ಮಂಗಲಾಚರಣ ಶ್ಲೋಕೇಷು)

ಅತ್ರ ವಾಕ್ಯಾರ್ಥರತ್ನಮಾಲಾಯಾಮ್—

ಸ್ವಪಿತೃತ್ವಾದ್ಯುಪೇತಾನಂದಾಚಾರ್ಯಭಜನರೂಪಂ ಮಂಗಲಮಾಚರತಿ ಯದ್ಧಸ್ತೇತಿ । ಅತ್ರ ಯದ್ಧಸ್ತಾಂಬುಜೇನ ಸಂಗತಃ ಸಂಗೃಹೀತಃ ಇತಿ ವಿಶೇಷಣೇನ

ಇದಂ ಸೂಚಿತವ್—ಪೂರ್ವಂ ಕಿಲ ಶ್ರೀತಿಮ್ಮಣ್ಣಭಟ್ಟೋಪಾಧ್ಯಾಯಾನಾಂ ಪುತ್ರಭೂತಸ್ಯ ಸ್ವಸ್ಯ ಪರಿಪಾಲನವಿಧಾನಾತ್ ಆನಂದಾಚಾರ್ಯೈಃ ಸ್ವಸ್ಯ ಸಂಗ್ರಹಃ ಕೃತಃ । ತತ ಆರಭ್ಯ ಆನಂದಾಚಾರ್ಯಪುತ್ರತ್ವಮೇವ ಸ್ವಸ್ಯ ।

ಅತ್ರೇಯಂ ಕಥಾ—ಆನಂದಾಚಾರ್ಯತಿಮ್ಮಣ್ಣಭಟ್ಟಯೋಃ ಇಷ್ಟಾಲಾಪಕಾಲೇ 'ತವ ಚತ್ವಾರಃ ಪುತ್ರಾಃ ಮಮತು ದ್ವಾವೇವ ಇತಿ ವೈಷಮ್ಯಂ ಮಾಸ್ತು' ಇತ್ಯಾನಂದಾಚಾರ್ಯೈಃ (ಉಕ್ತೇ) 'ಚತುರ್ಷು ಏಕೋ ಗ್ರಾಹ್ಯಃ' ಇತಿ ತಿಮ್ಮಣ್ಣಭಟ್ಟೈಃ ಉಕ್ತೇ ಸತಿ ಪಶ್ಚಾತ್ ಪರಿಪಾಲನವಿಧಾನಾತ್ ತೈಃ ಸಂಗೃಹ್ಯ ಕೃತ್ವಾ ಅಕ್ಷರಾಭ್ಯಾಸಾದಿ ಸಂಪತ್ತ್ಯನಂತರಂ ವಿಷ್ಣುಸ್ತುತಿಪಾಠಾದಿಕಥಾನಾಮಾರಂಭಃ ಕೃತಃ ಸಹಾನೇನ ಗೋದಾವರೀ ಸ್ನಾನಾರ್ಥಂ ನಯನಾದಿಕಂ ಚ ಕೃತವ್ । ತದಾ ಪ್ರಬುದ್ಧಾನ್ ಶ್ರೀನಿವಾಸಾಚಾರ್ಯ ನರಸಿಂಹಾಚಾರ್ಯಾನ್ ಪ್ರತಿ ಭವದಪೇಕ್ಷಯಾ ಏನಂ ಪ್ರೌಢಂ ಕರಿಷ್ಯಾಮೀತಿ ಕಥನಾದಿ ಚ । ಸ್ವಾಶಕ್ತಿಸಮಯೇ ನರಸಿಂಹಾಚಾರ್ಯಾವಸ್ಥಾಪನ್ನಸ್ವಾಮಿಹಸ್ತೇ ಏತೇಷಾಂ ಪ್ರದಾನಂ ಕೃತವ್ । ತದಾರಭ್ಯ ಸ್ವಾಮಿಭಿರೇವ ಸಂಪೂರ್ಣಶಾಸ್ತ್ರಾಭ್ಯಾಸಾದಿಕಾರಿತಮಿತ್ಯಾದಿಕಾ ಜ್ಞೇಯಾ । ಅತ ಏವ ಪರಗೂರೂನಿತಿ ಸ್ವಾಮಿದ್ವಾರಕಂ ಗುರುತ್ವಮುಕ್ತವ್ ।

ಇವರು ಶ್ರೀವಿದ್ಯಾಧೀಶರನ್ನು ಬಹಳ ಭಕ್ತಿಯಿಂದ ಗುರುರಾಜರು ಎಂದು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸುತ್ತಾರೆ. ತಾವು ಅವರು ಹಾಕಿಕೊಟ್ಟ ಮಾರ್ಗದಲ್ಲಿಯೇ ತಮ್ಮ ಟಿಪ್ಪಣಿಗಳನ್ನು ಬರೆಯುತ್ತೇನೆ ಎಂದು ಹೇಳುತ್ತಾರೆ. ಆದ್ದರಿಂದ ಇವರ ಟಿಪ್ಪಣಿಗಳೆಲ್ಲ 'ಗುರುರಾಜೀಯ' ಎಂದೇ ಪ್ರಸಿದ್ಧವಾಗಿವೆ. ಮತ್ತು ಆ ಕಾರಣದಿಂದ ಕೇಶವಾಚಾರ್ಯರಿಗೆ 'ಗುರುರಾಜ' ರೆಂದೂ ಪ್ರಸಿದ್ಧಿ ಇದೆ.

ನತ್ವಾ ಶ್ರೀಶಂ ಗುರೂನ್ ಸರ್ವಾನ್ ಗುರುರಾಜೋಕ್ತಮಾರ್ಗತಃ
ತತ್ತ್ವನಿರ್ಣಯಟೀಕಾಯಾಃ ಭಾವಂ ವಕ್ಷ್ಯೇ ಯಥಾಮತಿ ॥

ಎಂದು ತಮ್ಮ ತತ್ತ್ವನಿರ್ಣಯ ಟಿಪ್ಪಣಿಯ ಆರಂಭದಲ್ಲಿ ಹೇಳುತ್ತಾರೆ. ಈ ಟಿಪ್ಪಣಿಗೆ 'ಗುರುರಾಜ ಮಾರ್ಗಾನುವರ್ತಿನೀ' ಎಂದೇ ಹೆಸರಿಟ್ಟಿದ್ದಾರೆ.

ನಿಶಮ್ಯ ಸಕಲಂ ಶಾಸ್ತ್ರಂ ವಿದ್ಯಾಧೀಶಜಗದ್ಗುರೋಃ ।
ಚಂದ್ರಿಕಾಯಾಃ ಪ್ರಕಾಶೋಽಯಂ ಕೇಶವೇನ ಪ್ರಕಾಶ್ಯತೇ ॥

ಎಂದು ತಾತ್ಪರ್ಯಚಂದ್ರಿಕಾ ಟಿಪ್ಪಣಿಯ ಆರಂಭದಲ್ಲಿ ಹೇಳುತ್ತಾರೆ.

ಅಥ ತತ್ಕೃಪಯೈವಾಹಂ ತತ್ಸುಶಿಕ್ಷಿತಮಾರ್ಗತಃ ।
ತೇಷಾಮಾಜ್ಞಾಂ ಪುರಸ್ಕೃತ್ಯ ತತ್ಪ್ರಸಾದಾನುರಂಜಿತಃ ॥
ಶಿಕ್ಷಿತಾನ್ ಯುಕ್ತಿನಿಚಯಾನ್ ಸ್ಮಾರಂ ಸ್ಮಾರಂ ಯಥಾಮತಿ ।
ಕರೋಮಿ ಸೌಧಗೂಢಾರ್ಥಶೇಷವಾಕ್ಯಾರ್ಥಚಂದ್ರಿಕಾಮ್ ॥

ಎಂದು ಶೇಷವಾಕ್ಯಾರ್ಥಚಂದ್ರಿಕಾದ ಆರಂಭದಲ್ಲಿ ಹೇಳುತ್ತಾರೆ.

ತತ್ತ್ವೋದ್ಯೋತಸ್ಯ ವಿವೃತೇಃ ವಿದ್ಯಾಧೀಶೋಕ್ತಮಾರ್ಗತಃ ।
ವಿವೃತಿಃ ಭಾವಗೂಢಾಯಾಃ ಕ್ರಿಯತೇ ಭಾವಶುದ್ಧಯೇ ॥

ಎಂದು ತತ್ತ್ವೋದ್ಯೋತ ಟಿಪ್ಪಣಿಯ ಆರಂಭದಲ್ಲಿಯೂ

ಮೂಲಗ್ರಂಥಾನ್ ಸಮಾಲೋಚ್ಯ ಗುರುಶಿಕ್ಷಿತಮಾರ್ಗತಃ
ತತ್ವಸಂಖ್ಯಾನಟೀಕಾಯಾಃ ಚಂದ್ರಿಕೇಯಂ ವಿನಿರ್ಮಿತಾ ॥

ಎಂದು ತತ್ವಸಂಖ್ಯಾನ ಟಿಪ್ಪಣಿಯ ಆರಂಭದಲ್ಲಿಯೂ ಹೇಳುತ್ತಾರೆ.

ವ್ಯಾಸತೀರ್ಥಾರ್ಯೈಂ ಯದಸ್ಪಷ್ಟಂ ಪದಂ ವಾ ವಾಕ್ಯಮೇವ ವಾ ।
ಗುರುರಾಜೋಕ್ತಮಾರ್ಗೇಣ ತದ್ವ್ಯಕ್ತಂ ಕ್ರಿಯತೇ ಮಯಾ ॥

ಎಂದು ಮಾಯಾವಾದ ಖಂಡನ ಟಿಪ್ಪಣಿಯ ಆರಂಭದಲ್ಲಿ ಹೇಳುತ್ತಾರೆ.

ಹೀಗೆ ಇವರ ಎಲ್ಲ ಟಿಪ್ಪಣೀ ಗ್ರಂಥಗಳಲ್ಲಿಯೂ ತಮಗೆ ಗುರುರಾಜರಾದ ಶ್ರೀವಿದ್ಯಾಧೀಶರು ಕಲಿಸಿಕೊಟ್ಟಂತೆ ಅವರ ರೀತಿಯನ್ನೇ ಅನುಸರಿಸಿ ಈ ಟಿಪ್ಪಣಿಯನ್ನು ಬರೆಯುತ್ತಿದ್ದೇವೆ ಎಂದು ಹೇಳಿದ್ದರಿಂದ ಇವರ ಟಿಪ್ಪಣಿಗಳು ಗುರುರಾಜೀಯ ಎಂದು ಪ್ರಸಿದ್ಧವಾದವು. ಇದರಿಂದಾಗಿ ಮುಂದೆ ಇವರಿಗೇ ಗುರುರಾಜರೆಂಬ ಹೆಸರು ಬಳಕೆಯಲ್ಲಿ ಬಂದಿತು.

ಈ ಕೇಶವಾಚಾರ್ಯರು ಅಥವಾ ಗುರುರಾಜರು ತಮ್ಮ ಗ್ರಂಥಗಳ ಆರಂಭದಲ್ಲಿ ಶ್ರೀವಿದ್ಯಾಧೀಶರನ್ನು ಪರಮಭಕ್ತಿಯಿಂದ ಸ್ತುತಿಸುವದಲ್ಲದೆ ತಮ್ಮ ತಂದೆಯವರಾದ ಆನಂದಭಟ್ಟಾರಕರನ್ನೂ ಅಣ್ಣಂದಿರಾದ ಶ್ರೀನಿವಾಸಾಚಾರ್ಯರನ್ನೂ ಸ್ತುತಿಸುತ್ತಾರೆ. ಶ್ರೀರಘೂತ್ತಮತೀರ್ಥರು, ಶ್ರೀವೇದವ್ಯಾಸತೀರ್ಥರು ಮತ್ತು ಶ್ರೀವಿದ್ಯಾಪತಿತೀರ್ಥರನ್ನು ಸ್ತುತಿಸುತ್ತಾರೆ. ಶ್ರೀವಿದ್ಯಾಧೀಶರು ಪೀಠಾಧಿಪತಿಗಳಾಗಿರುವ ಕಾಲದಲ್ಲಿ ಅವರ ಜೊತೆಯಲ್ಲಿ ಮಠದಲ್ಲಿಯೇ ಇದ್ದು ಅವರೊಡನೆಯೇ

ಸಂಚಾರ ಮಾಡುತ್ತಿದ್ದು ನಂತರ ಇವರು ಶೂರ್ಪಾಲಿಯಲ್ಲಿ ವಾಸವಾಗಿದ್ದರು. ಶ್ರೀವಿದ್ಯಾಧೀಶರು ಪೂರ್ವಾಶ್ರಮದಲ್ಲಿ ಮುಸಲ್ಮಾನರ ದಾಳಿಯಿಂದ ಪುಣತಾಂಬೆಯನ್ನು ಬಿಟ್ಟುಬಂದ ಮೇಲೆ ಕೆಲವು ವರ್ಷ ಪಂಢರಪುರದಲ್ಲಿಯೂ ಕೆಲವು ವರ್ಷ ಶೂರ್ಪಾಲಿಯಲ್ಲಿಯೂ ಇದ್ದರು. ಅವರ ಜೊತೆಗೆ ಇವರೂ ಈ ಊರುಗಳಲ್ಲಿ ಇದ್ದರು. ಶ್ರೀವಿದ್ಯಾಧೀಶರು ಪೀಠಾಧಿಪತಿಗಳಾಗಿದ್ದ ಕಾಲದಲ್ಲಿಯೂ ಶೂರ್ಪಾಲಿಗೆ ಆಗಾಗ ಬರುತ್ತಿದ್ದರು. ಹೀಗಾಗಿ ಕೇಶವಾಚಾರ್ಯರು ನಂತರದಲ್ಲಿ ಅಲ್ಲಿಯೇ ನೆಲಸಿದರು. ಶ್ರೀಯಾದವಾರ್ಯರೂ ಕೆಲವು ವರ್ಷ ಅಲ್ಲಿಯೇ ಇರುತ್ತಿದ್ದರೆಂದು ತಿಳಿದುಬರುತ್ತದೆ. ಶ್ರೀಯಾದವಾರ್ಯರಿಗೆ ಕೇಶವಾಚಾರ್ಯರ ಮೇಲೆ ಬಹಳ ವಾತ್ಸಲ್ಯ. ಶ್ರೀವಿದ್ಯಾಧೀಶರ ಪೂರ್ವಾಶ್ರಮದ ತಾಯಿಯವರು ನಿತ್ಯ ಶ್ರೀಯಾದ-ವಾರ್ಯರಿಂದ ಭಾಗವತವನ್ನು ಕೇಳುತ್ತಿದ್ದರು. ಚತುಃಶಾಸ್ತ್ರ ಪಂಡಿತರಾದ ಇವರಿಗೆ ಭಾಗವತವನ್ನು ಓದಬೇಕೆಂದು ಶ್ರೀಯಾದವಾರ್ಯರು ಆಗಾಗ ಹೇಳುತ್ತಿದ್ದರು. ಶ್ರೀಯಾದವಾರ್ಯರು ವೈಕುಂಠವಾಸಿಗಳಾದ ಮೇಲೆ ಅವರ ಅಸ್ಥಿಗಳನ್ನು ಅವರ ಶಿಷ್ಯರು ಕೃಷ್ಣಾನದಿಯಲ್ಲಿ ಹಾಕಲು ಶೂರ್ಪಾಲಿಗೆ ತಂದರು. ಅವನ್ನು ತಾವೇ ಕೃಷ್ಣಾನದಿಯಲ್ಲಿ ಹಾಕಲು ಕೇಶವಾಚಾರ್ಯರು ಅಪೇಕ್ಷಿಸಿ ಕೃಷ್ಣೆಯಲ್ಲಿ ಅವನ್ನು ಮೂರು ಸಲ ಮುಣುಗಿಸಲು ಅವು ಶಂಖಚಕ್ರಾಂಕಿತವಾಗಿ ಭಾಗವತವನ್ನು ಓದು ಭಾಗವತವನ್ನು ಓದು ಎಂದು ಹೇಳಿದಂತಾಯಿತು. ಇದರಿಂದ ಪ್ರೇರಿತರಾಗಿ ಕೇಶವಾಚಾರ್ಯರು ಭಾಗವತವನ್ನು ಆಳವಾಗಿ ಓದಿ ಕ್ರೋಡಪತ್ರರೂಪವಾದ ಒಂದು ಟಿಪ್ಪಣಿಯನ್ನು ಬರೆದಿರುವರು ಎಂದು ಪರಂಪರೆಯಿದೆ.

ಕೇಶವಾಚಾರ್ಯರು ಶ್ರೀಮನ್ನ್ಯಾಯಸುಧಾಕ್ಕೆ ಶೇಷವಾಕ್ಯಾರ್ಥಚಂದ್ರಿಕಾ ಎಂಬ ವಿಸ್ತಾರವಾದ ಟಿಪ್ಪಣಿ ಬರೆದಿರುವರು. ಶ್ರೀಮನ್ನ್ಯಾಯಸುಧಾದ ಮೊದಲಿನ ಐದು ಅಧಿಕರಣಗಳಿಗೆ ಶ್ರೀವಿದ್ಯಾಧೀಶರು ವಾಕ್ಯಾರ್ಥಚಂದ್ರಿಕಾ ಎಂಬ ಟಿಪ್ಪಣಿಯನ್ನು ಬರೆದು ಮುಂದಿನ ಭಾಗಕ್ಕೆ ತಮ್ಮ ಪ್ರೀತಿಗೆ ಪಾತ್ರರಾದ ಕೇಶವಾ-ಚಾರ್ಯರಿಗೆ ಟಿಪ್ಪಣಿಯನ್ನು ಬರೆಯಲು ಆಜ್ಞಾ ಮಾಡಿದರು. ಇದೇ ಶೇಷವಾ-ಕ್ಯಾರ್ಥಚಂದ್ರಿಕಾ ಟಿಪ್ಪಣಿಯು. ಇದಲ್ಲದೆ ಶ್ರೀಮನ್ನ್ಯಾಯಸುಧಾವಾಕ್ಯಾರ್ಥ ವಿನೋದ ಎಂಬ ಇನ್ನೊಂದು ಟಿಪ್ಪಣಿಯನ್ನೂ ಬರೆದಿರುವರು. ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕಾಕ್ಕೆ ವಿಸ್ತಾರವಾದ ಟಿಪ್ಪಣಿಯನ್ನು ಬರೆದಿರುವರು. ಇದು ಗುರ್ವೀ, ಲಘ್ವೀ ಎಂದು ಎರಡು ರೂಪದಲ್ಲಿದೆ. ಗುರ್ವೀ ಮೊದಲಿನ ಆರು

ಅಧಿಕರಣಗಳಿಗೆ ಮಾತ್ರ ಉಪಲಬ್ಧವಾಗಿದೆ. ಈ ಟಿಪ್ಪಣಿಯಲ್ಲಿ ಪೂರ್ವಮೀಮಾಂಸಾ ಮತ್ತು ವ್ಯಾಕರಣದ ಅಂಶಗಳನ್ನು ಬಹಳವಾಗಿ ವಿಚಾರಮಾಡಿದ್ದಾರೆ. ದಶಪ್ರಕರಣ ಗಳಲ್ಲಿ ತತ್ವವಿವೇಕ, ಉಪಾಧಿಖಂಡನ, ಮತ್ತು ಕರ್ಮನಿರ್ಣಯ ಈ ಮೂರನ್ನು ಬಿಟ್ಟು ಉಳಿದ ಎಲ್ಲಾ ಪ್ರಕರಣಗಳಿಗೂ ಟಿಪ್ಪಣಿಗಳನ್ನು ಬರೆದಿದ್ದಾರೆ. ಋಗ್-ಭಾಷ್ಯ ಟೀಕಾಕ್ಕೆ ವಿಸ್ತಾರವಾದ ಟಿಪ್ಪಣಿಯನ್ನು ಬರೆದಿದ್ದಾರೆ. ಶ್ರೀವಿದ್ಯಾಧೀಶರೇ ಋಗ್ಭಾಷ್ಯಕ್ಕೆ ಟಿಪ್ಪಣಿಯನ್ನು ಬರೆದಿರುವವಾಗಿಯೂ ಅದನ್ನೇ ವಿಸ್ತರಿಸಿ ಬರೆಯುತ್ತಿರುವದಾಗಿಯೂ ಈ ಟಿಪ್ಪಣಿಯ ಆರಂಭದಲ್ಲಿ ಹೇಳುತ್ತಾರೆ. ಗೀತಾ-ಭಾಷ್ಯ ಮತ್ತು ಪ್ರಮೇಯದೀಪಿಕಾಗಳಲ್ಲಿಯ ವ್ಯಾಕರಣರೂಪಗಳನ್ನು ಸಮರ್ಥಿಸಿ ಒಂದು ಟಿಪ್ಪಣಿಯನ್ನು ಬರೆದಿದ್ದಾರೆ. ಶ್ರೀವಿದ್ಯಾಧೀಶರೊಡನೆ ಇಕ್ಕೇರಿಗೆ ಹೋದಾಗ ರಂಗೋಜೀಭಟ್ಟನ ಶಿಷ್ಯ ವಾದೀಂದ್ರನೆಂಬವನೊಡನೆ ವಾದ ಮಾಡಿ ಅವನನ್ನು ಸೋಲಿಸಿದರು. ಈ ವಾದದಲ್ಲಿ ಚರ್ಚಿಸಿದ ವಿಷಯಗಳು 'ವಾದೀಂದ್ರ ಧಿಕ್ಕಾರ' ಎಂಬ ಇವರ ಚಿಕ್ಕಪುಸ್ತಕದಲ್ಲಿ ಸಂಗ್ರಹಿಸಲ್ಪಟ್ಟಿವೆ. 'ತತ್ವಪ್ರಕಾಶಿಕಾ' ಗ್ರಂಥಕ್ಕೂ ಇವರು ಕ್ರೋಡಪತ್ರರೂಪವಾದ ಒಂದು ಟಿಪ್ಪಣಿಯನ್ನು ಬರೆದಿರುವರು ಎಂದು ಪರಂಪರೆಯಿದೆ.

ಶ್ರೀರಾಘವೇಂದ್ರಸ್ವಾಮಿಗಳು ಮತ್ತು ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥ ರನ್ನು ಬಿಟ್ಟರೆ ಇಷ್ಟು ವ್ಯಾಪಕವಾಗಿ ಟಿಪ್ಪಣೀಗ್ರಂಥಗಳನ್ನು ಬರೆದವರು ಇವರೇ ಆಗಿರುವರು. ಇವರ ಟಿಪ್ಪಣಿಗಳು ಬಹಳ ಪ್ರೌಢವಾಗಿದ್ದು ಅನೇಕ ಹೊಸ ಪರಿಷ್ಕಾರಗಳು ವಿಶ್ಲೇಷಣೆಗಳು ಇವುಗಳಿಂದ ಕೂಡಿವೆ. ಇವರು ಕೊನೆಯವರೆಗೂ ಶೂರ್ಪಾಲಿಯಲ್ಲಿಯೇ ಇದ್ದರು. ಅಲ್ಲಿ ಕೃಷ್ಣಾನದೀತೀರದಲ್ಲಿ ಶ್ರೀನರಸಿಂಹದೇವರ ದೇವಸ್ಥಾನದ ಪಕ್ಕದಲ್ಲಿ ಸ್ವಲ್ಪದೂರದಲ್ಲಿ ಇವರ ವೃಕ್ಷವಿದೆ. ಇವರಿಗೆ ಗಡ್ಡದ ಶ್ರೀನಿವಾಸಾಚಾರ್ಯರು ಮತ್ತು ರತ್ನಮಾಲಾ ನರಸಿಂಹಾಚಾರ್ಯರು ಎಂದು ಇಬ್ಬರು ಮಕ್ಕಳು. ಶ್ರೀವಿದ್ಯಾಧೀಶರ ಮೊಮ್ಮಕ್ಕಳಾದ ಆನಂದಾಚಾರ್ಯರು ಮತ್ತು ವಿದ್ಯಾಧೀಶಾಚಾರ್ಯರ ಪಾಲನೆ ಪೋಷಣೆಯನ್ನೂ ಇವರೇ ಮಾಡಿದರು. ಗಡ್ಡದ ಶ್ರೀನಿವಾಸಾಚಾರ್ಯರ ಸಂತಾನ ಪರಂಪರೆಯಲ್ಲಿ ರಾಜಮನ್ನಾರಿ, ತಂಜಾವೂರು, ಕುಟ್ಟಾಲಮ್ ಇತ್ಯಾದಿ ದಕ್ಷಿಣದೇಶದ ಪಾಂಡುರಂಗಿಯವರೂ ಕಳಸ, ಚಿಕ್ಕೇರೂರು, ರಾಣೇಬೆನ್ನೂರು ಪಾಂಡುರಂಗಿಯವರೂ ಬಂದಿರುವರು. ರತ್ನಮಾಲಾ ನರಸಿಂಹಾಚಾರ್ಯರ ಸಂತಾನ ಪರಂಪರೆಯಲ್ಲಿ ಕಡಕೋಳ, ಹುಬ್ಬಳ್ಳಿ,

ಭಂಡಿವಾಡ, ಕಲಘಟಗಿ ಪಾಂಡುರಂಗಿ ಮನೆತನದವರು ಬಂದಿರುವರು. ಆನಂದಾ-ಚಾರ್ಯರ ಸಂತಾನ ಪರಂಪರೆಯಲ್ಲಿ ಮಿಶ್ರಕೋಟಿ ಮನೆತನದವರು ಬಂದಿರುವರು. ವಿದ್ಯಾಧೀಶಾಚಾರ್ಯರ ಸಂತಾನ ಪರಂಪರೆಯಲ್ಲಿ ಮಾಸೂರು, ಶಿವಮೊಗ್ಗಾ, ತುಮ್ಮಿನಕಟ್ಟೆ, ಕಿತ್ತೂರು, ಕುರುಬಗಟ್ಟಿ, ಧಾರವಾಡದ ಪಾಂಡುರಂಗಿಯವರು ಬಂದಿರುವರು. ಈಗ ಕರ್ನಾಟಕ ಮತ್ತು ದಕ್ಷಿಣದೇಶ ಸೇರಿ ಸುಮಾರು ಮುನ್ನೂರು ಪಾಂಡುರಂಗಿ ಮನೆತನಗಳಿರುವವು. ಶ್ರೀಸತ್ಯವಿಜಯಸ್ವಾಮಿಗಳವರು ಗಡ್ಡದ ಶ್ರೀನಿವಾಸಾಚಾರ್ಯರ ಮಕ್ಕಳು. ಶ್ರೀಸತ್ಯಪ್ರಜ್ಞಸ್ವಾಮಿಗಳವರು ರತ್ನಮಾಲಾ ನರಸಿಂಹಾಚಾರ್ಯರ ಸಂತತಿಗೆ ಸೇರಿದವರು. ಪಾಂಡುರಂಗಿ ಮನೆತನದವರು ಶೂರ್ಪಾಲಿಯಿಂದ ಮಾಸೂರು ಪ್ರಾಂತಕ್ಕೆ ಯಾವಾಗ ಬಂದರು ಎಂಬುದು ಸ್ಪಷ್ಟವಾಗಿ ತಿಳಿಯುವದಿಲ್ಲ. ಮಾಸೂರಿನ ಹತ್ತಿರದ ಬೇಗೂರು, ಭದ್ರಾವತಿ ಮತ್ತು ಆಪಿನಕಟ್ಟೆ ಗ್ರಾಮಗಳು ಯಾವಾಗ ಇನಾಮುಗ್ರಾಮವಾಗಿ ದೊರಕಿದವು ಎಂಬುದೂ ತಿಳಿಯುವದಿಲ್ಲ. ಕೇಶವಾಚಾರ್ಯರ ಮಕ್ಕಳು ಅಥವಾ ಮೊಮ್ಮಕ್ಕಳ ಕಾಲದಲ್ಲಿ ಈ ಭಾಗಕ್ಕೆ ಬಂದಂತೆ ಕಾಣುತ್ತದೆ. ಚೈತ್ರ ಶುದ್ಧ ಪಂಚಮೀ ದಿವಸವು ಶ್ರೀಗುರುರಾಜರ ಪುಣ್ಯದಿವಸವು.

## ಗಡ್ಡದ ಶ್ರೀನಿವಾಸಾಚಾರ್ಯರು (೧೫೯೦-೧೬೬೦)

ಇವರು ಕೇಶವಾಚಾರ್ಯರ ಹಿರಿಯ ಮಕ್ಕಳು. ಇವರ ತಮ್ಮಂದಿರಾದ ರತ್ನಮಾಲಾ ನರಸಿಂಹಾಚಾರ್ಯರು ತಮ್ಮ ವಾಕ್ಯಾರ್ಥರತ್ನಮಾಲಾ ಟಿಪ್ಪಣಿಯ ಆರಂಭದಲ್ಲಿ ಇವರನ್ನು ಸ್ತುತಿಸುತ್ತಾರೆ. ಇವರು ಗಡ್ಡ ಬಿಟ್ಟಿದ್ದರಿಂದ ಗಡ್ಡದ ಶ್ರೀನಿವಾಸಾಚಾರ್ಯರೆಂದು ಪ್ರಸಿದ್ಧರಾದರು. ಇವರು ಸಾಯಂಕಾಲವಾದ ಮೇಲೆ ಮುಸಲ್ಮಾನರಂತೆ ವೇಷಭೂಷಣಮಾಡುತ್ತಿದ್ದರಂತೆ. ಸಂಚಾರ ಕ್ರಮೇಣ ಒಮ್ಮೆ ಇವರು ಶ್ರೀರಂಗಕ್ಕೆ ಹೋದಾಗ ಅಲ್ಲಿ ಓರ್ವ ಗೃಹಸ್ಥರ ಮನೆಯ ಯಜಮಾನಿಯು ಇವರಿಂದ ತೀರ್ಥವನ್ನು ತೆಗೆದುಕೊಳ್ಳಲು ನಿರಾಕರಿಸಿದಳಂತೆ. ಆಗ ಇವರು ಸರ್ಪದಂತೆ ಕಂಡದ್ದರಿಂದ ಗಾಬರಿಯಾಗಿ ತನ್ನ ತಪ್ಪನ್ನು ಅರಿತುಕೊಂಡು ಕ್ಷಮೆ ಬೇಡಿದಳಂತೆ. ಈ ಕಥೆಯನ್ನು ದಕ್ಷಿಣದೇಶದ ಪಾಂಡುರಂಗಿಯವರು ಹೇಳುವರು. ಮದ್ರಾಸದಲ್ಲಿದ್ದ ಶ್ರೀಮಧ್ವರಾಯಾಚಾರ್ಯ ಪಾಂಡುರಂಗಿ ಎಂಬವರು ಬರೆದಿಟ್ಟಿರುವರು. ತಮ್ಮ ಕೆಲವು ಕರ್ಮಶೇಷಗಳನ್ನು ಕಳೆದುಕೊಳ್ಳಲು ಹೀಗೆ ವೇಷ

ಮಾಡಿಕೊಳ್ಳುತ್ತಿದ್ದರು ಎಂಬ ಪರಂಪರೆಯಿದೆ. ಆ ಕಾಲದ ಐತಿಹಾಸಿಕ ಸನ್ನಿವೇಶದಲ್ಲಿ ಗುಪ್ತವಾಗಿರಲೂ ಹೀಗೆ ಮಾಡುತ್ತಿರಬಹುದು. ರಾಮದಾಸಪಂಥದ ಮೇರುಸ್ವಾಮಿ ಎಂಬ ಸಂತನು ದಕ್ಷಿಣದೇಶದಲ್ಲಿ ತಿರುವಣ್ಣಾಮಲೆಯಲ್ಲಿ ಮಠ ಕಟ್ಟಿಸಿಕೊಂಡಿದ್ದನು. ಮುಂದೆ ಅವನು ತಂಜಾವೂರು ರಾಜಮನ್ನಾರಗಳಲ್ಲಿಯೂ ಮಠ ಕಟ್ಟಿಸಿದನು. ರಾಜಮನ್ನಾರದಲ್ಲಿ ಒಂದು ಅಗ್ರಹಾರವನ್ನು ಕಟ್ಟಿಸಿ ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರಗಳಿಂದ ಅನೇಕ ಪಂಡಿತರನ್ನು ಕರೆಯಿಸಿಕೊಂಡನು. ಇಂಥವರಲ್ಲಿ ಈ ಗಡ್ಡದ ಶ್ರೀನಿವಾಸಾಚಾರ್ಯರೂ ಒಬ್ಬರು. ಇವರ ಮಕ್ಕಳೇ ಬಾಬಾಚಾರ್ಯರು. ಈ ಬಾಬಾಚಾರ್ಯರೇ ಮುಂದೆ ಶ್ರೀಸತ್ಯವಿಜಯರಾಗುವರು. ಈ ಗಡ್ಡದ ಶ್ರೀನಿವಾಸಾಚಾರ್ಯರ ಮಕ್ಕಳಲ್ಲಿ ಕೆಲವರು ದಕ್ಷಿಣದೇಶದಲ್ಲಿಯೂ, ಕೆಲವರು ಉತ್ತರ ಕರ್ನಾಟಕದಲ್ಲಿಯೂ ನೆಲಸಿರುವರು. ಹೀಗಾಗಿ ಎರಡು ಕಡೆಯಲ್ಲಿಯೂ ಇವರ ಸಂತಾನದವರಿರುವರು. ಚಿಕ್ಕೇರೂರು ಪಾಂಡುರಂಗಿಯವರು ಇವರ ಸಂತತಿಗೆ ಸೇರಿದ್ದರಿಂದ ಅವರನ್ನು ಮನ್ನಾರಿಯವರೆಂದೇ ಕರೆಯುವರು.

## ರತ್ನಮಾಲಾ ನರಸಿಂಹಾಚಾರ್ಯರು ೧೬೦೦–೧೬೪೦

ಇವರು ಕೇಶವಾಚಾರ್ಯರ ಎರಡನೆಯ ಮಕ್ಕಳು. ವಾಕ್ಯಾರ್ಥಚಂದ್ರಿಕಾ ಮತ್ತು ಶೇಷವಾಕ್ಯಾರ್ಥಚಂದ್ರಿಕಾಗಳಿಗೆ ವಾಕ್ಯಾರ್ಥರತ್ನಮಾಲಾ ಎಂಬ ವಿಸ್ತಾರವಾದ ಟಿಪ್ಪಣಿಯನ್ನು ಬರೆದಿರುವರು. ಇದು ಎರಡುಸಾವಿರ ಪತ್ರಗಳಷ್ಟು ವಿಸ್ತಾರವಾಗಿರುವದು. ಇದರಲ್ಲಿ ಶ್ರೀಮನ್ನ್ಯಾಯಸುಧಾದ ಮತ್ತು ವಾಕ್ಯಾರ್ಥಚಂದ್ರಿಕಾದ ಪಾಠಭೇದಗಳನ್ನು ವಿಮರ್ಶೆಮಾಡಿ ಶುದ್ಧ ಪಾಠಗಳನ್ನು ನಿರ್ಣಯಿಸುವರು. ತಮ್ಮ ಗ್ರಂಥದ ಆದಿಯಲ್ಲಿ ಆನಂದಭಟ್ಟಾರಕರು ಅವರ ಹಿರಿಯಮಗ ಶ್ರೀನಿವಾಸಾಚಾರ್ಯರು, ತಮ್ಮ ತಂದೆ ಕೇಶವಾಚಾರ್ಯರು ಮತ್ತು ಅಣ್ಣ ಗಡ್ಡದ ಶ್ರೀನಿವಾಸಾಚಾರ್ಯರನ್ನು ಸ್ತುತಿಸುವರು. ಶ್ರೀಸತ್ಯನಿಧಿತೀರ್ಥರು, ಶ್ರೀಸತ್ಯನಾಥತೀರ್ಥರು, ಮತ್ತು ಶ್ರೀಸತ್ಯಾಭಿನವತೀರ್ಥರನ್ನು ಸಮಕಾಲೀನ ಗುರುಗಳೆಂದು ವಂದಿಸುವರು. ಇವರು ಶೂರ್ಪಾಲಿಯಲ್ಲಿಯೇ ಇದ್ದರೋ ಅಥವಾ ಮಾಸೂರು ಪ್ರಾಂತಕ್ಕೆ ಬಂದರೋ ಎಂಬುದು ಸ್ಪಷ್ಟವಾಗಿ ತಿಳಿಯಬರುವುದಿಲ್ಲ. ಕಡಕೋಳ, ಹುಬ್ಬಳ್ಳಿ, ಭಂಡಿವಾಡ, ಕಲಘಟಗಿ ಮನೆತನದವರು ಇವರ ಸಂತತಿಗೆ ಸೇರಿದವರು. ಶ್ರೀಸತ್ಯಪ್ರಜ್ಞರು ಇವರ ಸಂತತಿಗೆ ಸೇರಿದವರು.

## ಪಾಂಡುರಂಗಿ ವಿದ್ಯಾಧೀಶಾಚಾರ್ಯರು (೧೬೧೦–೧೬೮೦)

ಇವರು ಶ್ರೀವಿದ್ಯಾಧೀಶಸ್ವಾಮಿಗಳವರ ಪೂರ್ವಾಶ್ರಮದ ಮಕ್ಕಳಾದ ಕೃಷ್ಣಾಚಾರ್ಯರ ಎರಡನೆಯ ಮಕ್ಕಳು. ಇವರು ಚಿಕ್ಕವರಿರುವಾಗಲೇ ಇವರ ತಂದೆಯವರು ಗತಿಸಿದ್ದರಿಂದ ಶ್ರೀಕೇಶವಾಚಾರ್ಯರೇ ಇವರ ಪಾಲನೆ ಪೋಷಣೆ ಮಾಡಿ ಶಾಸ್ತ್ರಾಭ್ಯಾಸಮಾಡಿಸಿದರು. ಇವರ ಕಾಲದಲ್ಲಿ ಪಾಂಡುರಂಗಿಯವರು ಇನ್ನೂ ಶೂರ್ಪಾಲಿಯಲ್ಲಿಯೇ ಇದ್ದಂತೆ ಕಾಣುತ್ತದೆ. ಮಾಸೂರು, ತುಮ್ಮಿನಕಟ್ಟೆ ಮನೆತನದಲ್ಲಿರುವ ಪ್ರಾಚೀನ ಹಸ್ತಲಿಖಿತಗ್ರಂಥಗಳ ಮೇಲೆ ' ವಿದ್ಯಾಧೀಶ ' ಎಂದು ಇವರ ಹೆಸರು ಮತ್ತು ಅದರ ಕೆಳಗೆ ಇವರ ಮಕ್ಕಳಾದ ' ವೇದವ್ಯಾಸ ' ಎಂಬ ಹೆಸರುಗಳು ಇರುತ್ತವೆ. ಇವರು ಶ್ರೀಸತ್ಯಾಭಿನವತೀರ್ಥರ ಕಾಲದವರೆಗೂ ಇದ್ದರು. ಶ್ರೀಸತ್ಯಾಭಿನವತೀರ್ಥರು ಒಮ್ಮೆ ಕೃಷ್ಣಾತೀರದ ಕೋಲ್ಹಾಪುರ ಎಂಬಲ್ಲಿ ವೆಂಕಣ್ಣ ಎಂಬ ಗೃಹಸ್ಥನ ಮನೆಯಲ್ಲಿ ಪೂಜೆ ಮಾಡುತ್ತಿದ್ದಾಗ ನೈವೇದ್ಯದ ಸಮಯದಲ್ಲಿ ಬೆಂಕಿಹತ್ತಲು ಇವರೇ ಸಾಹಸಮಾಡಿ ಶ್ರೀಗಳವರನ್ನು ಪಾರುಮಾಡಿದರು ಎಂದು ಗುರುವಂಶಕಥಾಕಲ್ಪತರುವಿನಲ್ಲಿ ಉಲ್ಲೇಖಿಸಲಾಗಿದೆ.

ತದಾನೀಂ ದೈವಯೋಗಾತ್ತು ಮಹಾನಗ್ನಿರ್ವಿವೇಶ ಹ ।
ತದ್ಗೃಹಂ ಪರಿತೋ ದಗ್ಧುಮಾರಭತ್ ಸಹಸಾಹನಿ ॥
ತದ್ ದೃಷ್ಟ್ವಾ ಪ್ರಥಮಂ ವಿದ್ಯಾಧೀಶಾಚಾರ್ಯಾಃ ಸಮಾಗತಾಃ ।
ಪರಿತೋಥಾವಮಾನಾಸ್ತೇ ಲೋಕಾನಾಹೂಯ ಸರ್ವಶಃ ॥

ಇತ್ಯಾದಿಯಾಗಿ ಇವರ ಸಾಹಸದ ಉಲ್ಲೇಖವಿದೆ. ಇವರಿಗೆ ಮಕ್ಕಳಾಗಲಿಲ್ಲ. ಆದ್ದರಿಂದ ತಮ್ಮ ಅಣ್ಣ ಆನಂದಾಚಾರ್ಯರ ಮಗ ವೇದವ್ಯಾಸನನ್ನು ದತ್ತಕ ತೆಗೆದುಕೊಂಡರು. ಈ ವೇದವ್ಯಾಸರಿಂದ ಮಾಸೂರು-ತುಮ್ಮಿನಕಟ್ಟೆ ಪಾಂಡುರಂಗಿ ಮನೆತನಗಳು ಬಂದವು. ಆನಂದಾಚಾರ್ಯರಿಂದ ಮಿಶ್ರಕೋಟಿ ಮನೆತನವು ಬಂದಿತು.

## ರಾಜಮನ್ನಾರಿಯ ಪಾಂಡುರಂಗಿ ಬಾಬಾಚಾರ್ಯರು (ಶ್ರೀಸತ್ಯವಿಜಯರು) (೧೬೫೦–೧೭೩೭)

ಇವರು ಗದ್ವಾಲದ ಶ್ರೀನಿವಾಸಾಚಾರ್ಯರ ಮಕ್ಕಳು. ರಾಜಮನ್ನಾರಿಯಲ್ಲಿ ನೇರುಸ್ವಾಮಿಯು ಕಟ್ಟಿಸಿದ ಅಗ್ರಹಾರದಲ್ಲಿ ಇದ್ದರು. ನಿತ್ಯ ಅಗ್ನಿಹೋತ್ರಿ

ಗಳಾಗಿದ್ದು ಅನೇಕ ಯಜ್ಞಯಾಗಾದಿಗಳನ್ನು ಮಾಡಿದರು. ಒಮ್ಮೆ ಇವರು ಹೀಗೆ ಒಂದು ಯಾಗದಲ್ಲಿ ತೊಡಗಿದಾಗ ಶ್ರೀಸತ್ಯಪೂರ್ಣರು ಇವರ ಊರಿಗೆ ಬಂದರು. ಇವರ ಗುರುಭಕ್ತಿಯನ್ನು ಪರೀಕ್ಷೆ ಮಾಡಬೇಕೆಂದು ಶ್ರೀಗಳು ನಿಮ್ಮ ಯಾಗದ ಸಾಮಾನುಗಳನ್ನೆಲ್ಲ ಹರಿದ್ರಾನದಿಯಲ್ಲಿ ಚೆಲ್ಲಿ ಕೂಡಲೇ ಬರಬೇಕೆಂದು ಹೇಳಕಳಿಸಿದರು. ಗುರುಗಳ ಆಜ್ಞಾಪಾಲನೆಯೇ ಮಹಾಯಾಗ ಎಂದು ಭಾವಿಸಿ ಇವರು ಅದೇ ರೀತಿಮಾಡಿ ಗುರುಗಳ ದರ್ಶನಕ್ಕೆ ಬಂದರು. ಇದರಿಂದ ಸಂತುಷ್ಟರಾದ ಗುರುಗಳು ಇವರಿಗೆ ಆಶ್ರಮಕೊಟ್ಟು ಶ್ರೀಸತ್ಯವಿಜಯರು ಎಂದು ಕರೆದರು. ಮುಂದಿನ ಇವರ ಚರಿತ್ರೆಯನ್ನು ಶ್ರೀಸತ್ಯವಿಜಯರ ಚರಿತ್ರೆಯಲ್ಲಿ ಹೇಳಿದ್ದೇವೆ. ದಕ್ಷಿಣದೇಶದ ಪಾಂಡುರಂಗಿಗಳೆಲ್ಲ ಇವರ ವಂಶದವರು. ಕುಂಭಕೋಣದ ಸರಕಾರೀ ಕಾಲೇಜದ ಪ್ರಿನ್ಸಿಪಾಲರಾಗಿದ್ದ ಪಿ. ರಾಮಚಂದ್ರರಾಯರು, ಇವರ ಮಕ್ಕಳಾದ ಪಿ. ಭೀಮನ್ ಈಗ ಉತ್ತರಪ್ರದೇಶದ ಮುಖ್ಯ ಕಾರ್ಯದರ್ಶಿಗಳಾಗಿದ್ದವರು, ಶ್ರೀಸತ್ಯಧ್ಯಾನರ ಕಾಲದಲ್ಲಿ ಮದ್ರಾಸದಲ್ಲಿ ಅನೇಕ ವರ್ಷ ಉತ್ತರಾದಿ ಮಠಾಧಿಕಾರಿ ಗಳಾಗಿದ್ದ ಮಧ್ವರಾಯಾಚಾರ್ಯರು, ಕುಂಭಕೋಣದ ಘನಪಾಠಿ ಕೃಷ್ಣಮೂರ್ತಿ ಆಚಾರ್ಯರು, ಪ್ರಯಾಗ ಮಾಧವಾಚಾರ್ಯರು ಇವರೆಲ್ಲ ಈ ಬಾಬಾಚಾರ್ಯರ ಸಂತಾನದವರು. ಇವರಿಗೆ ಬಾಳಾಚಾರ್ಯರೆಂದೂ ಹೆಸರಿದ್ದಂತೆ ಕಾಣುತ್ತದೆ. ಸತ್ಕಥಾದಲ್ಲಿ ಬಾಳಾಚಾರ್ಯರು ಎಂದು ಬರೆದಿದ್ದಾರೆ. ಆದರೆ ಮಠದ ಪೀಳಿಗೆ ಗಳಲ್ಲಿ ಬಾಬಾಚಾರ್ಯರು ಎಂದೇ ಇದೆ.

## ಮಾಸೂರು ಪಾಂಡುರಂಗಿ ನರಸಿಂಹಾಚಾರ್ಯರು (೧೭೦೦-೧೭೪೦)

ಇವರು ಶ್ರೀವಿದ್ಯಾಧೀಶಾಚಾರ್ಯರ ಮೊಮ್ಮಕ್ಕಳು. ಶ್ರೀವಿದ್ಯಾಧೀಶ ಸ್ವಾಮಿಗಳವರ ಪೂರ್ವಾಶ್ರಮದ ಮಕ್ಕಳಾದ ಕೃಷ್ಣಾಚಾರ್ಯರಿಗೆ ಆನಂದಾ-ಚಾರ್ಯರು ಮತ್ತು ವಿದ್ಯಾಧೀಶಾಚಾರ್ಯರು ಎಂದು ಇಬ್ಬರು ಮಕ್ಕಳಿದ್ದುದನ್ನು ಈ ಹಿಂದೆ ನೋಡಿದ್ದೇವೆ. ಈ ವಿದ್ಯಾಧೀಶಾಚಾರ್ಯರ ಮಕ್ಕಳು ವೇದವ್ಯಾಸಾ-ಚಾರ್ಯರು. ಈ ವೇದವ್ಯಾಸಾಚಾರ್ಯರ ಮಕ್ಕಳೇ ಮಾಸೂರು ಪಾಂಡುರಂಗಿ ನರಸಿಂಹಾಚಾರ್ಯರು. ಇವರು ಮಾಸೂರಲ್ಲಿ ನೆಲೆಸಿದ್ದು ನಿಶ್ಚಿತವಾಗಿ ತಿಳಿದು ಬರುತ್ತದೆ. ಇವರು ಶ್ರೀಸತ್ಯಬೋಧತೀರ್ಥರ ಸಮಕಾಲೀನರು. ಶ್ರೀಸತ್ಯಬೋಧ ವಿಜಯದಲ್ಲಿ ಅನೇಕಸಲ ಇವರ ಉಲ್ಲೇಖವು ಬರುತ್ತದೆ.

ಅಥ ಪಥಿ ನರಸಿಂಹಾಖ್ಯಾಭೃತಾ ಸೂರಿಣಾಲಮ್
ಕೃತನತಿನುತಿನಾ ಸಂಪ್ರಾರ್ಥಿತಃ ಪ್ರಾರ್ಥನೀಯಃ ।
ಅಧಿಗತತದಗಾರೋ ದ್ವಿತ್ರಿಘಸ್ರೇಷ್ವವಾಪ್ತ-
ಪ್ರಚುರತರ ಸಪರ್ಯೋಽಪ್ರಿಯತಾತೀವ ಸೋಽತ್ರ ॥

(ಸರ್ಗ ೧೪, ಶ್ಲೋಕ ೯೫)

ಶ್ರೀಸತ್ಯಬೋಧರು ಹರಿಹರಕ್ಷೇತ್ರದಿಂದ (ಪಶ್ಚಿಮದಿಕ್ಕಿಗೆ) ಹೊರಟು ವರದಾನದಿಗೆ ಮತ್ತು ಸವಣೂರಿಗೆ ಬರುವ ಮಾರ್ಗದಲ್ಲಿ ನರಸಿಂಹಾಚಾರ್ಯರಿಂದ ಪ್ರಾರ್ಥಿತರಾಗಿ ಅವರ ಮನೆಯಲ್ಲಿ ಎರಡು ಮೂರು ದಿನ ಮಹಾಪೂಜೆಯನ್ನು ಮಾಡಿ ಬಹಳ ಸಂತೋಷಪಟ್ಟರು ಎಂದು ಒಮ್ಮೆ ಇವರನ್ನು ಉಲ್ಲೇಖಿಸಲಾಗಿದೆ.

ತೇ ಪಾಂಡುರಂಗ್ಯುಪಪದಾಃ ಮಹಾಧಿಯಃ
ನೃಸಿಂಹಸಂಜ್ಞಾಃ ಸಪರಿಗ್ರಹಾತ್ಮಜಾಃ ।
ಇಭ್ಯೈರುದಾರೈಃ ಸಹ ಧರ್ಮಿಣೇಯುತೈಃ
ಛಾತ್ರೈಶ್ಚ ಸಾಕಮ್ ರಥಕಟ್ಯಯಾ ವ್ರಜನ್ ॥

(ಸರ್ಗ ೧೫, ಶ್ಲೋಕ ೬)

(ಸವಣೂರಿನಲ್ಲಿ ಶ್ರೀಸತ್ಯಬೋಧರು ಚಾತುರ್ಮಾಸಕ್ಕೆ ಕುಳಿತಾಗ) ಮಹಾಮೇಧಾವಿಗಳಾದ ಪಾಂಡುರಂಗೀ ನರಸಿಂಹಾಚಾರ್ಯರು ಪತ್ನೀಪುತ್ರ ಸಮೇತರಾಗಿ ಮತ್ತು ಕುಟುಂಬಸಹಿತರಾಗಿ ತಮ್ಮ ಅನೇಕ ದಾನಶೀಲರಾದ ಶಿಷ್ಯರೊಡನೆ ಅನೇಕ ಚಕ್ಕಡಿಗಳಲ್ಲಿ ಬಂದರು ಎಂದು ಇನ್ನೊಮ್ಮೆ ಉಲ್ಲೇಖಿಸಲಾಗಿದೆ. ಇದೇ ಸಂದರ್ಭದಲ್ಲಿ ಪಾಂಡುರಂಗೀ ಅಣ್ಣಯ್ಯಾಚಾರ್ಯರೆಂಬವರು ಶ್ರೀಸತ್ಯಬೋಧ ಶ್ರೀಪಾದಂಗಳವರಲ್ಲಿ ಓದುತ್ತಿದ್ದರೆಂದೂ ಹೇಳಿದೆ.

ಸತ್ಪಾಂಡುರಂಗಾನ್ವಯಜಾಗ್ರಜಾರ್ಯಸತ್-
ಲಕ್ಷ್ಮಂಡಿಮತ್ತೀರ್ಥಜರಷ್ವಧೀಶ್ವರೌ ।
ಮಠೇ ಪಠಂತೌ ಪಠತೇಷ್ವನುತ್ತಮೌ
ಗುರೋರವಾಸ್ತಾಂ ಪರಿವಾರಸಂಯುತೌ ॥

(ಸರ್ಗ ೧೫, ಶ್ಲೋಕ ೭)

ಪಾಂಡುರಂಗೀ ವಂಶದ ಅಣ್ಣಯ್ಯಾಚಾರ್ಯರು ಮತ್ತು ಲಕ್ಕುಂಡೀ ಆನಂದ-ತೀರ್ಥಾಚಾರ್ಯರ ಮಕ್ಕಳಾದ ರಘುಪತ್ಯಾಚಾರ್ಯರು ಶ್ರೀಸತ್ಯಬೋಧತೀರ್ಥರಲ್ಲಿ ಓದುತ್ತ ಮಠದಲ್ಲಿಯೇ ಪರಿವಾರಸಮೇತರಾಗಿ ವಾಸವಾಗಿದ್ದರು.

ಈ ಸಂದರ್ಭದಲ್ಲಿ ಶ್ರೀಗಳವರ ದರ್ಶನಕ್ಕೆ ಬಂದ ಗಾರ್ಲವಾಡ ಶ್ರೀನಿವಾಸಾ-ಚಾರ್ಯರು, ಉಮರ್ಜೀ ರಾಮಕೃಷ್ಣಾಚಾರ್ಯರು, ಗಲಗಲೀ ಮುದ್ಗಲಾ-ಚಾರ್ಯರು, ಅಣ್ಣೀಗೇರೀ ಜಯತೀರ್ಥಾಚಾರ್ಯರು, ಬಂಕಾಪುರ ರಾಮಚಂದ್ರಾ ಚಾರ್ಯರು ಮೊದಲಾದವರ ಉಲ್ಲೇಖಗಳೂ ಇವೆ.

ಗುರುವಂಶಕಥಾಕಲ್ಪತರುವಿನಲ್ಲಿಯೂ ಶ್ರೀಗಳವರು ಸವಣೂರು ನಗರವನ್ನು ಪ್ರವೇಶಮಾಡುವಾಗ ಮೆರವಣಿಗೆಯಲ್ಲಿ ಪಾಂಡುರಂಗಿ ನರಸಿಂಹಾಚಾರ್ಯರೂ ಅಣ್ಣಯ್ಯಾಚಾರ್ಯರೂ ಶ್ರೀಗಳವರ ಪಲ್ಲಕ್ಕಿಯ ಸಮೀಪದಲ್ಲಿ ಹೋಗುತ್ತಿದ್ದರು ಎಂದು ಹೇಳಿದೆ.

ಸಮೀಪೇ ತು ಯಾತಾಃ ತದಾ ಪಾಂಡುರಂಗೀ
ನೃಸಿಂಹಾಗ್ರಜಾದ್ಯೈಃ ದ್ವಿಜೇಂದ್ರೈಃ ಸಹೈವ ।

(ಸರ್ಗ ೨೬, ಶ್ಲೋಕ ೨೭)

ನಗರಪ್ರವೇಶಮಾಡುವಾಗ ಪಾಂಡುರಂಗೀ ನರಸಿಂಹಾಚಾರ್ಯರು ಮತ್ತು ಅಣ್ಣಯ್ಯಾಚಾರ್ಯರೊಡನೆ ಅನೇಕ ವಿದ್ವಾಂಸರು ಶ್ರೀಗಳವರ ಪಲ್ಲಕ್ಕಿಯ ಹತ್ತಿರದಲ್ಲಿಯೇ ಹೋಗುತ್ತಿದ್ದರು.

ನವರಾತ್ರಿಯಲ್ಲಿ ಶ್ರೀಗಳವರು ಅನೇಕ ವಿದ್ವಾಂಸರನ್ನು ಕರೆಯಿಸಿಕೊಂಡದ್ದನ್ನು ಹೇಳುವಾಗಲೂ ಇವರ ಉಲ್ಲೇಖವಿದೆ.

ತದ್ದೇಶಸ್ಥಾಃ ಪಾಂಡುರಂಗೀ ನೃಸಿಂಹಾಚಾರ್ಯಶೇಖರಾಃ ।
ಅಗ್ರಜಾಖ್ಯಾಶ್ಚ ಮನ್ನಾರೀ ಶ್ರೀನಿವಾಸಾಚಾರ್ಯಪೂರ್ವಕಾಃ ॥

(ಸರ್ಗ ೨೭, ಶ್ಲೋಕ ೭)

(ಸವಣೂರು ಪ್ರಾಂತದ ಹತ್ತಿರದ ಮಾಸೂರಲ್ಲಿ ಇರುವ) ಪಾಂಡುರಂಗೀ ನರಸಿಂಹಾಚಾರ್ಯರೂ ಅಣ್ಣಯ್ಯಾಚಾರ್ಯರೂ ಮನ್ನಾರಿ ಶ್ರೀನಿವಾಸಾ-ಚಾರ್ಯರೂ (ನವರಾತ್ರಿಯಲ್ಲಿ) ಶ್ರೀಗಳವರ ದರ್ಶನಕ್ಕೆ ಬಂದರು. ಈ ಸಂದರ್ಭ

ದಲ್ಲಿಯೂ ಗಾರ್ಲವಾಡ ಶ್ರೀನಿವಾಸಾಚಾರ್ಯರು, ಗಲಗಲೀ ಮುದ್ಗಲಾಚಾರ್ಯರು, ಶ್ರೀಸತ್ಯನಾಥರ ಪೂರ್ವಾಶ್ರಮದ ವಂಶದ ರಘುನಾಥಾಚಾರ್ಯರು, ಯಾದವಾರ್ಯರ (ದೌಹಿತ್ರ) ಸಂತಾನಕ್ಕೆ ಸೇರಿದ ಶ್ರೀಪತ್ಯಾಚಾರ್ಯರು, ಉಮರ್ಜೀ ಕೃಷ್ಣಾಚಾರ್ಯರು, ಕಾಂಚಿಯಿಂದ ಬಂದ ವ್ಯಾಸ ಶ್ರೀನಿವಾಸಾಚಾರ್ಯರು (ಶ್ರೀಸತ್ಯಪೂರ್ಣರ ಪೂರ್ವಾಶ್ರಮದ ವಂಶದವರು) ಇವರೆಲ್ಲರ ಉಲ್ಲೇಖ ಬಂದಿದೆ.

ಹೀಗೆ ಈ ಪಾಂಡುರಂಗೀ ನರಸಿಂಹಾಚಾರ್ಯರು ಅನೇಕ ಶಿಷ್ಯರಿಗೆ ಪಾಠ ಪ್ರವಚನ ಮಾಡುತ್ತ ಮಾಸೂರಲ್ಲಿದ್ದರು. ಮಾಸೂರಲ್ಲಿ ಕುಮುದ್ವತೀತೀರದಲ್ಲಿ ಇವರ ವೃಕ್ಷವಿದೆ. ಪಾಂಡುರಂಗೀ ಮನೆತನದವರು ಇವರ ಕಾಲದಲ್ಲಿ ಮಾಸೂರಿಗೆ ಬಂದದ್ದು ನಿಶ್ಚಿತ. ಇವರ ತಂದೆಯವರಾದ ವೇದವ್ಯಾಸಾಚಾರ್ಯರ ಕಾಲದಲ್ಲಿಯೇ ಬಂದರೂ ಬಂದಿರಬಹುದು.

## ಮಾಸೂರು ಪಾಂಡುರಂಗಿ ಬಾಳಯ್ಯಾಚಾರ್ಯರು (೧೭೫೦-೧೮೩೦)

ಇವರು ಮೇಲೆ ಹೇಳಿದ ಮಾಸೂರು ಪಾಂಡುರಂಗಿ ನರಸಿಂಹಾಚಾರ್ಯರ ಮಕ್ಕಳು. ಅಸಾಧಾರಣ ವಿದ್ವಾಂಸರು ಮತ್ತು ತಪಸ್ವಿಗಳು. ಮಾಸೂರಲ್ಲಿಯೇ ವಾಸವಾಗಿದ್ದರು. ಇವರು ಶ್ರೀಸತ್ಯಸಂಧರು, ಶ್ರೀಸತ್ಯವರರು ಮತ್ತು ಶ್ರೀಸತ್ಯಧರ್ಮರ ಕಾಲದಲ್ಲಿ ಶ್ರೀಮದುತ್ತರಾದಿಮಠದಲ್ಲಿ ಅತೀವ ಮನ್ನಣೆ ಪಡೆದ ವಿದ್ವಾಂಸರಾಗಿದ್ದರು. ಶ್ರೀಸತ್ಯಸಂಧರ ಜೊತೆಗೆ ಪ್ರಯಾಗ, ಕಾಶಿ, ಗಯಾ ಕ್ಷೇತ್ರಗಳಿಗೆ ಹೋಗಿದ್ದರು. ಶ್ರೀವಿದ್ಯಾಧೀಶರ ಕಾಲದಲ್ಲಿ ವೈಷ್ಣವ ದೀಕ್ಷೆ ಪಡೆದ ಗಯಾವಾಡರು ಮತ್ತೆ ಬಹಳ ದಕ್ಷಿಣೆ ಕೇಳತೊಡಗಿದ್ದರಿಂದ ಶ್ರೀಸತ್ಯಸಂಧರು ಅವರನ್ನು ನಿಯಂತ್ರಣಕ್ಕೆ ತಂದ ಕಾಲದಲ್ಲಿ ಈ ಪಾಂಡುರಂಗಿ ಬಾಳಯ್ಯಾಚಾರ್ಯರೂ ಶ್ರೀಗಳವರ ಜೊತೆಗಿದ್ದರು. ಕಾಶಿಯಲ್ಲಿ ಶ್ರೀಸತ್ಯಬೋಧರ ಮೃತ್ತಿಕಾ ವೃಂದಾವನದ ಸ್ಥಾಪನೆ, ಪ್ರಯಾಗದಲ್ಲಿ ಶ್ರೀವಿದ್ಯಾಧೀಶರು ಕಟ್ಟಿಸಿದ ಶ್ರೀಮದುತ್ತರಾದಿಮಠದ ಜೀರ್ಣೋದ್ಧಾರ ಈ ಕಾರ್ಯಗಳನ್ನು ಶ್ರೀಸತ್ಯಸಂಧರು ನೆರವೇರಿಸಿದಾಗಲೂ ಅವರ ಜೊತೆಗಿದ್ದರು. ಬಾಳಯ್ಯಾಚಾರ್ಯರ ಕಾಲದಲ್ಲಿ ಪಾಂಡುರಂಗಿ ಮನೆತನದವರಿಗೆ ವಿಪುಲ ಐಶ್ವರ್ಯವಿತ್ತೆಂದು ಅವರ ಆರು ಜನ ಮಕ್ಕಳು ಕ್ರಿ.ಶ. ೧೮೩೩ ರಲ್ಲಿ ಮಾಡಿಕೊಂಡ ವಾಟಣೀಪತ್ರದಿಂದ ತಿಳಿದುಬರುತ್ತದೆ. ಅದರಲ್ಲಿ ಧಾರವಾಡ

ಮತ್ತು ಶಿವಮೊಗ್ಗಾ ಜಿಲ್ಲೆಯಲ್ಲಿಯ ಸುಮಾರು ಮೂವತ್ತು ಗ್ರಾಮಗಳಲ್ಲಿಯ ಜಮೀನುಗಳ ಉಲ್ಲೇಖವಿದೆ. ಅನೇಕ ಇನಾಮು ಗ್ರಾಮಗಳ ಮತ್ತು ವರ್ಷಾಶನಗಳ ಉಲ್ಲೇಖವಿದೆ. ಶ್ರೀವಿದ್ಯಾಧೀಶ ಸ್ವಾಮಿಗಳವರ ಮರಿಮಕ್ಕಳಾದ ವೇದವ್ಯಾಸಾ-ಚಾರ್ಯರು, ನರಸಿಂಹಾಚಾರ್ಯರು ಮತ್ತು ಬಾಳಯ್ಯಾಚಾರ್ಯರು ಈ ಮೂರು ತಲೆಮಾರು ಪಾಂಡುರಂಗಿ ಮನೆತನದವರು ಮಾಸೂರಿನಲ್ಲಿ ಇದ್ದರು. ಮುಂದೆ ಇವರ ಮಕ್ಕಳು ಶಿವಮೊಗ್ಗಾ, ತುಮ್ಮಿನಕಟ್ಟೆ, ಶಿಕಾರಿಪುರ, ಕಿತ್ತೂರು, ಕುರುಬಗಟ್ಟಿ, ಇತ್ಯಾದಿ ಬೇರೆ ಬೇರೆ ಊರುಗಳಿಗೆ ಹೋಗಿ ನೆಲೆಸಿದರು. ಶ್ರೀಕೇಶವಾ-ಚಾರ್ಯರ ಸಂತತಿಯವರು ಕಡಕೋಳ, ಭಂಡಿವಾಡ, ಕಲಘಟಗಿ ಇತ್ಯಾದಿ ಸ್ಥಳಗಳಲ್ಲಿ ನೆಲೆಸಿದರು. ಆನಂದಾಚಾರ್ಯರ ಮಕ್ಕಳು ಮಿಶ್ರಕೋಟೆಯಲ್ಲಿ ನೆಲೆಸಿದರು. ಹೀಗೆ ಮೂಲಪುರುಷ ಆನಂದಭಟ್ಟಾರಕರವರೆಗೆ ಪುಣತಾಂಬೆಯಲ್ಲಿಯೂ ನಂತರ ಮೂರು ತಲೆಮಾರು ಪಂಢರಪುರ, ಶೂರ್ಪಾಲಿಗಳಲ್ಲಿಯೂ, ಅನಂತರ ಮೂರು ತಲೆಮಾರು ಮಾಸೂರಿನಲ್ಲಿಯೂ ಬಳಿಕ ಧಾರವಾಡ ಶಿವಮೊಗ್ಗಾ ಜಿಲ್ಲೆಗಳ ಅನೇಕ ಗ್ರಾಮಗಳಲ್ಲಿಯೂ ದಕ್ಷಿಣದೇಶದ ತಂಜಾವೂರು ಕುಂಭಕೋಣಗಳಲ್ಲಿಯೂ ಪಾಂಡುರಂಗಿ ಮನೆತನದವರು ಹರಡಿದರು. ಈಗಿನ ತಲೆಮಾರಿನವರನ್ನು ಊರುಗಳ ಆಧಾರದ ಮೇಲೆ ವರ್ಗೀಕರಣ ಮಾಡುವದೇ ಸಾಧ್ಯವಿಲ್ಲ. ಅವರವರ ವಿಭಾಗದ ವಂಶಾವಳಿಯನ್ನು ಅವರೇ ಸಿದ್ಧಪಡಿಸಿ ಇಟ್ಟುಕೊಳ್ಳಬೇಕು.

ಮಾಸೂರು ಬಾಳಯ್ಯಾಚಾರ್ಯರ ಕಾಲದಲ್ಲಿಯೇ ಅವರು ಧರ್ಮಪುರಿಯಲ್ಲಿದ್ದ ಶ್ರೀವಿದ್ಯಾಧೀಶ ಸ್ವಾಮಿಗಳವರ ಮೂರ್ತಿಯನ್ನು ಮಾಸೂರಿಗೆ ತಂದು ಸ್ಥಾಪಿಸಿದರು. ಮುಂದೆ ೧೯೧೪ರಲ್ಲಿ ರಾಣೇಬೆನ್ನೂರಿನಲ್ಲಿ ಮಠವು ಸ್ಥಾಪಿತವಾಯಿತು. ಈ ಮೂರ್ತಿಯನ್ನು ಕೆಲವರ್ಷ ಮೊದಲೇ ರಾಣೇಬೆನ್ನೂರಿಗೆ ತಂದು ಅಲ್ಲಿಯ ನರಸಿಂಹದೇವರ ಗುಡಿಯಲ್ಲಿ ಇಡಲಾಗಿತ್ತು. ಈ ಬಾಳಯ್ಯಾಚಾರ್ಯರಿಗೆ ಮಾಸೂರು, ಚಿಕ್ಕೇರೂರು, ಹಲಗೇರಿ, ರಾಣೇಬೆನ್ನೂರು, ಆಲದಕಟ್ಟೆ ಇತ್ಯಾದಿ ಅನೇಕ ಊರುಗಳ ನಾಯಕರೂ ದೇಶಪಾಂಡೆಯವರೂ ಶಿಷ್ಯರಾಗಿದ್ದರು. ಇವರು ನೂರಾರು ವಿದ್ಯಾರ್ಥಿಗಳಿಗೆ ಅನ್ನೋದಕಕೊಟ್ಟು ಪಾಠಹೇಳಿ ವಿದ್ವಾಂಸರನ್ನಾಗಿ ಮಾಡಿದರು. ಕೃಷ್ಣಾತೀರದ ಆಲೂರು ಗ್ರಾಮದ ಓರ್ವ ವೈದಿಕ ಕುಟುಂಬದವರು ಇವರ ಶಿಷ್ಯರಾಗಿದ್ದರು. ಅವರ ಮನೆಯಲ್ಲಿ ಇವರ ಸುಂದರವಾದ ಶಿಲಾಮೂರ್ತಿಯಿದೆ. ಆ ಮೂರ್ತಿಗೆ ಪ್ರತಿನಿತ್ಯ ಕೃಷ್ಣಾನದಿಯ ನೀರಿನಿಂದ ಅಭಿಷೇಕವಾಗಬೇಕೆಂಬ ನಿಯಮವಿದೆ. ಈ ಮೂರ್ತಿಯು ಆಲೂರು ಮತ್ತು ಚಿಪ್ಪಲಗಿ

ಗ್ರಾಮಗಳಲ್ಲಿ ಅವರ ಮನೆಯಲ್ಲಿಯೇ ಈವರೆಗೆ ಪೂಜಿಸಲ್ಪಡುತ್ತಿತ್ತು. ಈಗ ಈ ಗ್ರಾಮಗಳು ನೀರಾವರೀ ಯೋಜನೆಯಲ್ಲಿ ಮುಳುಗಿ ಹೋದದ್ದರಿಂದ ಯಲಗುರ್ದ ದಲ್ಲಿ ಈ ಆಲೂರು ಮನೆತನದವರ ಮನೆಯಲ್ಲಿಯೇ ಪೂಜಿಸಲ್ಪಡುತ್ತಿದೆ.

ಅಪರೋಕ್ಷಜ್ಞಾನಿಗಳೂ ತಪಸ್ವಿಗಳೂ ಆದ ಶ್ರೀಬಾಳಯ್ಯಾಚಾರ್ಯರು ಸ್ವಪ್ನದಲ್ಲಿ ಬಂದು ಅನೇಕರಿಗೆ ಮಾರ್ಗದರ್ಶನ ಮಾಡಿದ ನಿದರ್ಶನಗಳಿವೆ. ಸ್ವತಃ ತಪಸ್ವಿಗಳಾದ ತಿರುಪತಿ ಪಾಂಡುರಂಗಿ ಹುಚ್ಚಾಚಾರ್ಯರಿಗೆ ಇವರು ಸ್ವಪ್ನದಲ್ಲಿ ದರ್ಶನಕೊಟ್ಟು ಅನುಗ್ರಹ ಮಾಡಿದ್ದನ್ನು ಅವರು ಹೇಳುತ್ತಿದ್ದರು. ಇಂದು ಧಾರವಾಡ ಜಿಲ್ಲೆಯ ತುಂಬ ಹರಡಿವ ಬಹುಮಟ್ಟಿನ ಪಾಂಡುರಂಗಿ ಕುಟುಂಬಗಳು ಮಾಸೂರಿನ ಬಾಳಯ್ಯಾಚಾರ್ಯರ ಆರುಜನ ಮಕ್ಕಳ ಸಂತತಿಯವರೇ ಆಗಿದ್ದಾರೆ. ಇವರು ಮೂಲಪುರುಷ ಆನಂದಭಟ್ಟಾರಕರಿಂದ ಏಳನೆಯ ತಲೆಮಾರಿನವರು. ಇಂದಿನ ಪಾಂಡುರಂಗಿಯವರು ಇವರಿಂದ ಆರು ಮತ್ತು ಏಳನೆಯ ತಲೆಮಾರಿನವರು.

## ಮೈಸೂರು ಪಾಂಡುರಂಗಿ ಕೃಷ್ಣಾಚಾರ್ಯರು (೧೮೦೦-೧೮೭೦)

ಇವರು ಮಾಸೂರು ಬಾಳಯ್ಯಾಚಾರ್ಯರ ಹಿರಿಯ ಮಕ್ಕಳು. ಶ್ರೀಸತ್ಯ-ಸಂಕಲ್ಪರು ಶ್ರೀಸತ್ಯಸಂತುಷ್ಟರು ಮತ್ತು ಶ್ರೀಸತ್ಯಪರಾಯಣರ ಕಾಲದಲ್ಲಿ ಶ್ರೀಮದುತ್ತರಾದಿಮಠದಲ್ಲಿ ಬಹಳ ಮನ್ನಣೆ ಪಡೆದ ವಿದ್ವಾಂಸರು. ಅದರಲ್ಲಿಯೂ ಶ್ರೀಸತ್ಯಸಂತುಷ್ಟರ ವಿಶೇಷವಾದ ಪ್ರೀತಿಗೆ ಪಾತ್ರರಾದವರು. ಕಾಶೀ ತಿಮ್ಮಣ್ಣಾ-ಚಾರ್ಯರು, ಬ್ರಹ್ಮಾಂಡ ವಿಷ್ಣುಪಾದಾಚಾರ್ಯರು, ತಿರುಪತಿ ಶ್ರೀನಿವಾಸಾ-ಚಾರ್ಯರು ಇವರೆಲ್ಲ ಇವರ ಸಮಕಾಲೀನರು. ಶ್ರೀಸತ್ಯಸಂತುಷ್ಟರಿಗೆ ಪೂರ್ವಾ ಶ್ರಮದಿಂದಲೂ ಅಭಿಮಾನಕ್ಕೆ ಪಾತ್ರರಾದ ಆನಂದಾಳ್ವಾರರು ಎಂಬ ಮೇಲು-ಕೋಟೆಯ ಶ್ರೀವೈಷ್ಣವ ವಿದ್ವಾಂಸರಿದ್ದರು. ಅವರಿಗೂ ಈ ಪಾಂಡುರಂಗಿ ಕೃಷ್ಣಾಚಾರ್ಯರಿಗೂ ಆಗಾಗ ವಾಕ್ಯಾರ್ಥವನ್ನು ಏರ್ಪಡಿಸಿ ಸ್ವಾಮಿಗಳವರು ಇಬ್ಬರ ವಿದ್ವತ್ತನ್ನೂ ಒರೆಗೆ ಹಚ್ಚಿಸುತ್ತಿದ್ದರು. ಇವರಿಬ್ಬರ ವಾಕ್ಯಾರ್ಥದ ಚಾತುರ್ಯವನ್ನು ವರ್ಣಿಸುವ ಹತ್ತು ಸಂಸ್ಕೃತ ಶ್ಲೋಕಗಳಿವೆ ಎಂದು ಪರಂಪರೆ ಯಿದೆ. ಆದರೆ ಅವು ಉಪಲಬ್ಧವಿಲ್ಲ. ಆನಂದಾಳ್ವಾರರ ವಂಶದವರು ಅನೇಕರು ಮೇಲುಕೋಟೆ, ಮಂಡ್ಯ, ಬೆಂಗಳೂರು, ಮೈಸೂರಿನಲ್ಲಿರುವರು. ಅವರು ಎಮ್. ಎ. ಅಂದರೆ ಮಂಡ್ಯನ್ ಆನಂದಾಳ್ವಾರ್ ವಂಶದವರೆಂದೇ ಹೇಳಿ ಕೊಳ್ಳುವರು. ಅವರಲ್ಲಿ ಪಂಡಿತರಾದವರು ಪಾಂಡುರಂಗಿ ಕೃಷ್ಣಾಚಾರ್ಯರಿಗೂ

ಆನಂದಾಳ್ವಾರರಿಗೂ ಆದ ವಾಕ್ಯಾರ್ಥದ ವಿಷಯ ಗೊತ್ತಿರುವುದನ್ನು ಹೇಳುವರು. ಮಾಸೂರು ಬಾಳಯ್ಯಾಚಾರ್ಯರ ಹಿರಿಯ ಮಕ್ಕಳಾದ ಈ ಪಾಂಡುರಂಗಿ ಕೃಷ್ಣಾಚಾರ್ಯರಿಗೆ ಐದು ಜನ ಮಕ್ಕಳು. ಇವರಲ್ಲಿ ಮೂವರು ಮೈಸೂರಿನಲ್ಲಿಯೇ ನೆಲಿಸಿ ಮೈಸೂರು ಪಾಂಡುರಂಗಿಗಳಾಗಿರುವರು. ಇವರ ಹಿರಿಯಮಗ ರಂಗಾಚಾರ್ಯರು ಶಿವಮೊಗ್ಗಾದಲ್ಲಿ ನೆಲಿಸಿ ಶಿವಮೊಗ್ಗಾ ಪಾಂಡುರಂಗಿಗಳಾದರು. ಸವಣೂರಿನಲ್ಲಿ ವಕೀಲರಾಗಿದ್ದ ರಂಗಾಚಾರ್ಯರು, ಧಾರವಾಡದಲ್ಲಿದ್ದ ಉದ್ಧವಾಚಾರ್ಯರು, ರಾಣೇಬೆನ್ನೂರಿನಲ್ಲಿದ್ದ ಗಡ್ಡದ ಹನುಮಂತಾಚಾರ್ಯರು ಇವರೆಲ್ಲ ಈ ರಂಗಾಚಾರ್ಯರ ಸಂತತಿಗೇ ಸೇರಿದವರು. ಧಾರವಾಡದಲ್ಲಿದ್ದ ಡಾ. ಆನಂದರು ಸವಣೂರಿನ ವಕೀಲ ರಂಗಾಚಾರ್ಯರ ಮೊಮ್ಮಕ್ಕಳು. ಕರ್ನಾಟಕ ಹೈಸ್ಕೂಲಿನಲ್ಲಿದ್ದ ಆರ್. ಯು. ಪಾಂಡುರಂಗಿಯವರು ಉದ್ಧವಾಚಾರ್ಯರ ಮಕ್ಕಳು.

## ನ್ಯಾಮಗೊಂಡಲದ ಪಾಂಡುರಂಗಿ ಕೋನೇರಿ ಆಚಾರ್ಯರು

(೧೭೮೦–೧೮೫೦)

ಬೆಂಗಳೂರು ವೈಯ್ಯಾಲೀಕಾವಲಿನಲ್ಲಿ ಒಂದೆರಡು ಪಾಂಡುರಂಗಿ ಮನೆತನಗಳಿರುವವು. ಆನಂದತೀರ್ಥಾಚಾರ್ಯರು, ಗೋಪಾಲಾಚಾರ್ಯರು, ರಾಮಾಚಾರ್ಯರು ಎಂಬ ಮೂರುಜನ ಸಹೋದರರು ಇದ್ದರು. ಇವರೆಲ್ಲ ಗೋರೀಬಿದನೂರಿನ ಹತ್ತಿರದ ನ್ಯಾಮಗೊಂಡಲದವರು. ಅಲ್ಲಿ ಮೊದಲು ಶ್ರೀಸತ್ಯವರರ ಮೂಲ ವೃಂದಾವನವಿದ್ದಿತು. ಈಗ ಅದು ಸಂತೇಬೆನ್ನೂರಿನಲ್ಲಿ ಇದೆ. ಶ್ರೀಸತ್ಯವರರ ಕಾಲದಲ್ಲಿ ಪಾಂಡುರಂಗಿ ಕೋನೇರೀ ಆಚಾರ್ಯರು ಎಂಬವರು ಅರವತ್ತು ಜನ ಶಿಷ್ಯರಿಗೆ ಸುಧಾಪಾಠ ಹೇಳುತ್ತ ಮೊದಲು ಸೂಲಿಬೆಲೆಗೆ ನಂತರ ನ್ಯಾಮಗೊಂಡಲಕ್ಕೆ ಬಂದು ನೆಲಿಸಿದರೆಂದೂ ತಾವು ಅವರ ಸಂತತಿಯವರೆಂದೂ ಇವರು ಹೇಳುವರು. ಧಾರವಾಡ ಶಿವಮೊಗ್ಗ ಜಿಲ್ಲೆಗಳಿಗೆ ಸೇರಿದ ಪಾಂಡುರಂಗೀ ಕುಟುಂಬಗಳ ವಂಶಾವಳಿಯಲ್ಲಿ ಕೋನೇರಿ ಆಚಾರ್ಯರು ಎಂಬ ಹೆಸರಿನವರು ಯಾರೂ ಬರುವುದಿಲ್ಲ. ಆದ್ದರಿಂದ ಈ ಕೋನೇರೀ ಆಚಾರ್ಯರು ಪಾಂಡುರಂಗಿಯವರಲ್ಲಿ ಯಾವ ಗುಂಪಿಗೆ ಸೇರಿದವರು ಎಂಬುದು ತಿಳಿದುಬರುವುದಿಲ್ಲ. ಇವರಲ್ಲಿ ಶ್ರೀವಿದ್ಯಾಧೀಶಸ್ವಾಮಿಗಳವರ ಪಾದುಕೆಗಳಿವೆ. ಜನಾರ್ದನ ಸೂರಿ ಕವಿಯಿಂದ ಶ್ರೀವಿದ್ಯಾಧೀಶ ವಿಜಯವನ್ನು ಬರೆಯಿಸಿದವರೂ ಗಡ್ಡದ ಕೋನೇರೀ ಆಚಾರ್ಯರು. ಅವರು ಪಾಂಡುರಂಗಿಯವರಾಗಿದ್ದು ಗಡ್ಡದ ಶ್ರೀನಿವಾಸಾಚಾರ್ಯರ ಸಂತತಿಗೆ ಸೇರಿದವರಿರಬಹುದು. ಆದರೆ ಅವರು ಈ ಕೋನೇರೀ ಆಚಾರ್ಯರಿಗಿಂತ ಬಹಳ ಪ್ರಾಚೀನರು.

## ಭಂಡಿವಾಡದ ಪಾಂಡುರಂಗಿ ಭೀಮಸೇನಾಚಾರ್ಯರು (೧೭೮೦–೧೮೫೦)

ಇವರು ಶ್ರೀಕೇಶವಾಚಾರ್ಯರ(ಶ್ರೀಗುರುರಾಜರ) ಮಕ್ಕಳಾದ ರತ್ನಮಾಲಾ ನರಸಿಂಹಾಚಾರ್ಯರ ಸಂತತಿಗೆ ಸೇರಿದವರು. ಅವರಿಂದ ಏಳನೆಯ ತಲೆಮಾರಿನವರು. ಇವರು ದೊಡ್ಡ ವಿದ್ವಾಂಸರೂ ತಪಸ್ವಿಗಳೂ ಆಗಿದ್ದರೆಂದು ಪ್ರತೀತಿಯಿದೆ. ಭಂಡಿವಾಡದಲ್ಲಿಯ ಪ್ರಾಣದೇವರ ದೇವಸ್ಥಾನದಲ್ಲಿ ಉತ್ಸವದ ಕಾಲದಲ್ಲಿ ನೈವೇದ್ಯದ ಅಧಿಕಾರವು ಇವರ ಕಾಲದಿಂದ ಇವರ ಕುಟುಂಬಕ್ಕೆ ಸೇರಿದೆ. ಭಂಡಿವಾಡದ ಬಾಬಾಚಾರ್ಯರು ರತ್ನಮಾಲಾ ನರಸಿಂಹಾಚಾರ್ಯರ ಮೊಮ್ಮಕ್ಕಳು, ಪ್ರಸಿದ್ಧ ವಿದ್ವಾಂಸರು, ತಪಸ್ವಿಗಳು. ಇವರಿಬ್ಬರಿಗೂ ಭಂಡಿವಾಡದ ಆಚಾರ್ಯರೆಂದೇ ಪ್ರಸಿದ್ಧಿಯಿದೆ.

## ಮೈಸೂರಿನ ಪಾಂಡುರಂಗಿ ಯದುಪತ್ಯಾಚಾರ್ಯರು (೧೮೩೦–೧೯೦೦)

ಇವರು ಶ್ರೀಸತ್ಯಕಾಮ ತೀರ್ಥರ ಕಾಲದಲ್ಲಿ ಉತ್ತರಾದಿ ಮಠದಲ್ಲಿ ಪ್ರಮುಖ ವಿದ್ವಾಂಸರಾಗಿದ್ದರು. ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನ ವಿದ್ವಾಂಸರಾಗಿದ್ದರು. ಬಕ್ಷಿ ನರಸಪ್ಪನವರು ದಿವಾನ ಹಿರಣ್ಣಪ್ಪನವರು ಬಂಗಲೆ ಬಾಲಕೃಷ್ಣರಾಯರು ಇತ್ಯಾದಿ ಲೌಕಿಕರು ಇವರಿಗೆ ಬಹಳ ಆದರ ಮಾಡುತ್ತಿದ್ದರು. ಶ್ರೀ ಸತ್ಯಕಾಮತೀರ್ಥರು ಇವರ ಪಾಂಡಿತ್ಯ ಮತ್ತು ವಾಕ್ಯಾರ್ಥಶೈಲಿಗೆ ಮೆಚ್ಚಿ ಇವರಿಗೆ ಬಂಗಾರದ ಮುದ್ರೆಗಳನ್ನು ಕೊಟ್ಟಿದ್ದರು. ಮೈಸೂರಿನಲ್ಲಿ ನೆಲೆಸಿದ್ದ ಮತ್ತು ನ್ಯಾಮಗೊಂಡಲದಲ್ಲಿ ನೆಲೆಸಿದ್ದ ಪಾಂಡುರಂಗಿಯವರ ವಂಶಾವಳಿ ಉಪಲಬ್ಧವಿಲ್ಲ ವಾದ್ದರಿಂದ ಅವರಲ್ಲಿ ಇವರು ಯಾವ ಗುಂಪಿಗೆ ಸೇರಿದವರು ಮತ್ತು ಎಷ್ಟನೆಯ ತಲೆಮಾರಿನವರು ಎಂಬುದು ತಿಳಿದುಬರುವುದಿಲ್ಲ.

## ಕುರುಬಗಟ್ಟಿ ಪಾಂಡುರಂಗಿ ಬಾಬಾಚಾರ್ಯರು (೧೮೩೦–೧೯೦೦)

ಇವರು ಮಾಸೂರು ಬಾಳಯ್ಯಾಚಾರ್ಯರ ಎರಡನೆಯ ಮಕ್ಕಳಾದ ನರಸಿಂಹಾಚಾರ್ಯರ ಮಕ್ಕಳು. ದೊಡ್ಡ ವಿದ್ವಾಂಸರು, ತಪಸ್ವಿಗಳು. ಕುರುಬ ಗಟ್ಟಿಯ ದೇಶಪಾಂಡೆಯವರು ಇವರ ಶಿಷ್ಯರು. ಕುರುಬಗಟ್ಟಿಯ ಪ್ರಾಣದೇವರ ಗುಡಿಯಲ್ಲಿಯೇ ಇದ್ದು ನೂರಾರು ವಿದ್ಯಾರ್ಥಿಗಳಿಗೆ ಪಾಠಪ್ರವಚನ ಮಾಡಿದರು. ಕುರುಬಗಟ್ಟಿಯಲ್ಲಿ ಇವರ ವೃಕ್ಷವಿದೆ. ಧಾರವಾಡ ಮತ್ತು ಪಶುಪತಿ ಹಾಳಗಳಲ್ಲಿದ್ದ

ಸ್ಟೇಶನ್ ಮಾಸ್ತರ ರಾಮಾಚಾರ್ಯರು ಅಳ್ಣಾವರಸ್ಟೇಶನ್ ಮಾಸ್ತರರಾಗಿದ್ದ ಅವರ ಮಕ್ಕಳು ಇವರೆಲ್ಲ ಈ ಸಂತತಿಗೆ ಸೇರಿದವರು.

## ತುಮ್ಮಿನಕಟ್ಟಿ ಪಾಂಡುರಂಗಿ ಹುಚ್ಚಾಚಾರ್ಯರು (೧೮೫೦–೧೯೧೬)

ಇವರು ಮಾಸೂರು ಬಾಳಯ್ಯಾಚಾರ್ಯರ ಮೂರನೆಯ ಮಕ್ಕಳಾದ ವೇದವ್ಯಾಸಾಚಾರ್ಯರ ಮೊಮ್ಮಕ್ಕಳು. ಇವರ ತಂದೆ ಬಾಳಯ್ಯಾಚಾರ್ಯರು ತುಮ್ಮಿನಕಟ್ಟೆಗೆ ಬಂದು ನೆಲಸಿ ತುಮ್ಮಿನಕಟ್ಟೆ ಬಾಳಯ್ಯಾಚಾರ್ಯರೆಂದೇ ಪ್ರಸಿದ್ಧ ರಾದರು. ಇವರಿಗೆ ಹುಚ್ಚಾಚಾರ್ಯರು ಸೀತಾರಾಮಾಚಾರ್ಯರು ಎಂದು ಇಬ್ಬರು ಮಕ್ಕಳು. ಹುಚ್ಚಾಚಾರ್ಯರು ಕುರುಬಗಟ್ಟಿ ಪಾಂಡುರಂಗಿ ಬಾಬಾ ಚಾರ್ಯರಲ್ಲಿ ನ್ಯಾಯ ವೇದಾಂತ–ಶಾಸ್ತ್ರಗಳನ್ನು ಓದಿದರು. ಧಾರವಾಡ ಜಿಲ್ಲೆ ಯಲ್ಲಿ ನಿರಂತರ ಸಂಚಾರಮಾಡುತ್ತ ಪಾಠಪ್ರವಚನ ಮಾಡುತ್ತಿದ್ದರು. ಒಂದು ಚಕ್ಕಡಿಯಲ್ಲಿ ಗ್ರಂಥಗಳು, ಒಂದು ಚಕ್ಕಡಿಯಲ್ಲಿ ವಿದ್ಯಾರ್ಥಿಗಳು, ಒಂದು ಚಕ್ಕಡಿ ಯಲ್ಲಿ ತಮ್ಮ ಕುಟುಂಬ ಮತ್ತು ಸಾಮಾನುಗಳು, ಒಂದು ಚಕ್ಕಡಿಯಲ್ಲಿ ತಾವು ಹೀಗೆ ಪರಿವಾರ ಸಮೇತ ನಿರಂತರ ಪ್ರಯಾಣ ಮಾಡುತ್ತಿದ್ದರು. ಒಂದು ಸಾವಿರದ ಎಂಟು ಜನರಿಗೆ ಶಾಂತಿಪಾಠ ಮಾಡಿಸಿದರು. ಕುರುಬಗಟ್ಟಿ ದೇಶಪಾಂಡೆಯವರ ಮಗಳು ಇವರ ಕುಟುಂಬ. ಆಗರ್ಭಶ್ರೀಮಂತರು. ದಾನಿಗಳು. ನಿರಂತರವಾಗಿ ವಿದ್ಯಾರ್ಥಿಗಳ ಅತಿಥಿಗಳ ಆರೈಕೆ ಮಾಡುತ್ತಿದ್ದರು. ತುಮ್ಮಿನಕಟ್ಟೆಯಲ್ಲಿ ಒಂದು ಜಮೀನಿನ ತುಂಬೆಲ್ಲ ತುಳಸೀಗಿಡ ಹಚ್ಚಿಸಿದ್ದರು. ಪ್ರಾಚೀನ ಹಸ್ತಲಿಖಿತ ಗ್ರಂಥ ಗಳನ್ನು ಸಂಗ್ರಹಿಸಿ ಅವುಗಳನ್ನು ಪರಿಶ್ರಮದಿಂದ ರಕ್ಷಿಸುತ್ತಿದ್ದರು. ಇವುಗಳನ್ನು ಮತ್ತು ಇನ್ನೂ ಕೆಲವನ್ನು ಸಂಗ್ರಹಿಸಿ ಇವರ ಮೊಮ್ಮಕ್ಕಳಾದ ಪ್ರೊ. ಕೆ. ಟಿ. ಪಾಂಡುರಂಗಿಯವರು ಶ್ರೀ ವಿದ್ಯಾಧೀಶ ಹಸ್ತಲಿಖಿತ ಗ್ರಂಥಾಲಯವನ್ನು ತಮ್ಮ ಮನೆಯಲ್ಲಿ ಮಾಡಿರುವರು.

ಇವರ ಕಾಲಕ್ಕೆ ಮಾಸೂರಿನಲ್ಲಿಯ ಪಾಂಡುರಂಗಿಯವರೆಲ್ಲ ಮಾಸೂರು ಬಿಟ್ಟಿದ್ದು ಕುಮುದ್ವತೀ ನದಿಯ ದಂಡೆಯ ಮೇಲಿನ ಪಾಂಡುರಂಗಿ ಅಗ್ರಹಾರವು ಹಾಳುಬಿದ್ದಿತ್ತು. ಆದ್ದರಿಂದ ಅಲ್ಲಿರುವ ಶ್ರೀ ವಿದ್ಯಾಧೀಶಸ್ವಾಮಿಗಳವರ ಮೂರ್ತಿ ಯನ್ನು ತುಮ್ಮಿನಕಟ್ಟೆಗೆ ತಂದು ತುಂಗಭದ್ರಾನದಿಯ ದಂಡೆಯ ಮೇಲೆ ಮಠ ವನ್ನು ಕಟ್ಟಿಸಬೇಕೆಂದು ಇವರು ಆಲೋಚಿಸಿದರು. ಆಗ ರಾಣೇಬೆನ್ನೂರಿನ

ನಾಯಕರು ಮತ್ತು ಇನ್ನೂ ಕೆಲವು ಪ್ರಮುಖರು ತುಮ್ಮಿನಕಟ್ಟೆಯು ಮೂಲೆ ಯಾಗುವುದರಿಂದ ರಾಣೇ ಬೆನ್ನೂರಿನಲ್ಲಿ ಮಠವನ್ನು ಕಟ್ಟಿಸಬೇಕೆಂದು ಹೇಳಿದ್ದರಿಂದ ಅವರ ಮಾತಿಗೆ ಒಪ್ಪಿ ಶ್ರೀಸತ್ಯಪ್ರಜ್ಞರ ಪೂರ್ವಾಶ್ರಮದ ತಂದೆಯವರಾದ ಪಾಂಡು ರಂಗಿ ರಂಗಾಚಾರ್ಯರು ಚಿಕ್ಕೇರೂರಿನ ಪಾಂಡುರಂಗಿ ವೆಂಕಟರಮಣಾಚಾರ್ಯರು ರಾಣೇಬೆನ್ನೂರಿನಲ್ಲಿದ್ದ ಪಾಂಡುರಂಗಿ ದಾದಾಚಾರ್ಯರು ಇವರೆಲ್ಲರ ಮತ್ತು ರಾಣೇ ಬೆನ್ನೂರು ನಾಯಕರ ಸಹಕಾರದಿಂದ ಮಾಸೂರಿನಲ್ಲಿದ್ದ ಶ್ರೀ ವಿದ್ಯಾಧೀಶ ಸ್ವಾಮಿ ಗಳವರ ಮೂರ್ತಿಯನ್ನು ರಾಣೇಬೆನ್ನೂರಿಗೆ ತಂದು ಅಲ್ಲಿಯ ನರಸಿಂಹದೇವರ ದೇವಸ್ಥಾನದಲ್ಲಿ ಇಟ್ಟರು. ಮುಂದೆ ೧೯೧೧ ರಲ್ಲಿ ಮಠವನ್ನು ಕಟ್ಟಿಸಿ ಸ್ಥಾಪನೆ ಮಾಡಿದರು.

ಪಾಂಡುರಂಗಿಯವರಲ್ಲಿ ಪರ್ಯಾಯಸ್ಥರನ್ನು ಮಾಡಿ ಪೂಜಾ ಆರಾಧ ನಾದಿಗಳು ನಡೆಯುವಂತೆ ಮಾಡಿದರು.

೧೯೧೧ ರಲ್ಲಿ ಶ್ರೀಸತ್ಯಧ್ಯಾನತೀರ್ಥರು ಸ್ವತಃ ಒಂದು ಮೂರ್ತಿಯ ಪ್ರತಿ ಷ್ಠಾಪನೆ ಮಾಡಿ ಮಠದ ಉದ್ಘಾಟನೆ ಮಾಡಿದರು. ಆಗ ಗರ್ಭಗುಡಿಯನ್ನು ಮಾತ್ರ ಕಟ್ಟಿದ್ದರು. ಶ್ರೀ ಸತ್ಯಧ್ಯಾನ ತೀರ್ಥರು ಒಂದು ಸಾವಿರ ರೂಪಾಯಿಕೊಟ್ಟು ವಿಸ್ತಾರ ವಾದ ಮಠವನ್ನು ಕಟ್ಟಿಸಲು ಅನುಗ್ರಹಮಾಡಿದರು. ಈ ಹುಚ್ಚಾಚಾರ್ಯರ ಹಿರಿಯಮಕ್ಕಳು ತಮ್ಮಣ್ಣಾಚಾರ್ಯರು. ಎರಡನೆಯ ಮಕ್ಕಳಾದ ತುಮ್ಮಿನ ಕಟ್ಟೆ ರಾಮಾಚಾರ್ಯ ಪಾಂಡುರಂಗಿಯವರು ಶತಾಯುಷಿಗಳಾಗಿದ್ದು ಇಂದಿಗೂ ಪಾಠ ಹೇಳುತ್ತಿರುವರು. ಇವರು ೧೧೦ಕ್ಕೂ ಶಿಷ್ಯರಿಗೆ ಶಾಂತಿ ಪಾಠ ಮಾಡಿಸಿರುವರು. ತಮ್ಮಣ್ಣಾಚಾರ್ಯರ ಹಿರಿಯಮಗ ಶ್ರೀನಾಥಾಚಾರ್ಯರು ಮೈಸೂರು ಸಂಸ್ಕೃತ- ಕಾಲೇಜದಲ್ಲಿ ನ್ಯಾಯ ಶಾಸ್ತ್ರದ ಪ್ರಾಧ್ಯಾಪಕರಾಗಿ ನಿವೃತ್ತರಾಗಿರುವರು. ಇವರು ಶ್ರೀಸತ್ಯಕಾಮ ಸ್ವಾಮಿಗಳವರ ಪೂರ್ವಾಶ್ರಮದ ಮರಿಮಕ್ಕಳಾದ ಮುನವಳ್ಳಿ ಯಲ್ಲಿದ್ದ ಪಾಚ್ಛಾಪುರ ತಮ್ಮಣ್ಣಾಚಾರ್ಯಗೆ ದತ್ತಕವಾದ್ದರಿಂದ ಈಗ ಪಾಚ್ಛಾಪುರ ಮನೆತನದವರಾಗಿರುವರು. ಈ ತಮ್ಮಣ್ಣಾಚಾರ್ಯರ ಮೂರನೆಯಮಕ್ಕಳು ಕೆ. ಟಿ. ಪಾಂಡುರಂಗಿಯವರು. ಶ್ರೀನಾಥಾಚಾರ್ಯರೂ ಕೆ. ಟಿ. ಪಾಂಡುರಂಗಿ ಯವರೂ ವೇದಾಂತ ಶಾಸ್ತ್ರದ ಅಧ್ಯಯನ ಅಧ್ಯಾಪನಗಳಲ್ಲಿ ತೊಡಗಿದ್ದು ಮನೆತನದ ಪರಂಪರೆಯನ್ನು ಸ್ವಲ್ಪಮಟ್ಟಿಗೆ ಮುಂದುವರಿಸುತ್ತಿರುವರು. ಈ ಹುಚ್ಚಾಚಾರ್ಯರ ತಮ್ಮಂದಿರಾದ ಸೀತಾರಾಮಾಚಾರ್ಯರ ಸಂತಾನದವರು ತುಮ್ಮಿನಕಟ್ಟೆ, ದಾವಣ

ಗೇರಿಗಳಲ್ಲಿ ಇರುವರು. ಇವರಲ್ಲಿ ದಾವಣಗೇರಿಯಲ್ಲಿರುವ ಶ್ರೀನಿವಾಸಾಚಾರ್ಯ ಪಾಂಡುರಂಗಿಯವರು ಅನೇಕ ರೀತಿಯ ದಾನಧರ್ಮ ಪುಣ್ಯಕಾರ್ಯಗಳಲ್ಲಿ ನಿರತ ರಾಗಿರುವರು. ಸೀತಾರಾಮಾಚಾರ್ಯರ ಹಿರಿಯ ಮಕ್ಕಳ ಮೊಮ್ಮಕ್ಕಳಾದ ಎಸ್. ಆರ್. ಪಾಂಡುರಂಗಿ ಬೆಂಗಳೂರಿನಲ್ಲಿದ್ದು ವೇದಾಂತದಲ್ಲಿ ಆಸಕ್ತಿಯುಳ್ಳವ ರಾಗಿರುವರು.

**ತಿರುಪತಿ ಪಾಂಡುರಂಗಿ ಹುಚ್ಚಾಚಾರ್ಯರು (೧೮೬೫–೧೯೩೯)**

ಇವರು ಮಾಸೂರು ಬಾಳಯ್ಯಾಚಾರ್ಯರ ಎರಡನೆಯ ಮಕ್ಕಳಾದ ನರಸಿಂಹಾಚಾರ್ಯರ ಸಂತತಿಗೆ ಸೇರಿದವರು. ಈ ನರಸಿಂಹಾಚಾರ್ಯರ ಎರಡನೆಯ ಮಕ್ಕಳು ಶ್ರೀನಿವಾಸಾಚಾರ್ಯರು. ಇವರ ಮಕ್ಕಳೇ ತಿರುಪತಿಯಲ್ಲಿ ನೆಲಿಸಿ ಪ್ರಸಿದ್ಧರಾದ ಪಾಂಡುರಂಗಿ ಹುಚ್ಚಾಚಾರ್ಯರು. ಇವರಿಗೆ ಬಿಟ್ಟಿದ ಹುಚ್ಚಾಚಾರ್ಯರೆಂದೇ ಪ್ರಸಿದ್ಧಿಯುಂಟಾಯಿತು.

ಇವರ ತಂದೆಯವರು ಶಿಕಾರಿಪುರದ ಹತ್ತಿರದ ಪಾಂಡುರಂಗಿ ಮನೆತನದ ಇನಾಮುಗ್ರಾಮವಾದ ಭದ್ರಾಪುರದಲ್ಲಿ ವಾಸವಾಗಿದ್ದರು. ಅವರಿಗೆ ಮೂರನೆಯ ಮಗನಾಗಿ ಹುಚ್ಚಾಚಾರ್ಯರು ೧೮೬೫ ರಲ್ಲಿ ಜನಿಸಿದರು. ತಂದೆಯವರು ಇವರನ್ನು ಶಿಕಾರಿಪುರದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಶಾಲೆಗೆ ಕಳಿಸಿದರು. ಈ ಹುಚ್ಚಾಚಾರ್ಯರು ಹದಿನಾಲ್ಕು ವರುಷದವರಿದ್ದಾಗ ಓರ್ವ ಹಿರಿಯ ಗೃಹಸ್ಥರು ಪಾಂಡುರಂಗಿ ಮನೆತನದ ನೀವು ಹೀಗೆ ಶರ್ಟು ಚಣ್ಣ ಹಾಕಿಕೊಂಡು ಇಂಗ್ಲಿಷ್ ಕಲಿಯುವದು ಯೋಗ್ಯವಲ್ಲ ಎಂದು ಹೇಳಿದಾಗ ಇವರ ಮನಸ್ಸಿನ ಪರಿವರ್ತನೆ ಯಾಯಿತು. ಇವರು ಮನೆಯಲ್ಲಿ ಹೇಳದೆ ಕೊಲ್ಹಾಪುರಕ್ಕೆ ಹೋಗಿ ತಮ್ಮ ಕುಲದೇವತೆಯಾದ ಲಕ್ಷ್ಮೀದೇವಿಯ ಆರಾಧನೆಯಲ್ಲಿ ತೊಡಗಿದರು. ಇವರು ಲಕ್ಷ್ಮೀಗುಡಿಯಲ್ಲಿಯೇ ಇರುವದನ್ನು ಕಂಡ ಅಂತಾಜೀಪಂತ ಎಂಬ ದಂಪತಿಗಳು ಇವರಿಗೆ ತಮ್ಮ ವಾಡಾದಲ್ಲಿ ಒಂದು ಕೋಣೆ ಕೊಟ್ಟು ಇವರ ಎಲ್ಲ ಯೋಗಕ್ಷೇಮ ವನ್ನೂ ನೋಡುತ್ತಿದ್ದರು. ಈ ಅಂತಾಜೀಪಂತ ದಂಪತಿಗಳಿಗೆ ಮಕ್ಕಳಿದ್ದಿಲ್ಲ. ಆದ್ದರಿಂದ ಈ ಹುಚ್ಚಾಚಾರ್ಯನನ್ನೇ ಮಗನಂತೆ ಪ್ರೀತಿಯಿಂದ ನೋಡಿಕೊಳ್ಳುತ್ತಿ ದ್ದರು. ಮುಂದೆ ಮೂರು ವರ್ಷಗಳಾದ ಮೇಲೆ ತಂದೆ ತಾಯಿಗಳಿಗೆ ಇವರು ಕೊಲ್ಹಾಪುರದಲ್ಲಿ ಇರುವದು ತಿಳಿದು ಅಲ್ಲಿಗೆ ಹೋಗಿ ಭೆಟ್ಟಿಯಾಗಿ ಆಗಾಗ ಮನೆಗೆ ಬರಲು ಹೇಳಿದರು. ಹೀಗೆ ಮನೆಗೆ ಬಂದಾಗ ಇವರ ೨೨ನೇ ವಯಸ್ಸಿನಲ್ಲಿ ಇವರ

ಅಕ್ಕನ ಮಗಳು ಹುಚ್ಚವ್ವನೊಡನೆ ಲಗ್ನ ಮಾಡಿದರು. ಲಗ್ನವಾದ ಮೇಲೆ ಸ್ವಪ್ನದಲ್ಲಿ ಲಕ್ಷ್ಮೀದೇವಿಯು ಸೂಚನೆ ಮಾಡಿದಂತೆ ತಮ್ಮ ದೊಡ್ಡಪ್ಪ ಕುರುಬಗಟ್ಟಿ ಪಾಂಡುರಂಗಿ ಬಾಬಾಚಾರ್ಯರಲ್ಲಿ ವೇದಾಂತಶಾಸ್ತ್ರದ ಅಧ್ಯಯನವನ್ನು ಮಾಡ ತೊಡಗಿದರು. ಇವರು ಕೊಲ್ಹಾಪುರದಲ್ಲಿದ್ದಾಗಲೇ ಕಾವ್ಯ ನಾಟಕ ವ್ಯಾಕರಣ ನ್ಯಾಯಶಾಸ್ತ್ರಗಳನ್ನು ಓದಿದ್ದರು. ಅಂತಾಜೀಪಂತರು ಓರ್ವ ಮಹಾಮಹೋಪಾಧ್ಯಾಯರ ಕಡೆಗೆ ಇವ್ರುಗಳ ಅಧ್ಯಯನದ ವ್ಯವಸ್ಥೆ ಮಾಡಿದ್ದರು. ಕೊಲ್ಹಾಪುರದ ರಾಜರ ವಿದ್ವತ್‌ಸಭೆಯಲ್ಲಿ ' ಮಾಘಶುದ್ಧ ಪೌರ್ಣಿಮೆಯ ದಿನ ಸೂರ್ಯನ ಕಿರಣವು ಲಕ್ಷ್ಮೀದೇವಿಯ ಮೇಲೆ ಆಪಾದಮಸ್ತಕ ಬೀಳುವದು ' ಎಂಬ ಒಂದು ಅರ್ಥ ' ಈ ರಾಜನ ವಿದ್ವತ್ಸಭೆ ವಿದ್ವಾಂಸರಿಂದ ಪ್ರಕಾಶಮಾನವಾಗಿದೆ ' ಎಂಬ ಇನ್ನೊಂದು ಅರ್ಥ ಹೀಗೆ ದ್ವ್ಯರ್ಥೀ ಶ್ಲೋಕವನ್ನು ಬರೆದು ರಾಜನಿಂದ ಮನ್ನಣೆ ಪಡೆದಿದ್ದರು. ಮುಂದೆ ಕುರುಬಗಟ್ಟಿಗೆ ಬಂದು ಶ್ರೀ ಬಾಬಾಚಾರ್ಯರಲ್ಲಿ ಶಾಂತಿ ಪಾಠ ಹಾಕಿ ವೇದಾಂತಗ್ರಂಥಗಳನ್ನು ಓದಿದರು. ತುಮ್ಮಿನಕಟ್ಟೆ ಪಾಂಡುರಂಗೀ ಹುಚ್ಚಾ-ಚಾರ್ಯರೂ ಈ ಬಾಬಾಚಾರ್ಯರಲ್ಲಿ ಓದಿದ್ದನ್ನು ಈ ಹಿಂದೆಯೇ ಹೇಳಿದ್ದೇವೆ ಕಡಕೋಳದ ಪಾಂಡುರಂಗಿ ಬೋಧರಾಯಾಚಾರ್ಯರೂ ಇವರಲ್ಲಿಯೇ ಓದಿದ್ದರು. ಹೀಗೆ ಆ ಕಾಲದ ಪಾಂಡುರಂಗಿ ಮನೆತನದ ಅನೇಕರು ಬಾಬಾಚಾರ್ಯರಲ್ಲಿ ವೇದಾಂತ ಗ್ರಂಥಗಳನ್ನು ಓದಿದರು.

ಅಲ್ಲಿ ಐದಾರುವರ್ಷ ಓದಿದ ಮೇಲೆ ಇವರ ತಂದೆ ತಾಯಿಗಳು ವೈಕುಂಠವಾಸಿಗಳಾದರು. ಆಗ ಇವರು ಮತ್ತೆ ಕೊಲ್ಹಾಪುರಕ್ಕೆ ಹೋಗಲು ಬಯಸಿದಾಗ ಕುಲದೇವತೆ ಲಕ್ಷ್ಮೀದೇವಿಯು ಮುಗಟಖಾನ ಹುಬ್ಬಳ್ಳಿಗೆ ಹೋಗಿ ಅಲ್ಲಿಯ ನರಸಿಂಹದೇವರ ಸೇವೆ ಮಾಡಬೇಕೆಂದು ಆಜ್ಞಾಪಿಸಿದಳು. ಮಲಪ್ರಭಾತೀರದ ಆ ಕ್ಷೇತ್ರವು ಪುರಾಣಕಾಲದಲ್ಲಿ ಚ್ಯವನಋಷಿಗಳ ಆಶ್ರಮವಾಗಿತ್ತು. ಮುಂದೆ ವಿಜಯನಗರದ ಅಚ್ಯುತರಾಯನ ಕಾಲದಲ್ಲಿ ಈ ಕ್ಷೇತ್ರದ ಜೀರ್ಣೋದ್ಧಾರವಾಯಿತು. ಇಲ್ಲಿಯ ನರಸಿಂಹದೇವರಗುಡಿ ಅಶ್ವತ್ಥಕಟ್ಟೆ ಬಹು ರಮ್ಯವಾಗಿವೆ. ಈ ಕ್ಷೇತ್ರದಲ್ಲಿ ಶ್ರೀಯಾದವಾರ್ಯರು ಕೆಲಕಾಲ ವಾಸವಾಗಿದ್ದರು. ನಂತರ ಅವರು ಯಕ್ಕುಂಡಿಗೆ ಹೋದರು. ಇಲ್ಲಿ ಶ್ರೀಸತ್ಯವ್ರತತೀರ್ಥರ ಮತ್ತು ಶ್ರೀಸತ್ಯಧರ್ಮತೀರ್ಥರ ಮೃತ್ತಿಕಾವೃಂದಾವನಗಳಿವೆ. ಶ್ರೀ ಹುಚ್ಚಾಚಾರ್ಯರು ಇಲ್ಲಿ ಹನ್ನೆರಡು ವರ್ಷ ಕಾಲವಿದ್ದು ಶ್ರೀ ನರಸಿಂಹದೇವರ ಸೇವೆಯನ್ನು ಮಾಡಿದರು. ಇಲ್ಲಿ

ಇರುವಾಗ ಅನೇಕ ಪವಾಡಗಳು ನಡೆದವು. ಮುಂದೆ ನರಸಿಂಹದೇವರು ಇವರಿಗೆ ರಾಣೇಬೆನ್ನೂರಿಗೆ ಹೋಗಿ ಶ್ರೀವಿದ್ಯಾಧೀಶರ ಸೇವೆಯನ್ನು ಕೆಲಕಾಲ ಮಾಡಬೇಕೆಂದೂ ನಂತರ ತಿರುಪತಿಗೆ ಹೋಗಿ ಶ್ರೀನಿವಾಸನ ಸೇವೆಯನ್ನು ಮಾಡಬೇಕೆಂದೂ ಆಜ್ಞೆ ಮಾಡಿದರು. ಆದರೆ ಆಚಾರ್ಯರಿಗೆ ನರಸಿಂಹದೇವರನ್ನು ಬಿಟ್ಟುಹೋಗಲು ಮನಸ್ಸು ಇರಲಿಲ್ಲ. ಆಗ ನರಸಿಂಹದೇವರು ಸ್ವಪ್ನದಲ್ಲಿ ಬಂದು ನಾಳೆ ಓರ್ವ ಭಕ್ತನು ಬಂದು ಬೆಳ್ಳಿಯ ಪೆಟ್ಟಿಗೆಯನ್ನು ತರುವನು, ಅದರಲ್ಲಿ ನಾನಿರುವೆನು. ಅದನ್ನು ತೆಗೆದುಕೊಂಡುಹೋಗು ಎಂದು ಆಜ್ಞೆ ಮಾಡಿದನು. ಇದರಂತೆ ಇವರು ಆ ಬೆಳ್ಳಿಯ ಪೆಟ್ಟಿಗೆಯೊಡನೆ ರಾಣೇಬೆನ್ನೂರಿಗೆ ಹೋದರು. ಅಲ್ಲಿ ಆ ಬೆಳ್ಳಿಯ ಪೆಟ್ಟಿಗೆಯನ್ನು ಒಡೆದು ನೋಡಿದಾಗ ಅದರಲ್ಲಿ ಪಂಚಲೋಹದ ಲಕ್ಷ್ಮೀನರಸಿಂಹದೇವರು ಇದ್ದರು. ಇದನ್ನು ನೋಡಿ ಆಚಾರ್ಯರು ಬಹಳ ಆನಂದಿತರಾಗಿ ಈ ಪ್ರತಿಮೆಯನ್ನು ಪೂಜೆ ಮಾಡತೊಡಗಿದರು.

ಆಚಾರ್ಯರು ರಾಣೇಬೆನ್ನೂರಿಗೆ ಬಂದಾಗ ಶ್ರೀವಿದ್ಯಾಧೀಶರ ಮೂರ್ತಿಯು ಅಲ್ಲಿಯ ನರಸಿಂಹಗುಡಿಯಲ್ಲಿಯೇ ಇದ್ದಿತು. ಮಾಸೂರಿನಿಂದ ತಂದು ಅಲ್ಲಿ ಇಡಲಾಗಿತ್ತು. ಆಚಾರ್ಯರು ನರಸಿಂಹದೇವರ ಗುಡಿಯಲ್ಲಿಯೇ ಇದ್ದು ಶ್ರೀವಿದ್ಯಾಧೀಶರ ಸೇವೆ ಮಾಡಿದರು. ಅಲ್ಲಿಯೇ ಪಾಠ ಪ್ರವಚನ ಮಾಡುತ್ತಿದ್ದರು. ಮುಂದೆ ೧೯೧೪ ರಲ್ಲಿ ಮಠದ ಸ್ಥಾಪನೆಯಾಯಿತು. ರಾಣೇಬೆನ್ನೂರಿನಲ್ಲಿ ಇದ್ದಾಗ ಆಚಾರ್ಯರು ಒಮ್ಮೆ ತಿರುಪತಿಯಾತ್ರೆ ಕೈಕೊಂಡರು. ಅಲ್ಲಿ ಆಚಾರ್ಯರ ಪತ್ನಿಯವರು ಶ್ರೀನಿವಾಸದೇವರಗುಡಿಯ ಪ್ರದಕ್ಷಿಣೆ ಮಾಡುತ್ತಿದ್ದಾಗ ಒಂದು ಚಂದನದ ಕೃಷ್ಣನ ಪ್ರತಿಮೆಯು ಅವರಿಗೆ ದೊರೆಯಿತು. ಈ ಕೃಷ್ಣನೇ ಮುಂದೆ ಆಚಾರ್ಯರ ಆರಾಧ್ಯದೇವತೆಯಾದ. ಈ ಪ್ರತಿಮೆ ದೊರೆತ ಕೆಲದಿನಗಳಾದ ಮೇಲೆ ಆಚಾರ್ಯರಿಗೆ ಸ್ವಪ್ನದಲ್ಲಿ ' ಇಂದಿರೇಶ ' ಎಂಬ ಅಂಕಿತವು ದೊರೆತು ಅವರು ಈ ಅಂಕಿತದಿಂದ ದೇವರ ನಾಮಗಳನ್ನು ಹಾಡಲು ಆರಂಭಿಸಿದರು. ಈ ಘಟನೆ ತಿರುಪತಿಯಿಂದ ರಾಣೇಬೆನ್ನೂರಿಗೆ ತಿರುಗಿ ಬಂದಮೇಲೆ ನಡೆಯಿತು. ಆಚಾರ್ಯರು ಸಮಗ್ರ ದಶಮಸ್ಕಂಧ ಭಾಗವತವನ್ನು ಕನ್ನಡಪದ್ಯಗಳಲ್ಲಿ ಬರೆದರು. ಉಳಿದ ಭಾಗಗಳ ವಿಷಯಾನುಕ್ರಮಣಿಕೆಯ ಪದ್ಯಗಳನ್ನು ಬರೆದರು. ಮುಂದೆ ಅವರು ಕೃಷ್ಣಾಸ್ನಾನಕ್ಕೆ ಆಲೂರಿಗೆ ಹೋಗಿ ತಮ್ಮ ಪೂರ್ವಜರಾದ ಬಾಳಯ್ಯಾಚಾರ್ಯರ ಮೂರ್ತಿಯ ದರ್ಶನ ಮಾಡಿದರು. ತಾವು ಬರೆದ ಭಾಗವತದ ಕೀರ್ತನೆಯನ್ನು



पाण्डुरङ्गि हुच्चाचार्याः (तिरुपति)
(1865-1939)

ಬಾಳಯ್ಯಾಚಾರ್ಯರ ಪ್ರತಿಮೆಯ ಎದುರಿಗೆ ಮಾಡಿದರು. ಬಾಳಯ್ಯಾಚಾರ್ಯರು ಸ್ವಪ್ನದಲ್ಲಿ ಬಂದು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಅಲ್ಲಿಂದ ಯಲಗುರ್ದ ತೊರವಿ ಶೂರ್ಪಾಲಿ ಮುಗಟಖಾನಹುಬ್ಬಳ್ಳಿ ಮಹಿಷಿಗಳಿಗೆ ಹೋಗಿ ಮತ್ತೆ ರಾಣೇಬೆನ್ನೂರಿಗೆ ಬಂದರು. ಅಲ್ಲಿಂದ ತಿರುಪತಿಗೆ ಬರಬೇಕು ಎಂಬ ಶ್ರೀನಿವಾಸ ದೇವರ ಆಜ್ಞೆಯಂತೆ ತಿರುಪತಿಗೆ ಹೋದರು.

ತಿರುಪತಿಯಲ್ಲಿ ಶ್ರೀನಿವಾಸದೇವರು ಸ್ವಪ್ನದಲ್ಲಿ ಆಜ್ಞೆ ಮಾಡಿದಂತೆ ಅಲ್ಲಿಯ ಮಹಂತನ ತಮ್ಮನಾದ ರಾಮಲಕ್ಷ್ಮಣದಾಸ ಬಾವಾಜಿಯು ಆಚಾರ್ಯರಿಗೆ ಎಲ್ಲ ಅನುಕೂಲತೆಗಳನ್ನು ಮಾಡಿಕೊಟ್ಟನು. ಅಯೋಧ್ಯಾದಾಸ ಬಾವಾಜಿ ಎಂಬ ಮಹಂತನ ಇನ್ನೊಬ್ಬ ಸಂಬಂಧಿಕನು ಪಶ್ಚಿಮ ಬೀದಿಯಲ್ಲಿಯ ತನ್ನ ಮನೆಯನ್ನು ಆಚಾರ್ಯರಿಗೆ ದಾನವಾಗಿ ಕೊಟ್ಟನು. ಅಲ್ಲಿಯೇ ಆಚಾರ್ಯರು ಶ್ರೀಕೃಷ್ಣ ಛತ್ರವನ್ನು ಸ್ಥಾಪಿಸಿ ೧೯೦೧ ರಿಂದ ೧೯೩೪ರವರೆಗೆ ಅನ್ನದಾನ ಮಾಡಿದರು. ಅನೇಕ ರೀತಿಯಿಂದ ಶ್ರೀನಿವಾಸದೇವರ ಸೇವೆಯನ್ನು ಮಾಡಿದರು.

ಆಚಾರ್ಯರಿಗೆ ಓರ್ವ ಗೃಹಸ್ಥನು ರುಕ್ಮಿಣೀ ಸತ್ಯಭಾಮಾ ಪ್ರತಿಮೆಗಳನ್ನು ತಂದುಕೊಟ್ಟನು. ಶ್ರೀಕೃಷ್ಣನು ಸ್ವಪ್ನದಲ್ಲಿ ಸೂಚಿಸಿದಂತೆ ಆಚಾರ್ಯರು ಶ್ರೀಕೃಷ್ಣನ ಮದುವೆಯನ್ನು ವಿಜೃಂಭಣೆಯಿಂದ ಮಾಡಿದರು. ಈ ವಿವಾಹವನ್ನು ರಕ್ತಾಕ್ಷಿ ಸಂವತ್ಸರ ಫಾಲ್ಗುಣ ಶುದ್ಧ ಪಂಚಮೀ ದಿನ ಮಾಡಿದರು. ಕರ್ನಾಟಕ ಆಂಧ್ರ ತಮಿಳನಾಡು ಮಹಾರಾಷ್ಟ್ರಗಳಲ್ಲಿಯ ತಮ್ಮ ಅನೇಕ ಶಿಷ್ಯರನ್ನೂ ಅಭಿಮಾನಿ ಗಳನ್ನೂ ಈ ವಿವಾಹಕ್ಕೆ ಆಹ್ವಾನಿಸಿದ್ದರು. ಈ ಮದುವೆಯಾದ ಮರುದಿನ ಶ್ರೀ ಭೂದೇವಿಯರೊಡನೆ ಶ್ರೀನಿವಾಸದೇವರ ಮದುವೆಯನ್ನೂ ಮಾಡಿದರು.

ಶ್ರೀ ಸತ್ಯಧ್ಯಾನತೀರ್ಥರು ತಿರುಪತಿಗೆ ಬಂದಾಗೆಲ್ಲ ಆಚಾರ್ಯರ ಮನೆ ಯಲ್ಲಿಯೇ ಬಿಡಾರ ಮಾಡುತ್ತಿದ್ದರು. ಒಮ್ಮೆ ನವರಾತ್ರಿಯಲ್ಲಿ ಅಲ್ಲಿಯೇ ಇದ್ದು ವೇದವ್ಯಾಸಪೂಜೆಯನ್ನು ಮಾಡಿದರು. ಇನ್ನೊಮ್ಮೆ ಮಹಾಸಮಾರಾಧನೆಯನ್ನೂ ಅಲ್ಲಿಯೇ ಮಾಡಿದರು.

ತಿರುಪತಿ ದೇವಸ್ಥಾನದ ಎರಡನೆಯ ಪ್ರಾಕಾರದಲ್ಲಿ ಶ್ರೀವ್ಯಾಸರಾಜರ ರೇಖಾಚಿತ್ರವು ಇದೆ. ಅದು ಮಣ್ಣಿನಲ್ಲಿ ಮುಚ್ಚಿಹೋಗಿತ್ತು. ಸ್ವಪ್ನದಲ್ಲಿ ಶ್ರೀವ್ಯಾಸರಾಯರ ಸೂಚನೆಯಂತೆ ಅದನ್ನು ಮಹಾಂತರಿಂದ ಸ್ವಚ್ಛಮಾಡಿಸಿ

ಶ್ರೀವ್ಯಾಸರಾಜರಿಗೆ ಸಾಷ್ಟಾಂಗ ನಮಸ್ಕಾರಮಾಡುತ್ತಿದ್ದ ತಮ್ಮ ರೇಖಾಚಿತ್ರವನ್ನೂ ಅವರ ಪಾದದ ಅಡಿಯಲ್ಲಿ ತೆಗೆಸಿದರು. ಅದು ಈಗಲೂ ಇದೆ. ಅಲ್ಲಿ ಈಗ ಶ್ರೀನಿವಾಸಕಲ್ಯಾಣೋತ್ಸವಕ್ಕಾಗಿ ಕಟ್ಟೆಯನ್ನು ಹಾಕಿಸಿದ್ದಾರೆ. ಈ ಕಟ್ಟೆಯ ಮುಂಭಾಗದಲ್ಲಿಯೇ ಈ ರೇಖಾಚಿತ್ರಗಳಿವೆ.

ಆಚಾರ್ಯರು ಬೆಳಿಗ್ಗೆ ನಾಲ್ಕುಗಂಟೆಯಿಂದ ರಾತ್ರಿ ಹತ್ತುಗಂಟೆಯವರೆಗೆ ನಿರಂತರವಾಗಿ ಆಹ್ನಿಕ ಪೂಜಾ ಭಗವನ್ನಾಮ ಸಂಕೀರ್ತನ ದೇವರನಾಮ ಮತ್ತು ಗ್ರಂಥರಚನೆ ಅತಿಥಿಗಳ ಸತ್ಕಾರ ಇವುಗಳಲ್ಲಿಯೇ ಕಾಲಕಳೆಯುತ್ತಿದ್ದರು. ಬ್ರಹ್ಮೋತ್ಸವದ ಕಾಲದಲ್ಲಿಯೂ ಬ್ರಾಹ್ಮಣ ಯಾತ್ರಿಕರೆಲ್ಲ ಇವರಲ್ಲಿಯೇ ಬಂದಿರುತ್ತಿದ್ದರು. ನಿತ್ಯವೂ ನೂರಾರು ಜನರ ಭೋಜನ ಬ್ರಹ್ಮೋತ್ಸವದಲ್ಲಿ ಸಾವಿರಾರು ಜನರ ಸಂತರ್ಪಣೆ ನಡೆಯುತ್ತಿತ್ತು. ಇದಕ್ಕೆ ಬೇಕಾಗುವ ಸಾಮುಗ್ರಿಗಳನ್ನೆಲ್ಲ ಮಹಾಂತನೂ ಬೆಳಗಾವಿ, ಧಾರವಾಡ, ವಿಜಾಪುರ, ಹೈದರಾಬಾದ, ಬೆಂಗಳೂರು, ಮೈಸೂರು ಭಾಗಗಳಲ್ಲಿಯ ಭಕ್ತರೂ ಒದಗಿಸುತ್ತಿದ್ದರು. ಪ್ರತಿನಿತ್ಯ ಅನೇಕ ಮನಿಯಾರ್ಡರುಗಳೂ, ಧಾನ್ಯದ ಪಾರ್ಸಲ್‌ಗಳೂ ಬರುತ್ತಿದ್ದವು. ಆಚಾರ್ಯರ ಶ್ರೀಕೃಷ್ಣ ಛತ್ರದಲ್ಲಿ ಮೃಷ್ಟಾನ್ನದ ಭೋಜನವಿಲ್ಲದ ದಿನವೇ ಇರುತ್ತಿದ್ದಿಲ್ಲ.

ಆಚಾರ್ಯರು ಅನೇಕ ಗ್ರಂಥಗಳನ್ನೂ, ದೇವರ ನಾಮುಗಳನ್ನೂ ರಚಿಸಿರುವರು. ಅವರ ಸಂಸ್ಕೃತ ಗ್ರಂಥಗಳಲ್ಲಿ ಬ್ರಹ್ಮಸೂತ್ರ ಪ್ರಮೇಯಮಾಲಾ, ದ್ವಾದಶಸ್ತೋತ್ರ ವ್ಯಾಖ್ಯಾನ, ತತ್ವನ್ಯಾಸಮಾತೃಕಾನ್ಯಾಸ ವ್ಯಾಖ್ಯಾನ, ವೆಂಕಟೇಶ ವೇದವ್ಯಾಸ ರಾಮ ಲಕ್ಷ್ಮೀ ದುರ್ಗಾ ಕರಾವಲಂಬನ ಸ್ತೋತ್ರಗಳು, ಸಮೀರ ನಾರದ ವಿದ್ಯಾಧೀಶ ಕರಾವಲಂಬನ ಸ್ತೋತ್ರಗಳು, ಬಾಬಾಚಾರ್ಯ ಸ್ತೋತ್ರ ಇವು ಮುಖ್ಯವಾದವು.

ಅವರ ಕನ್ನಡ ಕೃತಿಗಳಲ್ಲಿ ಸರ್ವಮೂಲಸಾರ, ದಶಮಸ್ಕಂಧ ಭಾಗವತ, ಜಯತೀರ್ಥ ಟೀಕಾಪುಂಜ ನೂರಾರು ದೇವರ ನಾಮುಗಳು ಮುಖ್ಯವಾದವು.

ಹೀಗೆ ಭಗವಂತನ ಸೇವೆ ಶಾಸ್ತ್ರಸೇವೆ ಎರಡನ್ನೂ ಸತತವಾಗಿ ಮಾಡಿ ವಿಶೇಷ ಕೀರ್ತಿಶಾಲಿಗಳಾಗಿ ಶ್ರೀ ಹುಚ್ಚಾಚಾರ್ಯರು ಶಾಲಿವಾಹನ ಶಕ ೧೮೬೧ ಪ್ರಮಾಥಿ ಸಂವತ್ಸರ ಕಾರ್ತಿಕ ಬಹುಳ ಪಂಚಮಿ (ಕ್ರಿ.ಶ. ೧೯೩೯) ರಲ್ಲಿ ದೈವಾಧೀನರಾದರು. ಪಾಂಡುರಂಗಿ ಮನೆತನಕ್ಕೆ ಕೀರ್ತಿಯನ್ನು ತಂದ ಈ ಮನೆತನದ

ಪರಂಪರೆಯಂತೆ ಶಾಸ್ತ್ರಸೇವೆಯನ್ನು ಮಾಡಿದ ಪುಣ್ಯಪುರುಷರಲ್ಲಿ ಇವರು ಇತ್ತೀಚಿನವರು.

ತಿರುಪತಿಬೆಟ್ಟದ ಮೇಲಿನ ನಾಗವನದಲ್ಲಿ ಆಚಾರ್ಯರ ಪಾರ್ಥಿವಶರೀರವನ್ನು ದಹನಮಾಡಿದ ಸ್ಥಳದಲ್ಲಿ ಒಂದು ಅಶ್ವತ್ಥವೃಕ್ಷವನ್ನು ಬೆಳೆಸಲಾಗಿದೆ. ಅದರ ಕಟ್ಟೆಯಮೇಲೆ ಆಚಾರ್ಯರ ಪರಿಚಯವನ್ನು ಬರೆಯಲಾಗಿದೆ.

ಆಚಾರ್ಯರು ಬಹುವಿಜೃಂಭಣೆಯಿಂದ ನಡಿಸಿದ ಶ್ರೀಕೃಷ್ಣಛತ್ರವನ್ನು ಅವರ ಮಕ್ಕಳಾದ ಶ್ರೀನಿವಾಸಾಚಾರ್ಯರು ಕೆಲವು ವರ್ಷ ನಡೆಸಲು ಪ್ರಯತ್ನಿಸಿದರು. ಆದರೆ ಅದು ಯಶಸ್ವಿಯಾಗಲಿಲ್ಲ. ಮುಂದೆ ಅವರ ಮೊಮ್ಮಕ್ಕಳು ಆ ಕಟ್ಟಡವನ್ನು ಸ್ಥಳಿಕರಿಗೆ ಒಬ್ಬರಿಗೆ ಮಾರಲು ಕೊಟ್ಟರು. ಅವರು ಅದನ್ನು ಪದ್ಮಾವತೀನಿಲಯ ಎಂದು ಹೆಸರಿಟ್ಟು ಯಾತ್ರಿಕರಿಗೆ ಬಾಡಿಗೆ ಕೊಡುವರು. ಆಚಾರ್ಯರು ಕಟ್ಟಿಸಿದ ಮೂರಂತಸ್ತಿನ ಈ ಶ್ರೀಕೃಷ್ಣಛತ್ರದ ಕಟ್ಟಡವು ವೈಶ್ಯ ಛತ್ರದ ಪಕ್ಕದಲ್ಲಿ ಮತ್ತು ಕರ್ನಾಟಕ ಸರಕಾರದ ಛತ್ರದ ಎದುರಿನಲ್ಲಿ ಇರುವದು. ಈಗ ಅದರ ಮೇಲೆ ಪದ್ಮಾವತೀನಿಲಯ ಎಂದು ಹೆಸರಿರುವದು.

ಆಚಾರ್ಯರ ಮಕ್ಕಳಾದ ಶ್ರೀನಿವಾಸಾಚಾರ್ಯರೂ ದೊಡ್ಡ ವಿದ್ವಾಂಸರಾಗಿದ್ದರು. ಇವರು ತುಮ್ಮಿನಕಟ್ಟೆ ಪಾಂಡುರಂಗಿ ಹುಚ್ಚಾಚಾರ್ಯರಲ್ಲಿ ವೇದಾಂತವನ್ನೂ ಹಾನಗಲ್ ವಿರೂಪಾಕ್ಷಶಾಸ್ತ್ರಿಗಳಲ್ಲಿ ನ್ಯಾಯಶಾಸ್ತ್ರವನ್ನೂ ಓದಿದ್ದರು. ಧಾರವಾಡದ ನಾಗೇಶಶಾಸ್ತ್ರಿಗಳೂ ಉಡುಪಿಯ ಪಡಿಮನ್ನೂರು ನಾರಾಯಣಾ-ಚಾರ್ಯರೂ ಇವರ ಸಹಪಾಠಿಗಳಾಗಿದ್ದರು. ಇವರು ಧಾರವಾಡದಲ್ಲಿಯೇ ವಾಸವಾಗಿದ್ದು ಅಲ್ಲಿ ಮಧ್ವಸಿದ್ಧಾಂತೋತ್ತೇಜಕ ಪಾಠಶಾಲೆಯಲ್ಲಿ ವೇದಾಂತದ ಅಧ್ಯಾಪಕರಾಗಿದ್ದರು. ಸವಣೂರು ಗೋವಿಂದರಾಯರು ಮುದ್ರಿಸಿದ ಶ್ರೀಮನ್ನ್ಯಾಯಸುಧಾ ವಾಕ್ಯಾರ್ಥಚಂದ್ರಿಕಾ ಇತ್ಯಾದಿ ಗ್ರಂಥಗಳ ಮುದ್ರಣಕ್ಕೆ ಹಸ್ತಲಿಖಿತಗಳ ಸಂಶೋಧನೆ ಮಾಡಿಕೊಟ್ಟು ಸಹಾಯ ಮಾಡುತ್ತಿದ್ದರು. ಆಚಾರ್ಯರು ಇದ್ದಾಗ ಆಗಾಗ ತಿರುಪತಿಗೆ ಹೋಗಿಬರುತ್ತಿದ್ದರು. ಅವರ ನಂತರ ಅಲ್ಲಿಯೇ ಇದ್ದು ೧೯೪೫ ರಲ್ಲಿ ಅಲ್ಲಿಯೇ ದಿವಂಗತರಾದರು. ಇವರ ಮಕ್ಕಳಾದ ರಾಮಾಚಾರ್ಯರು ಈಗ ಧಾರವಾಡದಲ್ಲಿಯೇ ಇದ್ದು ಆಚಾರ್ಯರು ಪೂಜಿಸಿನ ಶ್ರೀಕೃಷ್ಣನ ಪ್ರತಿಮೆಯ ಮತ್ತು ಇನ್ನಿತರ ಏಳು ಪ್ರತಿಮೆಗಳ ಪೂಜೆ ಮಾಡುತ್ತಿರುವರು. ಆಚಾರ್ಯರು

ಬರೆದ ಎಲ್ಲ ಗ್ರಂಥಗಳ ಹಸ್ತಪ್ರತಿಗಳೂ ಇವರಲ್ಲಿವೆ. ಇವರ ಅಣ್ಣ ನರಸಿಂಹಾ-ಚಾರ್ಯರು ಮಿಶ್ರಕೋಟಿ ಪಾಂಡುರಂಗಿ ಮನೆತನಕ್ಕೆ ದತ್ತಕ ಹೋಗಿದ್ದು ಈಗ ಶಿಕಾರಿಪುರದಲ್ಲಿ ಇರುವರು. ಆಚಾರ್ಯರು ಪೂಜಿಸುತ್ತಿದ್ದ ಎಂಟು ಪ್ರತಿಮೆಗಳನ್ನು ಈ ಕೆಳಗಿನ ಪದ್ಯದಲ್ಲಿ ಸಂಗ್ರಹಿಸಿ ಹೇಳಲಾಗಿದೆ.

ಸ್ವಯಂ ವ್ಯಕ್ತಂ ಶ್ರೀಮದ್ಯದುಕುಲ ಮಣೀಶಂ ಸುಮಧನ-
ಪ್ರದಂ ಸೀತಾರಾಮಂ ಗುಡಜನಿವಿಭೂತಿಂ ನರಹರಿಮ್ ।
ಗಿರಿಶ್ರೀಶಂ ಸಾಂಧ್ಯಂ ಮುನಿಮಪಿ ತದ್ವೈವಾಶ್ವವದನಂ
ವರಾಹಂ ಭೀಮೇಶಂ ಸ್ಮರ ಹೃದಯ ಭಕ್ತ್ಯಾನುಸವನಮ್ ॥

## ಚಿಕ್ಕೇರೂರು ಪಾಂಡುರಂಗಿ (ಮನ್ನಾರಿ) ವ್ಯಂಕಟರಮಣಾಚಾರ್ಯರು (೧೮೪೦–೧೯೫೦)

ಇವರು ಕೇಶವಭಟ್ಟಾರಕರ (ಗುರುರಾಜರ) ಹಿರಿಯ ಮಕ್ಕಳಾದ ಗಡ್ಡದ ಶ್ರೀನಿವಾಸಾಚಾರ್ಯರ ಸಂತತಿಗೆ ಸೇರಿದವರು. ಈ ಸಂತತಿಗೆ ಮನ್ನಾರಗುಡಿ ಕುಟ್ಟಾಲಂ, ಕುಂಭಕೋಣ, ತಂಜಾವೂರುಗಳಲ್ಲಿ ಇರುವ ಪಾಂಡುರಂಗಿ ಮನೆತನದ ವರೂ, ಧಾರವಾಡ ಪ್ರಾಂತದಲ್ಲಿಯ ಕಳಸ ಮತ್ತು ಚಿಕ್ಕೇರೂರುಗಳಲ್ಲಿ ಇರುವ ಪಾಂಡುರಂಗಿಗಳೂ ಸೇರುವರು. ಈ ಕಳಸ ಚಿಕ್ಕೇರೂರವರು ಕೂಡ ಮನ್ನಾರಗುಡಿಯ ಕಡೆಯಿಂದಲೇ ಬಂದವರು. ಆದ್ದರಿಂದಲೇ ಇವರಿಗೆ ಮನ್ನಾರಿ ಪಾಂಡುರಂಗಿ ಎಂತಲೂ ಕರೆಯುವರು.

ಈ ವೆಂಕಟರಮಣಾಚಾರ್ಯರು ಮೈಸೂರಿಗೆ ಹೋಗಿ ಅಲ್ಲಿಯ ಕಸ್ತೂರಿ ರಂಗಾಚಾರ್ಯ ಎಂಬವರಲ್ಲಿ ನ್ಯಾಯಶಾಸ್ತ್ರವನ್ನು ಓದಿ ದೊಡ್ಡ ಪಂಡಿತರಾದರು. ಮೈಸೂರು, ಬರೋಡಾ, ಕಾಶೀ ಇತ್ಯಾದಿ ಕಡೆಗೆ ಹೋಗಿ ನ್ಯಾಯಶಾಸ್ತ್ರದಲ್ಲಿ ವಾಕ್ಯಾರ್ಥಮಾಡುತ್ತಿದ್ದರು. ಮೈಸೂರಿನ ದರ್ಬಾರದ ಆಸ್ಥಾನ ಮಹಾವಿದ್ವಾಂಸರೂ, ವಿದ್ವತ್‌ಪದವಿಯ ಪರೀಕ್ಷಕರೂ ಆಗಿದ್ದರು. ಶ್ರೀಸತ್ಯಧ್ಯಾನತೀರ್ಥರ ಪ್ರೀತಿಪಾತ್ರರೂ, ಅವರ ಸಭೆಗಳಲ್ಲಿ ವಾಕ್ಯಾರ್ಥ ಮಾಡುವವರಲ್ಲಿ ಅಗ್ರೇಸರರೂ ಆಗಿದ್ದರು. ಮೈಸೂರಿನ ಬಂಗಲೆ ಕೃಷ್ಣರಾಯರು ಯಳಂದೂರು ಜಹಗೀರದಾರರು ಇವರ ಶಿಷ್ಯರಾಗಿದ್ದರು. ರಾಣೇಬೆನ್ನೂರಿನ ಮಠದ ಸ್ಥಾಪನೆಗೆ ಇವರು ತುಮ್ಮಿನಕಟ್ಟಿ

ಹುಚ್ಚಾಚಾರ್ಯರಿಗೆ ನೆರವಾದರು. ಇವರು ಚಿಕ್ಕೇರೂರಿನಲ್ಲಿಯೇ ವಾಸವಾಗಿದ್ದರು. ಇವರ ಮಕ್ಕಳಾದ ಕೃಷ್ಣಾಚಾರ್ಯರು ಅಲ್ಲಿಯೇ ಇರುವರು.

## ಮದ್ರಾಸಿನ ಪಾಂಡುರಂಗಿ ಮಧ್ವರಾಯಾಚಾರ್ಯರು

**(೧೮೬೦–೧೯೩೦)**

ಇವರು ಮನ್ನಾರಗುಡಿ, ಕುಟ್ಟಾಲಂ, ತಂಜಾವೂರು, ಕುಂಭಕೋಣಗಳಲ್ಲಿ ವಾಸವಾಗಿರುವ ಪಾಂಡುರಂಗಿ ಗುಂಪಿಗೆ ಸೇರಿದವರು. ಇವರೆಲ್ಲ ಶ್ರೀ ಕೇಶವ ಭಟ್ಟಾರಕ (ಗುರುರಾಜರ) ಹಿರಿಯಮಕ್ಕಳಾದ ಗಡ್ಡದ ಶ್ರೀನಿವಾಸಾಚಾರ್ಯರ ಸಂತತಿಗೆ ಮತ್ತು ಅವರ ಮಕ್ಕಳಾದ ಬಾಬಾಚಾರ್ಯರ(ಶ್ರೀಸತ್ಯವಿಜಯರ)ಸಂತತಿಗೆ ಸೇರಿದವರು. ಇವರೆಲ್ಲರ ವಿವರವಾದ ವಂಶವಳಿಯನ್ನು ಈ ಮಧ್ವರಾಯಾ-ಚಾರ್ಯರೇ ಸಿದ್ಧಪಡಿಸಿದ್ದು ಅದನ್ನು ಪ್ರತ್ಯೇಕವಾಗಿ ಮುದ್ರಿಸಲಾಗಿದೆ. ಈ ಮಧ್ವರಾಯಾಚಾರ್ಯರು ಶ್ರೀಸತ್ಯಜ್ಞಾನರು ಮತ್ತು ಶ್ರೀಸತ್ಯಧ್ಯಾನರ ಕಾಲಕ್ಕೆ ಮದ್ರಾಸಿನಲ್ಲಿ ಉತ್ತರಾದಿಮಠದ ಮಠಾಧಿಕಾರಿಗಳಾಗಿದ್ದರು. ಒಳ್ಳೆಯ ವಿದ್ವಾಂಸರಾಗಿದ್ದರು. ಇವರ ಕೈಬರಹದಲ್ಲಿ ಬರೆದ ಕೆಲವು ದ್ವೈತವೇದಾಂತದ ಗ್ರಂಥಗಳು ಅಡಿಯಾರ ಲೈಬ್ರರಿಯಲ್ಲಿವೆ. ಇವರ ಸಂತತಿಯವರು ಮದ್ರಾಸದಲ್ಲಿ ನೆಲೆಸಿರುವರು. ಮದ್ರಾಸದಲ್ಲಿ ಈಗ ಇರುವ ಪಿ. ಎಮ್. ರಾಮಚಂದ್ರರಾಯರು ಇವರ ಸಮೀಪದ ಬಂಧುಗಳು. ಇವರು ಶ್ರೀಮಧ್ವಸಿದ್ಧಾಂತೋನ್ನಾಹಿನೀ ಸಭೆಯ ಕೌನ್ಸಿಲರಾಗಿರುವರು.

## ಕುಂಭಕೋಣದ ಕುಟ್ಟಾಲಂ ಪಾಂಡುರಂಗಿ ಕೃಷ್ಣಮೂರ್ತಿ ಆಚಾರ್ಯರು (೧೯೧೦–೧೯೮೦)

ಇವರೂ ಶ್ರೀ ಬಾಬಾಚಾರ್ಯರ (ಶ್ರೀಸತ್ಯವಿಜಯರ) ಸಂತತಿಗೆ ಸೇರಿದವರು. ಇವರು ಯಜುರ್ವೇದದಲ್ಲಿ ಒಳ್ಳೆಯ ಘನಪಾಠಿಗಳಾಗಿದ್ದರು. ಸಾಹಿತ್ಯ ವೇದಾಂತಗಳಲ್ಲಿಯೂ ಪಂಡಿತರಾಗಿದ್ದರು. ಇವರು ಕುಂಭಕೋಣದಲ್ಲಿಯೇ ವಾಸವಾಗಿದ್ದರು. ಕುಂಭಕೋಣದಲ್ಲಿಯೇ ಇರುವ ಪಾಂಡುರಂಗಿ ಪ್ರಯಾಗ ಮಾಧವರಾಯರು, ಮಾಯಾವರಂದಲ್ಲಿ ಬಹುಕಾಲ ಇದ್ದು ಈಗ ಸೇಲಂದಲ್ಲಿ ಇರುವ ಪಾಂಡುರಂಗಿ ರಾಮಾಚಾರ್ಯರು, ತಿರುಕೋವಿಲೂರಿನಲ್ಲಿ ಇರುವ

ಪಾಂಡುರಂಗಿ ರಂಗನಾಥಾಚಾರ್ಯರು ಇವರೆಲ್ಲ ಈ ದಕ್ಷಿಣದೇಶದ ಪಾಂಡುರಂಗೀ ಗುಂಪಿಗೇ ಸೇರಿದವರು.

**ಕಡಕೋಳದ ಪಾಂಡುರಂಗಿ ಕೃಷ್ಣಾಚಾರ್ಯರು (೧೮೯೦-೧೯೪೦)**

ಇವರು ಶ್ರೀ ಕೇಶವಭಟ್ಟಾರಕರ (ಗುರುರಾಜರ) ಎರಡನೆಯ ಮಕ್ಕಳಾದ ರತ್ನಮಾಲಾ ನರಸಿಂಹಾಚಾರ್ಯರ ಸಂತತಿಗೆ ಸೇರಿದವರು. ಕಡಕೋಳ ಎಂಬ ಗ್ರಾಮವು ಸವಣೂರಿನ ಹತ್ತಿರ ಇದೆ. ಭಂಡಿವಾಡ ಪಾಂಡುರಂಗಿಯವರ ಒಂದು ಶಾಖೆಯವರು ಕೆಲವರ್ಷ ಕರ್ಜಗಿಯಲ್ಲಿದ್ದು ನಂತರ ಈ ಕಡಕೋಳಕ್ಕೆ ಬಂದು ನೆಲೆಸಿದರು. ಈ ಸಂತತಿಯಲ್ಲಿ ರಂಗಾಚಾರ್ಯ ಎಂಬವರು ಶ್ರೀಸತ್ಯಧೀರತೀರ್ಥರ ಪೂರ್ವಾಶ್ರಮದ ಅಳಿಯಂದಿರಾದರು. ಶ್ರೀಸತ್ಯಧ್ಯಾನತೀರ್ಥರ ಪೂರ್ವಾಶ್ರಮದ ಅಕ್ಕಂದಿರಾದ ಸೋನುಬಾಯಿಯವರನ್ನು ಇವರಿಗೆ ಕೊಟ್ಟಿತ್ತು. ಶ್ರೀಸತ್ಯಧ್ಯಾನ ತೀರ್ಥರು ಶ್ರೀಸತ್ಯಧೀರತೀರ್ಥರ ಪೂರ್ವಾಶ್ರಮದ ಮಕ್ಕಳು. ಈ ರಂಗಾಚಾರ್ಯ ಮತ್ತು ಸೋನೂಬಾಯಿಯವರ ಮಕ್ಕಳೇ ಈ ಪಾಂಡುರಂಗಿ ಕೃಷ್ಣಾಚಾರ್ಯರು. ಇವರ ಅಣ್ಣಂದಿರು ಪಾಂಡುರಂಗಿ ಭೀಮಾಚಾರ್ಯರು. ತಮ್ಮಂದಿರು ಪಾಂಡುರಂಗಿ ಜಯಾಚಾರ್ಯರು (ಶ್ರೀಸತ್ಯಪ್ರಜ್ಞರು).

ಪಾಂಡುರಂಗಿ ಕೃಷ್ಣಾಚಾರ್ಯರು ಮೊದಲು ತಮ್ಮ ತಂದೆ ರಂಗಾಚಾರ್ಯರಲ್ಲಿಯೇ ಕಾವ್ಯ ನಾಟಕಾದಿಗಳನ್ನು ಓದಿದರು. ತಮ್ಮ ಸೋದರಮಾವಂದಿರಾದ ಸೇತೂರಾಮಾಚಾರ್ಯರಲ್ಲಿ (ಶ್ರೀಸತ್ಯಧ್ಯಾನತೀರ್ಥರಲ್ಲಿ) ತರ್ಕ ಮತ್ತು ವೇದಾಂತ ಶಾಸ್ತ್ರಗಳ ಅಧ್ಯಯನ ಮಾಡಿದರು. ಮುಂದೆ ತಿರುಪತಿಯಲ್ಲಿಯ ಕಪಿಸ್ಥಲಂ ದೇಶಿಕಾಚಾರ್ಯರಲ್ಲಿ ನ್ಯಾಯಶಾಸ್ತ್ರದ ಕ್ರೋಡಪತ್ರಗಳನ್ನು ಓದಿದರು. ಆಗ ಅನೇಕ ಬಹುಮಾನಗಳನ್ನೂ ಸ್ವರ್ಣಪದಕಗಳನ್ನೂ ಪಡೆದರು. ತಿರುಪತಿಯಲ್ಲಿದ್ದಾಗ ಪ್ರತಿಯೊಂದು ಪ್ರತಿಪದೆಯ ದಿನವೂ ಬೆಟ್ಟದ ಮೇಲೆ ಹೋಗಿ ಶ್ರೀನಿವಾಸದೇವರ ದರ್ಶನ ಮಾಡಿಕೊಂಡು ಬರುತ್ತಿದ್ದರು. ಶ್ರೀಸತ್ಯಜ್ಞಾನತೀರ್ಥರು ಇವರ ಪಾಂಡಿತ್ಯ ನೋಡಿ ಸಂತೋಷಪಟ್ಟು ಇವರಿಗೆ ಬೆಳ್ಳಿಯ ಶ್ರೀನಿವಾಸದೇವರ ಮೂರ್ತಿಯನ್ನು ಕೊಟ್ಟರು. ಶ್ರೀಸತ್ಯಧ್ಯಾನತೀರ್ಥರ ಪೂರ್ವಾಶ್ರಮದ ಮಗಳನ್ನೇ ಆಚಾರ್ಯರು ವಿವಾಹವಾದರು.

ಶ್ರೀಸತ್ಯಧ್ಯಾನತೀರ್ಥರು ಪಟ್ಟಕ್ಕೆ ಬಂದಮೇಲೆ ಅವರಿಗೆ ಬಲಗೈಯಾಗಿ ಮಠದಲ್ಲಿ ಇರತೊಡಗಿದರು. ಗಯಾ, ಕಾಶೀ ಇತ್ಯಾದಿ ವಿದ್ವತ್‌ಕೇಂದ್ರಗಳಲ್ಲಿ

ಆಗುವ ವಿದ್ವತ್ಸಭೆಗಳಲ್ಲಿ ಪ್ರಧಾನಪಾತ್ರ ವಹಿಸುತ್ತಿದ್ದರು. ಕಾಶಿಯ ವಾಮಾಚರಣ ಭಟ್ಟಾಚಾರ್ಯರೊಡನೆ ತರ್ಕದಲ್ಲಿ ವಾಕ್ಯಾರ್ಥ ಮಾಡಿದರು. ದಕ್ಷಿಣದೇಶದಲ್ಲಿ ಮದ್ರಾಸ, ಕುಂಭಕೋಣ, ತಿರುನಲ್‌ವೇಲಿ ಇತ್ಯಾದಿ ವಿದ್ವತ್‌ಕೇಂದ್ರಗಳಲ್ಲಿ ನಡೆದ ವಿದ್ವತ್ಸಭೆಗಳಲ್ಲಿಯೂ ಪ್ರಧಾನಪಾತ್ರ ವಹಿಸುತ್ತಿದ್ದರು. ಬರೋಡಾ, ಪುಣೆ, ಕಾಶೀಗಳಲ್ಲಿ ನಡೆಯುವ ಪರೀಕ್ಷೆಗಳಿಗೆ ಧರ್ಮಾಧಿಕಾರಿಗಳಾಗಿ ಹೋಗು ತ್ತಿದ್ದರು.

ವರಖೇಡಿ ನರಸಿಂಹಾಚಾರ್ಯರು, ಮಳಗಿ ವೇದವ್ಯಾಸಾಚಾರ್ಯರು, ಚಿಂಚೋಳಿ ಕೃಷ್ಣಾಚಾರ್ಯರು, ಉಮರ್ಜಿ ರಾಮಾಚಾರ್ಯರು, ಆರಣಿ ವಾಸುದೇವಾಚಾರ್ಯರು, ಉಡುಪಿ ಸೀತಾರಾಮಾಚಾರ್ಯರು, ಯಲಮಲಿ ವಾಸುದೇವಾಚಾರ್ಯರು, ಮಾಹುಲೀ ಗೋಪಾಲಾಚಾರ್ಯರು, ಉಡುಪಿ ಶ್ರೀನಿವಾಸಾಚಾರ್ಯರು ಮೊದಲಾದವರು ಇವರಲ್ಲಿ ಓದಿ ಉತ್ತಮ ಪಂಡಿತರಾದರು. ಇವರ ತಮ್ಮ ಜಯಾಚಾರ್ಯರೂ (ಶ್ರೀಸತ್ಯಪ್ರಜ್ಞರು) ಇವರಲ್ಲಿಯೇ ಓದಿದರು. ಇವರನ್ನು ವಿಶೇಷ ಪಾಠ ಹೇಳುವದಕ್ಕಾಗಿ ತುಮ್ಮಿನಕಟ್ಟೆಗೆ ಕರೆದುಕೊಂಡು ಹೋಗಿ ನಿರಂತರ ಪಾಠ ಹೇಳಿ ಪಂಡಿತರನ್ನಾಗಿ ಮಾಡಿದರು. ಅಲ್ಲಿ ಶ್ರೇಷ್ಠ ಪಂಡಿತರಾದ ತುಮ್ಮಿನಕಟ್ಟೆ ಪಾಂಡುರಂಗಿ ಹುಚ್ಚಾಚಾರ್ಯರೂ ಇದ್ದರು. ಇವರ ಶಿಷ್ಯರಿಗೆಲ್ಲ ಶ್ರೀಸತ್ಯಧ್ಯಾನತೀರ್ಥರು ಬಂಗಾರದ ಕಡಗ ಕೊಟ್ಟರು.

ಆಚಾರ್ಯರು ಉತ್ತಮ ಉಪನ್ಯಾಸಕರಾಗಿದ್ದರು. ಸರಳ ಸ್ವಭಾವದವ ರಾಗಿದ್ದರು. ಶ್ರೀಸತ್ಯಧೀರರ ಮಗಳ ಮಕ್ಕಳೂ, ಶ್ರೀಸತ್ಯಧ್ಯಾನರ ಅಳಿಯಂದಿರೂ ದೊಡ್ಡ ಪಂಡಿತರಾಗಿ ಅನೇಕ ಕಡೆಗೆ ಸಂಭಾವನೆಗಳನ್ನು ಪಡೆದವರೂ ಆಗಿದ್ದರೂ ಇವರು ಆಸ್ತಿ ಹಣ ಏನೂ ಮಾಡದೆ ಸಾದಾ ಜೀವಿಗಳಾಗಿದ್ದರು. ಶಕ ೧೮೦೮ ರಲ್ಲಿ ಜನಿಸಿದ ಆಚಾರ್ಯರು ಶಕ ೧೮೫೭ ರಲ್ಲಿ ದೈವಾಧೀನರಾದರು. ಆದರೆ ಈ ಐವತ್ತು ವರ್ಷದ ಅವಧಿಯಲ್ಲಿಯೇ ಅನೇಕ ಶಿಷ್ಯರನ್ನು ಸಿದ್ಧಪಡಿಸಿ ಅನೇಕ ಸಭೆಗಳಲ್ಲಿ ವಾಕ್ಯಾರ್ಥಮಾಡಿ ನಿರಂತರ ಪಾಠ ಪ್ರವಚನಮಾಡಿ ಕೀರ್ತಿಶಾಲಿಗಳಾದರು. ಇವರ ಹಿರಿಯ ಮಕ್ಕಳಾದ ಪಾಂಡುರಂಗಿ ಗುರುರಾಜಾಚಾರ್ಯರು ಶ್ರೀಸತ್ಯಧ್ಯಾನರಲ್ಲಿ ಸುಧಾದಿಗ್ರಂಥಗಳನ್ನು ಓದಿ ದೊಡ್ಡ ಪಂಡಿತರಾಗಿ ಹುಬ್ಬಳ್ಳಿಯಲ್ಲಿ ಪಾಠಪ್ರವಚನ ಮಾಡಿಕೊಂಡಿರುವರು.

## ಕಡಕೋಳದ ಪಾಂಡುರಂಗಿ ಜಯಾಚಾರ್ಯರು

### (ಶ್ರೀಸತ್ಯಪ್ರಜ್ಞರು) (೧೮೯೫–೧೯೪೫)

ಇವರು ಮೇಲೆ ಹೇಳಿದ ಕೃಷ್ಣಾಚಾರ್ಯರ ತಮ್ಮಂದಿರು. ಶ್ರೀಸತ್ಯಧ್ಯಾನತೀರ್ಥರ ಪೂರ್ವಾಶ್ರಮದ ಅಕ್ಕನ ಮಕ್ಕಳು ಮತ್ತು ಅವರ ಅಳಿಯಂದಿರು. ಇವರು ತಮ್ಮ ಅಣ್ಣ ಮತ್ತು ಶ್ರೀಸತ್ಯಧ್ಯಾನತೀರ್ಥರಲ್ಲಿ ನ್ಯಾಯ ವೇದಾಂತಗಳನ್ನೋದಿ ದೊಡ್ಡ ಪಂಡಿತರಾದರು. ಮಠದಲ್ಲಿಯೇ ಪಾಠಪ್ರವಚನ ಮಾಡುತ್ತಿದ್ದರು. ಶ್ರೀಸತ್ಯಧ್ಯಾನತೀರ್ಥರ ಕಾಲದಲ್ಲಿ ಮಠದ ದಿವಾನರಾಗಿ ಮಠದ ಸಾಲವನ್ನೆಲ್ಲ ತೀರಿಸಿ ಆಸ್ತಿಗಳನ್ನೆಲ್ಲ ವ್ಯವಸ್ಥೆಗೆ ತಂದು ಹೊಸ ಆಸ್ತಿಯನ್ನೂ ಮಾಡಿ ಮಠವನ್ನೂ ಅಭಿವೃದ್ಧಿಪಡಿಸಿದರು. ಮುಂದೆ ಶ್ರೀಸತ್ಯಧ್ಯಾನರು ಇವರಿಗೇ ಆಶ್ರಮಕೊಟ್ಟು ಸತ್ಯಪ್ರಜ್ಞರೆಂದು ಕರೆದರು. ಶ್ರೀಸತ್ಯಪ್ರಜ್ಞರಾದ ಮೇಲಿನ ಇವರ ಚರಿತ್ರೆಯನ್ನು ಸತ್ಯಪ್ರಜ್ಞವಿಜಯದಲ್ಲಿ ವಿವರಿಸಲಾಗಿದೆ.

## ತುಮ್ಮಿನಕಟ್ಟೆ ಪಾಂಡುರಂಗಿ ರಾಮಾಚಾರ್ಯರು

### (ಈಗ ವಿದ್ಯಮಾನರಾದ ವಿದ್ವಾಂಸರು)

ಇವರು ತುಮ್ಮಿನಕಟ್ಟೆ ಪಾಂಡುರಂಗಿ ಹುಚ್ಚಾಚಾರ್ಯರ ಎರಡನೆಯ ಮಕ್ಕಳು. ತಮ್ಮ ತಂದೆಯವರಲ್ಲಿಯೇ ನ್ಯಾಯವೇದಾಂತ ಓದಿದರು. ಮೈಸೂರು, ಬಡೋದಾಗಳಲ್ಲಿ ವಿದ್ವತ್ಪರೀಕ್ಷೆಗಳನ್ನು ಮಾಡಿರುವರು. ರಾಣೇಬೆನ್ನೂರಿನಲ್ಲಿ ಸುಮಾರು ಐವತ್ತು ವರ್ಷ ವಾಸವಾಗಿದ್ದು ಶ್ರೀವಿದ್ಯಾಧೀಶಸ್ವಾಮಿಗಳವರ ಮಠದಲ್ಲಿ ಪಾಠಪ್ರವಚನ ಮಾಡುತ್ತಿದ್ದರು. ತಮ್ಮ ಪರ್ಯಾಯದ ಕಾಲದಲ್ಲಿಯೂ ಇನ್ನಿತರ ಅವಧಿಯಲ್ಲಿಯೂ ಶ್ರೀವಿದ್ಯಾಧೀಶರ ಪೂಜಾ ಆರಾಧನಾದಿಗಳ ಏರ್ಪಾಡು ಮಾಡುತ್ತಿದ್ದರು. ಅನೇಕರಿಗೆ ಶಾಂತಿಪಾಠ ಮಾಡಿಸಿರುವರು. ೧೮೮೩ ರಲ್ಲಿ ಜನಿಸಿದ ಇವರು ೧೯೮೩ ರಲ್ಲಿ ಶತಾಯುಷಿಗಳಾದರು. ಶತಾಯುಷಿಗಳಾದ ಇವರು ಈಗ ಬೆಂಗಳೂರಿನಲ್ಲಿ ವಾಸಮಾಡುತ್ತಿರುವರು. ಇವರ ಮಕ್ಕಳಾದ ಎಚ್. ಆರ್. ಪಾಂಡುರಂಗಿಯವರು ಮುಂಬಯಿಯ ಭಾರತೀಯ ವಿದ್ಯಾಭವನದ ಕಾಲೇಜು ಮತ್ತು ಇನ್ನಿತರ ಕಾಲೇಜುಗಳಲ್ಲಿ ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು. ಈಗ ನಿವೃತ್ತರಾದ ಮೇಲೆ ಮುಂಬಯಿಯಲ್ಲಿಯೇ ನೆಲೆಸಿರುವರು. ಇವರ ಇತರ ಮಕ್ಕಳೂ ಲೌಕಿಕಜೀವನದಲ್ಲಿ ಯಶಸ್ವಿಯಾಗಿರುವರು.

## ೩. ಶ್ರೀನಾಥಾಚಾರ್ಯರು (ಈಗ ವಿದ್ಯಮಾನರಾದ ವಿದ್ವಾಂಸರು)

ಇವರು ತುಮ್ಮಿನಕಟ್ಟೆ ಹುಚ್ಚಾಚಾರ್ಯರ ಹಿರಿಯ ಮಕ್ಕಳಾದ ತಮ್ಮಣ್ಣಾಚಾರ್ಯರ ಮಕ್ಕಳು. ಇವರ ಮಾತಾಮಹರಾದ ಪಾಚ್ಛಾಪುರದ ತಮ್ಮಣ್ಣಾಚಾರ್ಯರಿಗೆ ದತ್ತಕಹೋದದ್ದರಿಂದ ಇವರು ಪಾಚ್ಛಾಪುರದ ಶ್ರೀನಾಥಾ-ಚಾರ್ಯರಾದರು. ಇವರು ಮೊದಲು ಧಾರವಾಡದಲ್ಲಿ ಕಾವ್ಯನಾಟಕಾದಿಗಳನ್ನು ಓದಿ ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜದಲ್ಲಿ ಪ್ರಾಚೀನನ್ಯಾಯ, ನವೀನನ್ಯಾಯ ಮತ್ತು ವೇದಾಂತಗಳಲ್ಲಿ ವಿದ್ವತ್ಪರೀಕ್ಷೆಗಳನ್ನು ಮಾಡಿದರು. ಧಾರಾಪುರಂ ಕೃಷ್ಣಮೂರ್ತಿ ಆಚಾರ್ಯರು, ಕಾಶೀ ಪ್ರಾಣೇಶಾಚಾರ್ಯರು ಮತ್ತು ಚತುರ್ವೇದೀ ರಾಮಚಂದ್ರಾಚಾರ್ಯರಲ್ಲಿ ಈ ಶಾಸ್ತ್ರಗಳನ್ನು ಓದಿದರು. ಮುಂದೆ ಮೈಸೂರು ಸಂಸ್ಕೃತ ಕಾಲೇಜದಲ್ಲಿ ನ್ಯಾಯಶಾಸ್ತ್ರದ ಪ್ರಾಧ್ಯಾಪಕರಾಗಿ ನಿಯಮಿಸಲ್ಪಟ್ಟು ಸುಮಾರು ಮೂವತ್ತುವರ್ಷ ಪಾಠಪ್ರವಚನಮಾಡಿ ನಿವೃತ್ತರಾಗಿ ಈಗಲೂ ಮನೆಯಲ್ಲಿ ವೇದಾಂತದ ಪಾಠಪ್ರವಚನ ಮಾಡುತ್ತಿರುವರು. ಉಡುಪಿ, ಮಂತ್ರಾಲಯಗಳಲ್ಲಿ ನಡೆಯುವ ಮತ್ತು ಉತ್ತರಾದಿಮಠದ ವಿದ್ವತ್ಸಭೆಗಳಲ್ಲಿ ಪ್ರಧಾನ ಪಂಡಿತರಾಗಿರುವರು. ವ್ರತ ನಿಯಮ ಉಪವಾಸಾದಿಗಳಿಂದ ಬಹಳ ಸಾತ್ವಿಕವಾದ ಜೀವನವನ್ನು ನಡೆಸುತ್ತಿರುವರು. ಹಾಲೀ ಇರುವ ಪಾಂಡುರಂಗಿ ಮನೆತನದ ಪಂಡಿತರಲ್ಲಿ ಇವರು ಪ್ರಮುಖರು.

## ಹುಬ್ಬಳ್ಳಿಯ ಪಾಂಡುರಂಗಿ ಗುರುರಾಜಾಚಾರ್ಯರು (ಈಗ ವಿದ್ಯಮಾನರಾದ ವಿದ್ವಾಂಸರು)

ಇವರು ಕಡಕೋಳ ಪಾಂಡುರಂಗಿ ಕೃಷ್ಣಾಚಾರ್ಯರ ಹಿರಿಯ ಮಕ್ಕಳು. ತಾ|| ೧೩–೧೧–೧೯೨೪ ರಲ್ಲಿ ಜನಿಸಿದರು. ಉತ್ತರಾದಿಮಠದಲ್ಲಿ ಪಂಡಿತೋತ್ತಮ ರೆನಿಸಿದ ಇವರ ತಂದೆಯವರಾದ ಕೃಷ್ಣಾಚಾರ್ಯರಲ್ಲಿಯೇ ಕಾವ್ಯನಾಟಕಗಳನ್ನೂ ಕೆಲವು ವೇದಾಂತಗ್ರಂಥಗಳನ್ನೂ ಓದಿದರು. ಇವರ ಹದಿಮೂರನೆಯವಯಸ್ಸಿನಲ್ಲಿಯೇ ತಂದೆಯವರು ದಿವಂಗತರಾದ್ದರಿಂದ ಅವರ ಪಾಠದ ಸಂಪೂರ್ಣ ಲಾಭ ಇವರಿಗೆ ದೊರೆಯಲಿಲ್ಲ. ತಿರುಪತಿಯಲ್ಲಿಯ ಪ್ರಸಿದ್ಧ ವ್ಯಾಕರಣ ಪಂಡಿತರಾದ ಸೇತುಮಾಧವಾ ಚಾರ್ಯರಲ್ಲಿಯೂ, ಬೆಂಗಳೂರಿನಲ್ಲಿದ್ದ ಸುರಪುರದ ಜಗನ್ನಾಥಾಚಾರ್ಯರಲ್ಲಿಯೂ

(ಇವರು ಮುಂದೆ ಅಕ್ಷೋಭ್ಯತೀರ್ಥಮಠಕ್ಕೆ ಯತಿಗಳಾದರು) ಇನ್ನಾ ಕೃಷ್ಣಾ-ಚಾರ್ಯರಲ್ಲಿಯೂ ವ್ಯಾಕರಣವನ್ನು ಓದಿದರು. ಯಜ್ಞವಿಠ್ಠಲಾಚಾರ್ಯರಲ್ಲಿ ತರ್ಕಶಾಸ್ತ್ರವನ್ನು ಓದಿದರು. ಅಕ್ಷೋಭ್ಯಾಚಾರ್ಯ ಎಮ್.ಎ. ಅವರಿಂದ ಸ್ವಲ್ಪ ಇಂಗ್ಲಿಷ್ ಕಲಿತರು. ಮುಂದೆ ಶ್ರೀಮದುತ್ತರಾದಿಮಠಕ್ಕೆ ಹೋಗಿ ಶ್ರೀಸತ್ಯಧ್ಯಾನ ತೀರ್ಥರಲ್ಲಿ ವೇದಾಂತದ ಉದ್ಗ್ರಂಥಗಳನ್ನು ಓದಿದರು. ಗದುಗಿನ ಮಹಾ ಸಮಾರಾಧನೆಯ ಕಾಲದಲ್ಲಿ ಶ್ರೀಸತ್ಯಧ್ಯಾನತೀರ್ಥರು ಅನೇಕ ಪ್ರಮುಖ ಪಂಡಿತರ ಎದುರಿಗೆ ಇವರಿಂದ ತತ್ವಪ್ರಕಾಶಿಕಾ ಅನುವಾದ ಮಾಡಿಸಿದರು. ಮುಂದೆ ನ್ಯಾಯಾಮೃತಾದಿ ಗ್ರಂಥಗಳ ಪಾಠವನ್ನು ಹೇಳಿ ಅನುವಾದ ಮಾಡಿಸಿದರು.

ಪೂರ್ವಾಶ್ರಮದಲ್ಲಿ ಇವರ ಚಿಕ್ಕಪ್ಪನವರಾದ ಪಾಂಡುರಂಗಿ ಜಯಾಚಾರ್ಯರು ಆಶ್ರಮ ಸ್ವೀಕರಿಸಿ ಸತ್ಯಪ್ರಜ್ಞರೆನಿಸಿದಾಗ ಇವರಿಗೆ ಶ್ರೀಮನ್ನ್ಯಾಯಸುಧಾ ಗ್ರಂಥ ವನ್ನು ವಾಕ್ಯಾರ್ಥಚಂದ್ರಿಕಾ ಶೇಷವಾಕ್ಯಾರ್ಥಚಂದ್ರಿಕಾ ಟಿಪ್ಪಣಿಗಳೊಡನೆ ಪಾಠ ಹೇಳಿದರು.

ಹೀಗೆ ದೃಢವಾದ ಪಾಂಡಿತ್ಯವನ್ನು ಸಂಪಾದಿಸಿದ ಇವರು ಕೆಲವು ಕಾಲ ಹೊಸಪೇಟೆ, ವಿಜಾಪುರ, ಧಾರವಾಡಗಳಲ್ಲಿದ್ದು ಪಾಠಪ್ರವಚನ ಮಾಡಿದರು. ಈಗ ಹುಬ್ಬಳ್ಳಿಯಲ್ಲಿ ಕಾಯಂ ವಾಸವಾಗಿದ್ದು ನಿರಂತರ ಪಾಠಪ್ರವಚನದಲ್ಲಿ ನಿರತ ರಾಗಿರುವರು.

ಧಾರವಾಡದಲ್ಲಿ ೧೯೪೯ರಲ್ಲಿ ಶ್ರೀ ಬುರ್ಲಿ ಬಿಂದು ಮಾಧವರು ಏರ್ಪಡಿಸಿದ ಜ್ಞಾನಸತ್ರಕ್ಕೆ ಆಚಾರ್ಯರು ಅಧ್ಯಕ್ಷರಾಗಿದ್ದರು. ಅನೇಕ ಪಂಡಿತರು ಭಾಗವಹಿಸಿದ ಆ ಕಾರ್ಯಕ್ರಮವು ಉನ್ನತಮಟ್ಟದ ವಿದ್ವತ್ ಕಾರ್ಯಕ್ರಮವಾಗಿದ್ದಿತು. ಶ್ರೀ ಭಂಡಾರಿಕೇರಿ ಮಠದ ವಿದ್ಯಾಮಾನ್ಯತೀರ್ಥರು ಏರ್ಪಡಿಸುವ ಶ್ರೀಮನ್ ಮಾಧ್ವರಾದ್ಧಾಂತಸಭೆಯ ಪ್ರತಿಯೊಂದು ಸಮ್ಮೇಳನಕ್ಕೂ ಆಚಾರ್ಯರು ಆಹ್ವಾನಿತರಾಗಿ ಹೋಗುವರು. ಇವರ ತಂದೆಯವರಿಂದ ಪಾಠಕೇಳಿದ ಶ್ರೀಸ್ವಾಮಿ ಗಳವರಿಗೆ ಇವರ ಮೇಲೆ ಅಪಾರ ಅಭಿಮಾನವಿರುವದು.

ಶ್ರೀ ಪೇಜಾವರ ಸ್ವಾಮಿಗಳವರು ಸ್ಥಾಪಿಸಿದ ಅಖಿಲಭಾರತ ಮಾಧ್ವ ಮಹಾಮಂಡಲಕ್ಕೆ ಆಚಾರ್ಯರು ಕಾರ್ಯದರ್ಶಿಗಳೂ ಉಪಾಧ್ಯಕ್ಷರೂ ಅಧ್ಯಕ್ಷರೂ (೧೯೬೯-೭೪ ಅಧ್ಯಕ್ಷರು) ಆಗಿ ಸೇವೆ ಸಲ್ಲಿಸಿರುವರು. ಮೈಸೂರಿನಲ್ಲಿ ೧೯೭೪ರಲ್ಲಿ

ನಡೆದ ಅಖಿಲಭಾರತ ಮಾಧ್ವ ತತ್ವಜ್ಞಾನ ಸಮ್ಮೇಲನಕ್ಕೆ ಅಧ್ಯಕ್ಷರಾಗಿದ್ದರು. ಶ್ರೀ ಪೇಜಾವರ ಮತ್ತು ಶ್ರೀ ಫಲಿಮಾರು ಮಠಾಧೀಶರ ಪರ್ಯಾಯಕಾಲದಲ್ಲಿ ಈ ಮಠಗಳ ಆಸ್ಥಾನವಿದ್ವಾಂಸರಾಗಿದ್ದರು. ಶ್ರೀವಿದ್ಯಾಮಾನ್ಯತೀರ್ಥರು ಇವರಿಗೆ ವೇದಾಂತರತ್ನ, ವೇದಾಂತನಿಧಿ, ಸುಧಾನಿಧಿ ಎಂಬ ಪದವಿಗಳನ್ನು ಕೊಟ್ಟಿದ್ದಾರೆ. ಶ್ರೀಪೇಜಾವರ ಸ್ವಾಮಿಗಳು ಶಾಸ್ತ್ರರತ್ನಾಕರ ಎಂಬ ಪದವಿಯನ್ನು ಕೊಟ್ಟಿದ್ದಾರೆ.

ಶ್ರೀಮದುತ್ತರಾದಿಮಠದ ವಿದ್ವತ್ಸಭೆ ಮತ್ತು ಮಹಾಸಮಾರಾಧನೆಗಳಿಗೆ ಆಹ್ವಾನಿತರಾಗಿ ಹೋಗಿ ಇವರ ಮನೆತನದ ಪರಂಪರೆಗೆ ತಕ್ಕಂಥ ಗೌರವವನ್ನು ಪಡೆಯುತ್ತಾರೆ.

ಹುಬ್ಬಳ್ಳಿ, ತುಮಕೂರು, ಬೆಂಗಳೂರುಗಳಲ್ಲಿ ಸುಧಾಮಂಗಳಗಳನ್ನು ಮಾಡಿ ಅನೇಕ ಶಿಷ್ಯರ ಪ್ರೀತಿಗೆ ಪಾತ್ರರಾಗಿದ್ದಾರೆ.

ಆಚಾರ್ಯರ ತಮ್ಮಂದಿರಾದ ರಾಮಾಚಾರ್ಯರು ಬೆಂಗಳೂರಿನಲ್ಲಿ ವಾಸ ವಾಗಿರುವರು. ಇವರ ಮಕ್ಕಳಲ್ಲಿ ಸೇತುರಾಮ ಎಂಬವರು ಡಾಕ್ಟರರಾಗಿ ಅಮೇರಿಕೆಗೆ ತೆರಳಿರುವರು.

ಪಾಂಡುರಂಗಿ ಮನೆತನದ ವರ್ತಮಾನ ಪಂಡಿತರಲ್ಲಿ ವಿದ್ವತ್ತು, ಐಶ್ವರ್ಯ, ಸಜ್ಜನಿಕೆಗೆ ಮತ್ತು ಮನೆತನದ ಘನತೆಗಳನ್ನು ಉಳಿಸಿಕೊಂಡವರಲ್ಲಿ ಇವರು ಅಗ್ರಗಣ್ಯರಾಗಿದ್ದಾರೆ.

## ಬೆಂಗಳೂರಿನ ಪಾಂಡುರಂಗಿ ಕೃಷ್ಣಾಚಾರ್ಯರು(ಕೆ.ಟಿ. ಪಾಂಡುರಂಗಿ) (ಈಗ ವಿದ್ಯಮಾನರಾದವರು)

ಇವರು ತುಮ್ಮಿನಕಟ್ಟೆ ಪಾಂಡುರಂಗಿ ಹುಚ್ಚಾಚಾರ್ಯರ ಮೊಮ್ಮಕ್ಕಳು ಮತ್ತು ಧಾರವಾಡದಲ್ಲಿ ನೆಲೆಸಿದ್ದ ತಮ್ಮಣ್ಣಾಚಾರ್ಯರ ಮಕ್ಕಳು. ೧೯೧೮ ರಲ್ಲಿ ಜನಿಸಿದ ಇವರು ಧಾರವಾಡದಲ್ಲಿ ಶ್ರೀ ಅವಧಾನಿ ರಾಘವೇಂದ್ರಾಚಾರ್ಯರು ಮತ್ತು ಶಿರಸಂಗಿ ಗುಂಡಶಾಸ್ತ್ರಿಗಳಲ್ಲಿ ಕಾವ್ಯನಾಟಕಗಳನ್ನು ಓದಿದರು. ಬಳಿಕ ೧೯೩೩-೩೬ ರವರೆಗೆ ಸಾಂಗಲಿಗೆ ಹೋಗಿ ಅಲ್ಲಿಯ ವೇದಶಾಸ್ತ್ರೋತ್ತೇಜಕ ಪಾಠಶಾಲೆಯಲ್ಲಿ ಹಾವಳೆ ದಿಗಂಬರ ಶಾಸ್ತ್ರಿಗಳಲ್ಲಿ ದಿನಕರಿ ಪಂಚಲಕ್ಷಣಾಗಳವರೆಗೆ ನ್ಯಾಯಶಾಸ್ತ್ರವನ್ನು ಓದಿದರು. ಅನಂತರ ಮೈಸೂರು ಮಹಾರಾಜಾ ಸಂಸ್ಕೃತ

ಮಹಾಪಾಠಶಾಲೆಯನ್ನು ಸೇರಿ ನ್ಯಾಯಶಾಸ್ತ್ರದ ಮುಂದಿನ ವಾದಗ್ರಂಥಗಳನ್ನು ಚರ್ಕಿ ರಾಮಸ್ವಾಮಿ ಅಯ್ಯಂಗಾರರು ಚತುರ್ವೇದಿ ರಾಮಚಂದ್ರಾಚಾರ್ಯರು ಕಾಶೀ ಪ್ರಾಣೇಶಾಚಾರ್ಯರು ಮತ್ತು ಧಾರಾಪುರಂ ಕೃಷ್ಣಮೂರ್ತಿ ಆಚಾರ್ಯರಲ್ಲಿ ಓದಿದರು. ೧೯೩೭ ರಿಂದ ೧೯೪೦ ರವರೆಗೆ ಮೈಸೂರಿನಲ್ಲಿ ಪಾಠಶಾಲೆಯಲ್ಲಿ ನ್ಯಾಯಶಾಸ್ತ್ರದ ವಿದ್ವತ್ಪೂರ್ವಭಾಗದ ಎಲ್ಲಾ ಗ್ರಂಥಗಳನ್ನು ಓದಿದರು. ಮೈಸೂರಿನ ಪೂರ್ವಭಾಗ ಪರೀಕ್ಷೆಯಲ್ಲದೆ ಬಡೋದಾ ಶ್ರಾವಣಮಾಸದಕ್ಷಿಣಾಪರೀಕ್ಷೆಯ ನ್ಯಾಯರತ್ನ ಮಧ್ಯಮಾ ಪರೀಕ್ಷೆಯಲ್ಲಿ ಪ್ರಥಮಶ್ರೇಣಿಯನ್ನು ಪಡೆದರು. ಇದೇ ಸಮಯದಲ್ಲಿ ಮನೆಯಲ್ಲಿ ಚತುರ್ವೇದಿ ರಾಮಚಂದ್ರಾಚಾರ್ಯರು ಮತ್ತು ಧಾರಾಪುರಂ ಕೃಷ್ಣಮೂರ್ತಿ ಆಚಾರ್ಯರಲ್ಲಿ ದ್ವೈತವೇದಾಂತದ ಗ್ರಂಥಗಳನ್ನು ಓದಿ ಪದ್ಮಸರೋವರದಲ್ಲಿ ಶ್ರೀಸತ್ಯಧ್ಯಾನತೀರ್ಥರು ನಡೆಸುತ್ತಿದ್ದ ಪರೀಕ್ಷೆಗಳನ್ನು ಈ ಗ್ರಂಥಗಳಲ್ಲಿ ಕೊಡುತ್ತಿದ್ದರು. ಮುಂದೆ ದ್ವೈತವೇದಾಂತದ ವಿದ್ವತ್ಪರೀಕ್ಷೆಯನ್ನು ಕೊಟ್ಟರು.

ಮೈಸೂರಿನಲ್ಲಿ ನ್ಯಾಯವೇದಾಂತ ಓದಿದಮೇಲೆ ೧೯೪೦ ರಿಂದ ೧೯೪೪ರವರೆಗೆ ಚಿದಂಬರಂದಲ್ಲಿಯ ಅಣ್ಣಮಲೈ ವಿಶ್ವವಿದ್ಯಾನಿಲಯವನ್ನು ಸೇರಿ ಕೆ. ಶ್ರೀನಿವಾಸಾ-ಚಾರ್ಯರು, ವೆಂಕಟರಾಮದೀಕ್ಷಿತರು, ಪ್ರೊ. ವಿ. ಎ. ರಾಮಸ್ವಾಮಿಶಾಸ್ತ್ರಿಗಳು, ಪ್ರೊ. ಪಿ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು ಇವರಲ್ಲಿ ಪೂರ್ವಮೀಮಾಂಸಾಶಾಸ್ತ್ರವನ್ನು ಓದಿ ಮೀಮಾಂಸಾಶಿರೋಮಣಿ ಪದವಿಯನ್ನು ಪಡೆದರು. ಅಲ್ಲಿಯೇ ಭಾಷಾಶಾಸ್ತ್ರವನ್ನೂ ಓದಿ ಪಿ. ಓ. ಎಲ್. ಸರ್ಟಿಫಿಕೆಟ್ಟನ್ನು ಪಡೆದರು. ಅಲ್ಲಿ ಸುಪ್ರಸಿದ್ಧ ವ್ಯಾಕರಣ ಪಂಡಿತ ದಂಡಪಾಣಿ ದೀಕ್ಷಿತರ ಶಿಷ್ಯರಾದ ರಾಮಸುಬ್ಬಾ-ಶಾಸ್ತ್ರಿಗಳಲ್ಲಿ ವ್ಯಾಕರಣವನ್ನು ಓದಿ ವ್ಯಾಕರಣತೀರ್ಥ ಮಧ್ಯಮಾ ಪರೀಕ್ಷೆಯನ್ನೂ ಮಾಡಿದರು. ವೇಪತ್ತೂರು ಸುಬ್ರಹ್ಮಣ್ಯಶಾಸ್ತ್ರಿಗಳಲ್ಲಿ ನ್ಯಾಯದ ವಾದಗ್ರಂಥಗಳನ್ನು ಓದಿದರು. ಆಗ ಬಿ. ಎನ್. ಕೃಷ್ಣಮೂರ್ತಿ ಶರ್ಮರು ಇದೇ ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸಕರಾಗಿದ್ದರು. ಅವರ ಸಂಪರ್ಕವನ್ನೂ ಪಡೆದರು.

ಹೀಗೆ ಪ್ರಾಚೀನ ಪದ್ಧತಿಯಂತೆ ವಿದ್ಯಾಭ್ಯಾಸವನ್ನು ಮುಗಿಸಿ ಧಾರವಾಡಕ್ಕೆ ಬಂದು ೧೯೪೪ ರಿಂದ ೪೮ ರವರೆಗೆ ಕರ್ನಾಟಕ ಹೈಸ್ಕೂಲಿನಲ್ಲಿ ಅಸುಂಡಿ ಅನಂತ ರಾಯರ ದತ್ತಿಯ ಸಂಸ್ಕೃತ ಅಧ್ಯಾಪಕರಾದರು. ನಂತರ ೧೯೪೮ ರಲ್ಲಿ ಆಗಿನ ಗವರ್ನಮೆಂಟು ಕಾಲೇಜ ಆದ ಕರ್ನಾಟಕ ಕಾಲೇಜದಲ್ಲಿ ಸಂಸ್ಕೃತ ಪಂಡಿತರಾಗಿ

ಸೇರಿದರು. ಈ ಪಂಡಿತರ ಹುದ್ದೆಯಲ್ಲಿ ಹಿಂದೆ ರಡ್ಡೀ ರಂಗಾಚಾರ್ಯರು ಗಜೇಂದ್ರಗಡ ಸೇತುಮಾಧವಾಚಾರ್ಯರು ಮೊದಲಾದ ಗಣ್ಯರು ಕಾರ್ಯ ಮಾಡಿದ್ದು ಉತ್ತರ ಕರ್ನಾಟಕದಲ್ಲಿ ಇದು ತುಂಬ ಗೌರವದ ಸ್ಥಾನವಾಗಿದ್ದಿತು. ಹೀಗೆ ಪಂಡಿತರಾಗಿ ಕಾರ್ಯ ಮಾಡುತ್ತಿದ್ದಾಗಲೇ ಆಧುನಿಕ ವಿದ್ಯಾಭ್ಯಾಸವನ್ನು ಆರಂಭಿಸಿ ಬನಾರಸ ಹಿಂದೂ ವಿಶ್ವವಿದ್ಯಾನಿಲಯದಿಂದ ಬಿ.ಎ., ಎಮ್.ಎ. ಪದವಿಗಳನ್ನು ಪಡೆದರು.

ಇದರಿಂದಾಗಿ ೧೯೫೭ ರಲ್ಲಿ ಅದೇ ಕಾಲೇಜದಲ್ಲಿ ರೀಡರ್ ಹುದ್ದೆಗೆ ಏರಿದರು. ಮುಂದೆ ಆ ಕಾಲೇಜನ್ನು ಕರ್ನಾಟಕ ವಿಶ್ವವಿದ್ಯಾನಿಲಯದ ಸ್ವಾಧೀನಕ್ಕೆ ಕೊಟ್ಟ ಮೇಲೆ ೧೯೬೧ರಲ್ಲಿ ಅಲ್ಲಿಂದ ವರ್ಗವಾಗಿ ಕೋಲಾರ ಮತ್ತು ಬೆಂಗಳೂರು ಗವರ್ನಮೆಂಟ ಕಾಲೇಜುಗಳಲ್ಲಿ ರೀಡರಾಗಿ ಕೆಲಸಮಾಡಿ ೧೯೬೮ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ವಿಭಾಗವು ಸ್ಥಾಪಿತವಾದಾಗ ಅದರ ಮುಖ್ಯಸ್ಥರಾಗಿ ಸೇರಿ ೧೯೭೪ ಏಪ್ರಿಲ್‌ನಲ್ಲಿ ಸೇವಾನಿವೃತ್ತರಾದರು. ಈ ಅವಧಿಯಲ್ಲಿ ಇವರ ವಿದ್ಯಾರ್ಥಿಯಾಗಿದ್ದ ಅನೇಕರು ಈಗ ನಾನಾ ಕಾಲೇಜುಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರಲ್ಲಿ ಡಾ. ಮೋಡಕ, ಡಾ. ಶ್ರೀನಿವಾಸರಿತ್ತಿ, ಡಾ. ಶಾನಭಾಗ, ಎಮ್. ಎನ್. ಜೋಶಿ, ಆರ್. ಎನ್. ಅರಳೀಕಟ್ಟೆ, ಡಿ. ಪ್ರಲ್ಹಾದಾಚಾರ್ಯ, ಲಕ್ಷ್ಮೀನಾರಾಯಣ ಶರ್ಮಾ, ಕೆ. ನಾರಾಯಣದಾಸ, ನಾಗಭೂಷಣಭಟ್ಟ, ವಿ. ಪ್ರಭಂಜನ, ಎಚ್. ಎಸ್. ಶ್ರೀನಿವಾಸಮೂರ್ತಿ, ಎಮ್. ಎನ್. ಚಂದ್ರಶೇಖರ, ಸುಜ್ಞಾನಮೂರ್ತಿ ಮೊದಲಾದವರು ಪ್ರಮುಖರು. ಇವರೆಲ್ಲ ಉತ್ತಮ ಅಧ್ಯಾಪಕರೆಂಬ ಕೀರ್ತಿಯನ್ನು ಪಡೆದಿರುವರು. ಇವರಲ್ಲಿ ಓದಿ ಅನೇಕ ವಿದ್ಯಾರ್ಥಿನಿಯರೂ ಅಧ್ಯಾಪನಕಾರ್ಯ ಮಾಡುತ್ತಿರುವರು. ಇವರಲ್ಲಿ ಶ್ರೀಮತಿ ಚಂಗಮಣಿ, ಶ್ರೀಮತಿ ಎಸ್. ಆರ್. ಲೀಲಾ, ಶ್ರೀಮತಿ ಎಮ್. ಎ. ಜಯಶ್ರೀ, ಶ್ರೀಮತಿ ಪಿ. ಕೆ. ಗಾಯತ್ರಿ, ಶ್ರೀಮತಿ ವಿಜಯಾ ಕಸ್ತೂರಿ, ಶ್ರೀಮತಿ ಅರುಣಾ ಮೊದಲಾದವರು ಪ್ರಮುಖರು.

ಇದಲ್ಲದೆ ಅನೇಕ ವಿದೇಶಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರು ಮತ್ತು ಪ್ರಾಧ್ಯಾಪಕರು ಇವರಲ್ಲಿ ಓದಿರುವರು. ಶ್ರೀಮತಿ ಸುಯಝಾನಾ ಸಿಯಾವೋ ಎಂಬ ಫ್ರೆಂಚ ಮಹಿಳೆಯು ಖಂಡನತ್ರಯ, ಅನುವ್ಯಾಖ್ಯಾನ, ತತ್ವನಿರ್ಣಯಗಳನ್ನು ಇವರಲ್ಲಿ ಓದಿ ಫ್ರೆಂಚಿನಲ್ಲಿ ಇವುಗಳ ಅನುವಾದ ಮಾಡಿರುವರು. ಶ್ರೀಮತಿ

ಹೈಡ್ರೂನ್ ಬ್ರುಖ್‌ನೇರ್ ಎಂಬ ಜರ್ಮನ್ ಮಹಿಳೆಯು ಛಾಂದೋಗ್ಯ ಭಾಷ್ಯವನ್ನು ಓದಿದರು. ಶ್ರೀಮತಿ ಇರೆನೆ ವಿಚರ್ ಎಂಬವರು ಪೂರ್ವ ಮೀಮಾಂಸಾ ಗ್ರಂಥಗಳನ್ನು ಓದಿದರು. ಆಸ್ಟ್ರೇಲಿಯಾದ ಪುರುಷೋತ್ತಮ ಬಿಲ್ಮೋರಿಯಾ ಎಂಬವರೂ ಮೀಮಾಂಸಾಶಾಸ್ತ್ರವನ್ನು ಓದಿದರು. ಇವರಲ್ಲದೆ ಹಿಲ್ಬೈಬೈಟಲ್, ಟೇಬರ್, ಜಫರೇ ಮೊದಲಾದವರೂ ವೇದಾಂತ ಮೀಮಾಂಸಾ ಗ್ರಂಥಗಳನ್ನು ಓದಿ ಹೋದರು. ಕೆ. ಟಿ. ಪಾಂಡುರಂಗಿಯವರು ೧೯೭೩ ರಿಂದ ೧೯೮೦ರವರೆಗೆ ಕೇಂದ್ರ ಸರಕಾರದ ಸಂಸ್ಕೃತ ಸಲಹಾ ಮಂಡಲದ ಸದಸ್ಯರಾಗಿದ್ದರು. ಆಗ ಕರ್ನಾಟಕದ ಸುಮಾರು ಇನ್ನೂರು ಪಂಡಿತರಿಗೆ ಮಾಸಾಶನ ಕೊಡಿಸಿರುವರು. ಇವರಲ್ಲಿ ಮಾಧ್ವಪಂಡಿತರು ಮಾತ್ರವಲ್ಲದೆ ತ್ರಿಮತಸ್ಥ ಪಂಡಿತರೂ ಇರುವರು. ಅನೇಕ ಗ್ರಂಥಗಳ ಪ್ರಕಾಶನಕ್ಕೆ ಸಹಾಯಧನ ಕೊಡಿಸಿರುವರು. ಎಂಟು ವಿಶ್ವವಿದ್ಯಾನಿಲಯಗಳ ಪಿಎಚ್. ಡಿ. ಪರೀಕ್ಷೆಗೆ ಪರೀಕ್ಷಕರಾಗಿದ್ದು ಸುಮಾರು ೩೦ ಜನರಿಗೆ ಪಿಎಚ್. ಡಿ. ಕೊಡಿಸಿರುವರು. ಡಾ. ಬಿ. ಎನ್. ಕೆ. ಶರ್ಮರ ಡಿ.ಲಿಟ್. ಪ್ರಬಂಧಕ್ಕೆ ಪರೀಕ್ಷಕರಾಗಿದ್ದರು. ಸುಮಾರು ೧೦ ವಿದ್ಯಾರ್ಥಿಗಳಿಗೆ ವಿದ್ಯಾವಾರಿಧಿ ಪದವಿಯ ಪರೀಕ್ಷಕರಾಗಿದ್ದರು.

೧೯೬೮ ರಲ್ಲಿ ಬೆಂಗಳೂರಿನಲ್ಲಿ ಸಂಸ್ಕೃತ ಕವಿ ಸಮ್ಮೇಲನವನ್ನು ಏರ್ಪಡಿಸಿ ಗಲಗಲಿ ರಾಮಾಚಾರ್ಯರನ್ನು ಸತ್ಕರಿಸಿದರು. ೧೯೭೪ ರಲ್ಲಿ ಇನ್ನೊಂದು ಕವಿ ಸಮ್ಮೇಲನವನ್ನು ಏರ್ಪಡಿಸಿದರು. ೧೯೮೧ ರಲ್ಲಿ ಅಖಿಲಕರ್ನಾಟಕ ಸಂಸ್ಕೃತ ಪರಿಷತ್ತನ್ನು ಸ್ಥಾಪಿಸಿದವರಲ್ಲಿ ಒಬ್ಬರಾಗಿದ್ದು ಅದರ ಕಾರ್ಯಾಧ್ಯಕ್ಷರಾಗಿರುವರು.

ಬೆಂಗಳೂರು ಚಾಮರಾಜಪೇಟೆಯ ಮಾಧ್ವಸಂಘಕ್ಕೆ ೧೯೬೮ ರಿಂದ ೧೦ ವರ್ಷದವರೆಗೆ ಅಧ್ಯಕ್ಷರಾಗಿದ್ದರು. ೧೯೭೨ ರಿಂದ ಪೂರ್ಣಪ್ರಜ್ಞ ವಿದ್ಯಾಪೀಠದ ಉಪಕುಲಪತಿಗಳಾಗಿರುವರು. ೧೯೭೮ ರಲ್ಲಿ ಬೆಂಗಳೂರಲ್ಲಿ ನಡೆದ ಮಾಧ್ವ ತತ್ವಜ್ಞಾನ ಸಮ್ಮೇಲನಕ್ಕೆ ಅಧ್ಯಕ್ಷರಾಗಿದ್ದರು. ಮಂತ್ರಾಲಯ, ಉಡುಪಿ, ಶ್ರೀರಂಗಮ್‌ಗಳಲ್ಲಿ ನಡೆಯುವ ವಿದ್ವತ್ಸಭೆಗಳಿಗೆ ಹೋಗುವರು. ಸಿಮ್ಲಾ, ಪುಣೆ, ಮೈಸೂರು, ಮದ್ರಾಸ್, ತಿರುಪತಿ, ಭುವನೇಶ್ವರ, ಮುಂಬಯಿಗಳಲ್ಲಿ ನಡೆಯುವ ಆಧುನಿಕ ಪದ್ಧತಿಯ ಸೆಮಿನಾರ್‌ಗಳಿಗೆ ಹೋಗುವರು. ತಿರುಪತಿ ಕೇಂದ್ರೀಯ ವಿದ್ಯಾಪೀಠದವರು ಇವರಿಂದ ಪೂರ್ವ ಮೀಮಾಂಸಾಶಾಸ್ತ್ರದ ಕೇಸೆಟ್‌ಗಳನ್ನು

ಮಾಡಿಸಿರುವರು. ಆಂಧ್ರ, ಕರ್ನಾಟಕ, ಮದ್ರಾಸ್, ಕೇರಳ ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷ ಉಪನ್ಯಾಸಗಳನ್ನು ಕೊಟ್ಟಿರುವರು.

ಇವರು ಅಣುಭಾಷ್ಯ ತತ್ವಮಂಜರೀ, ವಿಷ್ಣುತತ್ವನಿರ್ಣಯ, ಗೀತಾ-ತಾತ್ಪರ್ಯ, ಸದಾಚಾರ ಸ್ಮೃತಿಗಳ ಕನ್ನಡ ಅನುವಾದ ಮಾಡಿರುವರು. ಸರ್ವಮೂಲಕನ್ನಡ ಅನುವಾದದ ಸಂಪಾದಕ ಮಂಡಳಿಯ ಕಾರ್ಯಾಧ್ಯಕ್ಷರಾಗಿರುವರು. ಯುಕ್ತಿಮಲ್ಲಿಕಾ ಉಪನಿಷತ್ತುಗಳು ಮತ್ತು ಗೀತೆಗಳ ಸಾರವನ್ನು ಇಂಗ್ಲಿಷ್‌ನಲ್ಲಿ ಬರೆದಿರುವರು. ದಶೋಪನಿಷತ್ತುಗಳ ಇಂಗ್ಲಿಷ್ ಅನುವಾದ ಮಾಡುತ್ತಿದ್ದು ಈಗ ಆರು ಮುಗಿದಿವೆ. ಶ್ಲೋಕ ತಾತ್ಪರ್ಯಚಂದ್ರಿಕಾ ಮತ್ತು ಉಪನಿಷದ್ ದರ್ಶನ ಇವು ಇನ್ನೆರಡು ಸಾರಸಂಗ್ರಹ ಗ್ರಂಥಗಳು.

ದ್ವೈತವೇದಾಂತದ ಕೈಬರಹದ ಗ್ರಂಥಗಳನ್ನು ಸಂಗ್ರಹಿಸಿ ಶ್ರೀವಿದ್ಯಾಧೀಶ ಹಸ್ತಲಿಖಿತ ಗ್ರಂಥಾಲಯವನ್ನು ತಮ್ಮ ಮನೆಯಲ್ಲಿಯೇ ಮಾಡಿರುವರು. ಈ ಕೈಬರಹದ ಗ್ರಂಥಗಳ ಒಂದು ಕ್ಯಾಟಲಾಗನ್ನು ಪ್ರಕಟಿಸಿರುವರು. 'ಭಾರತ ಮತ್ತು ಇತರ ದೇಶಗಳಲ್ಲಿಯ ಕೈಬರಹದ ಗ್ರಂಥಗಳ ಸಂಪತ್ತು' ಎಂಬ ಒಂದು ಗ್ರಂಥವನ್ನೂ ಬರೆದಿರುವರು. ಈಗ ನ್ಯಾಯಾಮೃತ ಕಂಟಕೋದ್ಧಾರದ ಪ್ರಕಟಣೆಯನ್ನೂ ಕೈಗೆತ್ತಿಕೊಂಡಿರುವರು.

ವೇದಾಂತ ಮೀಮಾಂಸಾಶಾಸ್ತ್ರಗಳಿಗೆ ಸಂಬಂಧಿಸಿದ ವಿಷಯಗಳ ಮೇಲೆ ಅನೇಕ ಸಂಶೋಧನಾತ್ಮಕ ಲೇಖನಗಳನ್ನು ಬರೆದಿರುವರು. ವಾಷಿಂಗ್ಟನ್ ವಿಶ್ವವಿದ್ಯಾನಿಲಯದ ಡಾ. ಪಾಟರರು ಪ್ರಕಟಿಸುತ್ತಿರುವ ಭಾರತೀಯ ತತ್ವಶಾಸ್ತ್ರ ವಿಶ್ವಕೋಶದ ಪೂರ್ವ ಮೀಮಾಂಸಾ ಸಂಪುಟಕ್ಕೆ ಸಂಪಾದಕರಾಗಿರುವರು.

ಹೀಗೆ ವೇದಾಂತ ಮೀಮಾಂಸಾಶಾಸ್ತ್ರಗಳಲ್ಲದೇ ಸಾಹಿತ್ಯದಲ್ಲಿಯೂ ಅಭಿರುಚಿಯುಳ್ಳವರಾಗಿದ್ದು 'ಕಾವ್ಯಾಂಜಲಿ' ಎಂಬ ಕಾವ್ಯಸಂಗ್ರಹವನ್ನೂ, ಕೆಲವು ಸಂಸ್ಕೃತ ರೇಡಿಯೋ ನಾಟಕಗಳನ್ನೂ ಪ್ರಕಟಿಸಿರುವರು. 'ಕಾವ್ಯಶಾಸ್ತ್ರ ವಿನೋದ' 'ಸಂಸ್ಕೃತ ಕವಯಿತ್ರಿಯರು' ಎಂಬ ವಿಮರ್ಶಾತ್ಮಕ ಪುಸ್ತಕಗಳನ್ನು ಬರೆದಿರುವರು ಪಾಂಡುರಂಗಿ ಮನೆತನದ ವಿವರವಾದ ವಂಶಾವಳಿಯನ್ನು ಸಿದ್ಧಪಡಿಸಿರುವರು.

ಇವರಿಗೆ ಮಂತ್ರಾಲಯದ ಸ್ವಾಮಿಗಳು 'ಮೀಮಾಂಸಾಭೂಷಣ' ಎಂದೂ, ಪೇಜಾವರ ಸ್ವಾಮಿಗಳು 'ಶಾಸ್ತ್ರನಿಧಿ' ಎಂದೂ ಭಂಡಾರಕೇರೀ ಸ್ವಾಮಿಗಳವರು

'ಪ್ರವಚನಪಟು' ಎಂದೂ, ನಂಜನಗೂಡು ಪರಿಮಳ ಸಂಸ್ಥೆಯವರು 'ದರ್ಶನರತ್ನ' ಎಂದೂ ಪದವಿ ಕೊಟ್ಟಿರುವರು. ಶ್ರೀ ಪೇಜಾವರ ಸ್ವಾಮಿಗಳು ತಮ್ಮ ಪರ್ಯಾಯ ಪಟ್ಟಾಭಿಷೇಕ ಕಾಲದ ಪ್ರಶಸ್ತಿಯನ್ನೂ ಕೊಟ್ಟಿರುವರು.

ಸಂಸ್ಕೃತಕ್ಷೇತ್ರ ಮಾತ್ರವಲ್ಲದೆ ಸಂಶೋಧನೆಯ ವ್ಯಾಪಕಕ್ಷೇತ್ರದಲ್ಲಿಯೂ ಇವರಿಗೆ ಸಂಪರ್ಕವಿರುವದು. ೧೯೮೧ ರಿಂದ ಬೆಂಗಳೂರಿನ ಮಿಥಿಕ್ ಸೊಸಾಯಿಟಿಯ ಅಧ್ಯಕ್ಷರಾಗಿರುವರು. ಭಾರತೀಯ ವಿದ್ಯಾಭವನ, ನೆಹರೂ ಸೆಂಟರ್, ವರ್ಲ್ಡ ಕಲ್ಚರ ಇನ್ಸ್ಟಿಟ್ಯೂಟ್, ಗೋಖಲೆ ಇನ್ಸ್ಟಿಟ್ಯೂಟ್ ಇತ್ಯಾದಿ ಸಂಸ್ಥೆಗಳ ಸಂಪರ್ಕ ಪಡೆದಿರುವರು.

ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಸಂಸ್ಕೃತ ಸುಭಾಷಿತಗಳನ್ನು ಆಧರಿಸಿ ಸುಮಾರು ೧೨೦೦ ವಿಚಾರಜ್ಯೋತಿ ಎಂಬ ಚುಟುಕುಗಳನ್ನು ಬರೆದಿರುವರು.

ಇವರ ಮಕ್ಕಳೂ ಆಧುನಿಕ ವಿದ್ಯಾಕ್ಷೇತ್ರದಲ್ಲಿ ಪರಿಣತರಾಗಿದ್ದು ಪ್ರಾಚೀನ ಸಂಸ್ಕೃತಿಯ ಜ್ಞಾನ ಮತ್ತು ಅಭಿಮಾನವುಳ್ಳವರಾಗಿರುವರು. ಇವರಲ್ಲಿ 'ಆನಂದ' ಎಂಬವನು ಮಾನಸಶಾಸ್ತ್ರದ ಡಾಕ್ಟರನಾಗಿದ್ದು ಅಮೇರಿಕೆಯಲ್ಲಿ ಇರುವನು. ಅಮೃತ, ಅಚ್ಯುತರು ಇಲ್ಲಿಯೇ ಇರುವರು.

# ಲೌಕಿಕಜೀವನದಲ್ಲಿ ಯಶಸ್ವಿಯಾದ
# ಪಾಂಡುರಂಗಿ ಮನೆತನದವರು

**ಬೆಂಗಳೂರಿನ ಪಿ. ಕೋದಂಡರಾಯರು (೧೮೮೯–೧೯೮೫)**

ಇವರು ಮೂಲತಃ ವಿಶಾಖಪಟ್ಟಣದವರು. ಇವರ ತಂದೆಯವರು ಹಳೆಯ ಮದ್ರಾಸ ಪ್ರಾಂತದಲ್ಲಿ ಜಿಲ್ಲಾ ಕಲೆಕ್ಟರರಾಗಿದ್ದರು. ಅನೇಕವರ್ಷ ಮಂಗಳೂರು ಜಿಲ್ಲೆಯ ಕಲೆಕ್ಟರರಾಗಿದ್ದರು. ಬೆಂಗಳೂರು ಮಂಡು ಭಾಗದ ಕಲೆಕ್ಟರರೂ ಆಗಿದ್ದರು. ಪಾಂಡುರಂಗಿ ಮನೆತನದವರಲ್ಲಿ ಕೆಲವರು ವಿಶಾಖಪಟ್ಟಣದ ಕಡೆಗೆ ಯಾವಾಗ ಹೋದರು ಎಂಬುದು ಖಚಿತವಾಗಿ ತಿಳಿದುಬರುವದಿಲ್ಲ. ಆನಂದಭಟ್ಟರ ಹಿರಿಯ ಮಕ್ಕಳಾದ ಶ್ರೀನಿವಾಸಾಚಾರ್ಯರು ಪುಣತಾಂಬೆಯ ಮೇಲೆ ಮುಸಲ್ಮಾನರ ದಾಳಿಯಾದಾಗ ಅವರ ತಮ್ಮ ನರಸಿಂಹಾಚಾರ್ಯರೊಡನೆ (ವಿದ್ಯಾಧೀಶರ ಪೂರ್ವಾಶ್ರಮದ ಹೆಸರು) ಪಂಢರಪುರ ಶೂರ್ಪಾಲಿಗಳ ಕಡೆಗೆ ಹೋಗದೆ ಸಪ್ತ ಗೋದಾವರೀ ಪ್ರದೇಶಕ್ಕೆ ಹೋದರು ಎಂಬ ಪರಂಪರೆಯಿದೆ. ಈ ಶ್ರೀನಿವಾಸಾ-ಚಾರ್ಯರ ಸಂತತಿಯವರೇ ವಿಜಯನಗರ ವಿಶಾಖಪಟ್ಟಣ ರಾಜಮಹೇಂದ್ರಿ ಹೈದರಾಬಾದಗಳಲ್ಲಿ ಇರುವ ಪಾಂಡುರಂಗಿಯವರು. ಇವರೆಲ್ಲ ತೆಲಗು ಮಾತ ನಾಡುವರು. ಕನ್ನಡ ಸಾಧಾರಣ ತಿಳಿಯುವದು. ಆದರೆ ಕುಂಭಕೋಣ ತಂಜಾವೂರು ಪಾಂಡುರಂಗಿಗಳಂತೆ ಮರಾಠೀ ಮಾತನಾಡುವದಿಲ್ಲ. ಗುಂಟೂರು ಜಿಲ್ಲೆಗೆ ಸುಮಾರು ಒಂಪುನೂರು ದೇಶಸ್ಥರ ಕುಟುಂಬಗಳು ಈಗ ಇನ್ನೂರು ವರ್ಷಗಳ ಹಿಂದೆ ಮರಾಠವಾಡಾದಲ್ಲಿಯ ಧರ್ಮಪುರಿಯ ಕಡೆಯಿಂದ ಹೋದರು ಎಂಬ ಪರಂಪರೆಯಿದೆ. ಈ ಗುಂಪಿನಲ್ಲಿಯೂ ಪಾಂಡುರಂಗಿ ಕುಟುಂಬಗಳಿದ್ದವು.

ಪಾಂಡುರಂಗಿ ಕೋದಂಡರಾಯರು ೧೮೮೯ ರಲ್ಲಿ ವಿಶಾಖಪಟ್ಟಣದಲ್ಲಿ ಜನಿಸಿದರು. ಮದ್ರಾಸ ವಿಶ್ವವಿದ್ಯಾನಿಲಯದಿಂದ ಎಮ್. ಎ. ಪದವಿಯನ್ನು ೧೯೧೭ ರಲ್ಲಿ ಪಡೆದರು. ಬೆಂಗಳೂರು ಸೆಂಟ್ರಲ್ ಕಾಲೇಜದಲ್ಲಿ ೧೯೩೧ ರವರೆಗೆ ಬಾಟನೀ ಲೆಕ್ಚರರಾಗಿದ್ದರು. ಮುಂದೆ ಸರ್ವಂಟ್ಸ ಆಫ್ ಇಂಡಿಯಾ ಸೊಸಾಯಿಟಿ ಯನ್ನು ಸೇರಿ ಗೋಪಾಲ ಕೃಷ್ಣ ಗೋಖಲೆ ಮತ್ತು ವಿ. ಎಸ್. ಶ್ರೀನಿವಾಸಶಾಸ್ತ್ರಿ

ಗಳೊಡನೆ ಕಾರ್ಯಮಾಡತೊಡಗಿದರು. ಇಂಗ್ಲೆಂಡಿನಲ್ಲಿ ಆದ ರೌಂಡ ಟೇಬಲ್ ಕಾನ್ಫರನ್ಸಿಗೂ, ದಕ್ಷಿಣ ಆಫ್ರಿಕಾದ ಕೇಪ್‌ಟೌನದಲ್ಲಿ ಆದ ಕಾನ್ಫರನ್ಸಿಗೂ ಶಾಸ್ತ್ರಿಗಳೊಡನೆ ಹೋಗಿದ್ದರು. ೧೯೩೪–೩೫ ರಲ್ಲಿ ಯೇಲ ವಿಶ್ವವಿದ್ಯಾನಿಲಯದಲ್ಲಿ ಮಾನವಜನಾಂಗಗಳ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾಗಿ ಉಪನ್ಯಾಸಗಳನ್ನು ಮಾಡಿದರು. ಅಮೆರಿಕಾ ಕೆನಡಾ ಬ್ರಿಟನ್ ಜಪಾನ್ ಚೀನ ಸಯಾಮ ಇಂಡೋಚಾಯನಾ ಸಿಲೋನಗಳಲ್ಲಿ ಉಪನ್ಯಾಸಗಳನ್ನು ಮಾಡಿದರು. ಆಗಿನ ಮಧ್ಯಪ್ರದೇಶ ಸರಕಾರದಿಂದ ಆಹ್ವಾನಿತರಾಗಿ ನಾಗಪುರ ವಿಶ್ವವಿದ್ಯಾನಿಲಯದ ಆಡಳಿತಮಂಡಳಿಯ ಸದಸ್ಯರಾಗಿ ಕಾರ್ಯ ಮಾಡಿದರು. ದಿಲ್ಲಿಯಲ್ಲಿಯ ಜಾಗತಿಕ ವ್ಯವಹಾರಗಳ ಸಂಸ್ಥೆಗೆ ಉಪಾಧ್ಯಕ್ಷರಾಗಿದ್ದರು. ಮೈಸೂರು ಉತ್ಕಲ ಗುಜರಾಥ ಬಡೋದಾ ವಿಶ್ವವಿದ್ಯಾನಿಲಯಗಳಲ್ಲಿ ಉಪನ್ಯಾಸ ಮಾಡಿದರು. ೧೯೩೭ ರಲ್ಲಿ ಪೋಲಂಡದ ಮೇರೀ ಲುಯಿಸ್ ಕಾಂಬೆಲ್ ಎಂಬ ಮಹಿಳೆಯನ್ನು ಮದುವೆಯಾದರು. ಇವರ 'ಈಸ್ಟ ವರ್ಸಸ್ ವೆಸ್ಟ' ಎಂಬ ಗ್ರಂಥವನ್ನು ಅಲೆನ್ ಅಂಡ ಉನ್ವಿನ್ ಕಂಪನಿಯವರು ೧೯೩೯ ಪ್ರಕಟಿಸಿದರು. ಇದರಲ್ಲಿ ಇವರು ಪೌರ್ವಾತ್ಯ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳಲ್ಲಿಯ ವಿರೋಧವನ್ನೇ ಹುಡುಕುತ್ತ ಹೋಗುವದಕ್ಕಿಂತ ಇಬ್ಬರಿಗೂ ಗ್ರಾಹ್ಯವಾದ ಗುಣಗಳನ್ನು ಹುಡುಕಬೇಕು ಎಂದು ಪ್ರತಿಪಾದಿಸಿದರು.

ಇವರು ನಮ್ಮ ದೇಶದಲ್ಲಿಯ ಪಕ್ವಬುದ್ಧಿಯ ರಾಜಕೀಯ ಮುತ್ಸದ್ದಿಗಳೆಂದು ಪರಿಗಣಿಸಲ್ಪಡುತ್ತಿದ್ದರು. ಪಂಡಿತ ನೆಹರೂ ಅವರು ಇವರ ಸಲಹೆಗಳನ್ನು ಆಗಾಗ ಕೇಳುತ್ತಿದ್ದರು. ಭಾರತದಿಂದ ಇಂಗ್ಲಿಷ್ ಭಾಷೆಯನ್ನು ಓಡಿಸಬಾರದು ಎಂದು ಇವರು ಬಲವಾಗಿ ಪ್ರತಿಪಾದಿಸುತ್ತಿದ್ದರು. ೧೯೫೧ ರಿಂದ ಇವರು ಬೆಂಗಳೂರಿನಲ್ಲಿಯೇ ನೆಲೆಸಿದ್ದರು.

## ವಿಶಾಖಪಟ್ಟಣದ ಪಿ. ನರಸಿಂಗರಾಯರು (೧೮೯೨–೧೯೬೦)

ಇವರು ಪಿ. ಕೋದಂಡರಾಯರ ತಮ್ಮಂದಿರು. ವಿಶಾಖಪಟ್ಟಣದಲ್ಲಿಯೇ ವಕೀಲರಾಗಿದ್ದರು. ಅಲ್ಲಿಯ ಧಾರ್ಮಿಕ ಸಾಂಸ್ಕೃತಿಕ ಕಾರ್ಯಗಳಿಗೆಲ್ಲ ಪ್ರೋತ್ಸಾಹಕರಾಗಿದ್ದರು. ತಾವು ಆನಂದಭಟ್ಟಾರಕರ ಸಂತತಿಯವರೆಂದೂ ಪಾಂಡುರಂಗಿಯವರೆಂದೂ ಹೇಳುವ ವಂಶಾವಳಿ ವಿವರಗಳನ್ನು ತಿಳಿದವರಾಗಿದ್ದರು. ಇವರ ಇಬ್ಬರು

ಮಕ್ಕಳೂ ವಿಶಾಖಪಟ್ಟಣದ ಶಿಪಿಂಗ್ ಕಾರ್ಪೋರೇಶನ್‌ದಲ್ಲಿ ಉನ್ನತ ಹುದ್ದೆಯಲ್ಲಿದ್ದು ಧಾರ್ಮಿಕರಾಗಿರುವರು.

## ಕುಂಭಕೋಣದ ಪಿ. ರಾಮಚಂದ್ರರಾಯರು (೧೮೮೦–೧೯೫೦)

ಇವರು ಗಡ್ಡದ ಶ್ರೀನಿವಾಸಾಚಾರ್ಯರ ಮಕ್ಕಳಾದ ಶ್ರೀ ಸತ್ಯವಿಜಯರ ಪೂರ್ವಾಶ್ರಮದ ಸಂತತಿಗೆ ಸೇರಿದವರು. ಮನ್ನಾರಿ–ಕುಟ್ಟಾಲಂ ಪಾಂಡುರಂಗಿ ಗುಂಪಿಗೆ ಸೇರಿದವರು. ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಸಂಸ್ಕೃತ ಎಮ್.ಎ. ಮಾಡಿ ಕುಂಭಕೋಣದ ಸರಕಾರೀ ಕಾಲೇಜದಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದರು. ಮುಂದೆ ಅದೇ ಕಾಲೇಜದ ಪ್ರಿನ್ಸಿಪಾಲರಾಗಿ ನಿವೃತ್ತರಾದರು. ಪಿ. ಭೀಮನ್ ಪಿ. ಆರ್. ರಾಘವೇಂದ್ರ ಇವರ ಮಕ್ಕಳು.

## ಲಖನೋದಲ್ಲಿರುವ ಪಿ. ಭೀಮನ್ (ಈಗ ವಿದ್ಯಮಾನರು)

ಇವರು ಕುಂಭಕೋಣದಲ್ಲಿದ್ದ ಸಂಸ್ಕೃತ ಪ್ರೊಫೆಸರ್ ಪಿ. ರಾಮಚಂದ್ರ ರಾಯರ ಹಿರಿಯ ಮಕ್ಕಳು. ಐ.ಎ.ಎಸ್. ಪರೀಕ್ಷೆಮಾಡಿ ಉನ್ನತ ಹುದ್ದೆಯಲ್ಲಿ ಇರುವರು. ಅನೇಕ ವರ್ಷ ಉತ್ತರ ಪ್ರದೇಶದಲ್ಲಿಯ ಗುಡ್ಡಗಾಡು ಜಿಲ್ಲೆಗಳ ಕಲೆಕ್ಟರರಾಗಿದ್ದರು. ಈಗ ಉತ್ತರಪ್ರದೇಶ ಸರಕಾರದ ಮುಖ್ಯ ಕಾರ್ಯದರ್ಶಿಗಳಾಗಿರುವರು. ಗಡ್ಡದ ಶ್ರೀನಿವಾಸಾಚಾರ್ಯರು ತಮ್ಮ ಪೂಜಾಕಾಲದಲ್ಲಿ ಇಡುತ್ತಿದ್ದ ಆರು ಫೂಟು ಎತ್ತರವಾದ ದೀಪದ ಕಂಬವು ಇವರಲ್ಲಿತ್ತು. ಅದನ್ನು ಇವರು ದಿಲ್ಲಿಯ ಕೃಷ್ಣಮಂದಿರಕ್ಕೆ ಕೊಟ್ಟಿರುವರು. ಮದ್ರಾಸದಲ್ಲಿರುವ ಪಿ. ಆರ್. ರಾಘವೇಂದ್ರರು ಇವರ ತಮ್ಮಂದಿರು.

ಈ ಮಹನೀಯರಲ್ಲದೆ ಈ ತಲೆಮಾರಿನಲ್ಲಿ ಅನೇಕ ಪಾಂಡುರಂಗಿಗಳು ಲೌಕಿಕ ಜೀವನದಲ್ಲಿ ಮುಂದೆ ಬಂದಿರುವರು. ಇವರಲ್ಲಿ ಲಂಡನ್‌ದಲ್ಲಿ ಡಾಕ್ಟರ ಆಗಿರುವ ವಾಸುದೇವ ಪಾಂಡುರಂಗಿಯವರು ತುಮ್ಮಿನಕಟ್ಟಿ ರಾಮಾಚಾರ್ಯರ ಮಕ್ಕಳು. ಅವರ ಅಣ್ಣ ಪ್ರೊ. ಎಚ್. ಆರ್. ಪಾಡುರಂಗಿಯವರು ಮುಂಬಯಿಯಲ್ಲಿ ಇರುವರು. ಧಾರವಾಡದಲ್ಲಿರುವ ಡಾ. ಆನಂದ ಪಾಂಡುರಂಗಿಯವರು ಸವಣೂರಿನ ವಕೀಲ ರಂಗಾಚಾರ್ಯರ ಮೊಮ್ಮಕ್ಕಳು ಮತ್ತು ಸಿಗ್ಗಾಂವಿಯಲ್ಲಿ ಅನೇಕ ವರ್ಷ ತಹಶೀಲದಾರರಾಗಿದ್ದ ಕೆ. ಆರ್. ಪಾಂಡುರಂಗಿಯವರ ಮಕ್ಕಳು.

ಪಾಂಡುರಂಗಿ ಗುರುರಾಜಾಚಾರ್ಯರ ಮಕ್ಕಳಾದ ಡಾ. ಸೇತುರಾಮ ಮತ್ತು ಕೆ. ಟಿ. ಪಾಂಡುರಂಗಿಯವರ ಮಗ ಡಾ. ಆನಂದ ಇವರಿಬ್ಬರೂ ಅಮೇರಿಕೆಯಲ್ಲಿರುವರು. ಅಮೃತ ಪಾಂಡುರಂಗಿ ಮದ್ರಾಸದಲ್ಲಿ ಫರ್ಗ್ಯುಸನ್ ಕಂಪನಿಯಲ್ಲಿ ಅಸಿಸ್ಟಂಟ್ ಡೈರೆಕ್ಟರರಾಗಿರುವರು. ತುಮ್ಮಿನಕಟ್ಟೆ ಪಾಂಡುರಂಗಿ ರಾಘವೇಂದ್ರಾಚಾರ್ಯರ ಮಗ ಸತ್ಯಬೋಧರು ಬೆಂಗಳೂರಿನಲ್ಲಿ ರಿಸರ್ವ ಬ್ಯಾಂಕಿನಲ್ಲಿ ಇರುವರು. ಸಿಂಡಿಕೇಟ ಬ್ಯಾಂಕಿನಲ್ಲಿ ಕೆಲಸಮಾಡುವ ಪಾಂಡುರಂಗಿ ನರಸಿಂಹಾಚಾರ್ಯರು (ಹುಬ್ಬಳ್ಳಿ ಪಾಂಡುರಂಗಿ ಗುರುರಾಜಾಚಾರ್ಯರ ತಮ್ಮಂದಿರು) ತಮ್ಮ ಇಬ್ಬರು ಮಕ್ಕಳನ್ನು ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಶಾಸ್ತ್ರ ವ್ಯಾಸಂಗಕ್ಕೆ ಸೇರಿಸಿರುವರು. ಶ್ರೀ ಸತ್ಯಪ್ರಜ್ಞರ ಪೂರ್ವಾಶ್ರಮದ ಮಕ್ಕಳಾದ ಆರ್. ಜೆ. ಪಾಂಡುರಂಗಿಯವರು ಕುಮಟಾ ಕಾಲೇಜದಲ್ಲಿ ತತ್ವಜ್ಞಾನದ ಪ್ರಾಧ್ಯಾಪಕರಾಗಿರುವರು.

ಇವರೆಲ್ಲರೂ ಧಾರ್ಮಿಕ ಬುದ್ಧಿಯುಳ್ಳವರಾಗಿದ್ದು ಮನೆತನದ ಪರಂಪರೆಗಳಾದ ಸದಾಚಾರ ಪ್ರಾಮಾಣಿಕತೆ ಔದಾರ್ಯ ಮತ್ತು ಯಾವದಾದರೊಂದು ಜ್ಞಾನಕ್ಷೇತ್ರದಲ್ಲಿ ವಿದ್ವತ್ತನ್ನು ಉಳಿಸಿಕೊಂಡು ಬರುವಂತೆ ಹರಿವಾಯು ಗುರುಗಳು ಆಶೀರ್ವದಿಸಲಿ ಎಂದು ಆಶಿಸುವೆವು.

# ಪಾಂಡುರಂಗಿ ಮನೆತನದವರು ಬರೆದ ಗ್ರಂಥಗಳು

## 1. ಆನಂದಭಟ್ಟಾರಕರು

೧. **ನ್ಯಾಯಾಮೃತ ಕಂಟಕೋದ್ಧಾರ**—ಈ ಗ್ರಂಥವು ಶ್ರೀವ್ಯಾಸ-ರಾಜರ ನ್ಯಾಯಾಮೃತದ ವ್ಯಾಖ್ಯಾನವು. ಮಧುಸೂದನ ಸರಸ್ವತಿಯುರು ಬರೆದ ಅದ್ವೈತಸಿದ್ಧಿಯ ಖಂಡನ ರೂಪವಾದುದು. ಸುಮಾರು ೮೦೦ ಪತ್ರಗಳ ವಿಸ್ತಾರವಾದ ಗ್ರಂಥವು. ಕಲಕತ್ತಾ ವಿಶ್ವವಿದ್ಯಾನಿಲಯದ ಸಂಸ್ಕೃತ ಗ್ರಂಥಮಾಲೆಯಲ್ಲಿ ೯ನೆಯ ಗ್ರಂಥವಾಗಿ ೧೯೩೪ ರಲ್ಲಿ ಇದರಲ್ಲಿಯ ಪಂಚಮಿಥ್ಯಾತ್ವನಿರಾಸಭಾಗವು ಮಾತ್ರ ಪಂಡಿತ ಅನಂತಕೃಷ್ಣಶಾಸ್ತ್ರಿಗಳಿಂದ ಸಂಪಾದಿತವಾಗಿ ಮುದ್ರಿತವಾಗಿದೆ. ಇದೇ ಭಾಗ ೧೯೮೫ ರಲ್ಲಿ ಪುನರ್ಮುದ್ರಿತವಾಗಿದೆ. ಇದರ ಹಸ್ತಲಿಖಿತಗ್ರಂಥಗಳು ದೊರೆಯುವ ಸ್ಥಳಗಳು : 1. ಉ.ಮ.ಗ್ರ., 2. ಕೃ.ತ.ಪಾ., 3. ಗೌ.ಕೃ., 4. ಮೈ.ಪ್ರಾ.ಸ.ಮ. ಈ ಗ್ರಂಥವನ್ನು ಸಂಪೂರ್ಣವಾಗಿ ಮುದ್ರಿಸುವ ಕಾರ್ಯವನ್ನು ಈಗ ಆರಂಭಿಸಲಾಗಿದೆ.

## 2. ಶ್ರೀವಿದ್ಯಾಧೀಶರು (ಪಾಂಡುರಂಗಿ ನರಸಿಂಹಾಚಾರ್ಯರು)

೧. **ವಾಕ್ಯಾರ್ಥಚಂದ್ರಿಕಾ**—ಶ್ರೀಜಯತೀರ್ಥರ ಶ್ರೀಮನ್ನ್ಯಾಯಸುಧಾಗ್ರಂಥದ ಮೊದಲಿನ ಐದು ಅಧಿಕರಣಗಳಿಗೆ ಟಿಪ್ಪಣಿಯು. ಸುಮಾರು ೫೦೦ ಪತ್ರಗಳ ಗ್ರಂಥವು. ಧಾರವಾಡದ ಸವಣೂರು ಗೋವಿಂದರಾಯರು ೧೯೩೨ ರಲ್ಲಿ ಮುದ್ರಿಸಿ ಪ್ರಕಟಿಸಿರುವರು. ಶ್ರೀಮದುತ್ತರಾದಿಮಠದಿಂದ ೧೯೮೫ ರಲ್ಲಿ ಮತ್ತೆ ಪ್ರಕಟಿಸಲ್ಪಟ್ಟಿದೆ. ಹಸ್ತಲಿಖಿತಗಳು ದೊರೆಯುವ ಸ್ಥಳಗಳು : 1. ಉ.ಮ.ಗ್ರ., 2. ಕೃ.ತ.ಪಾ., 3. ಮೈ.ಪ್ರಾ.ಸ.ಮ. C. 2348 C. 2024 A. 348 A. 489 ಮ.ಗ.ಗ್ರ. D. 16947 R. 458 R. 1877.

೨. **ವಿಷ್ಣುತತ್ತ್ವನಿರ್ಣಯ ಟಿಪ್ಪಣೀ**—ಇದರ ಹಸ್ತಲಿಖಿತ ಪ್ರತಿಯು ಉಪಲಬ್ಧವಿಲ್ಲ

೩. **ಪ್ರಮಾಣಲಕ್ಷಣ ಟಿಪ್ಪಣೀ**— ,,

೪. **ಕಥಾಲಕ್ಷಣ ಟಿಪ್ಪಣೀ**— ,,

**೫. ಓಂಕಾರವಾದಾರ್ಥ**—ಪತ್ರರೂಪದಲ್ಲಿ ಬೆಳಗಾಂವಿಯಲ್ಲಿ ಮುದ್ರಿತ ವಾಗಿದೆ.

**ಹ.ಲಿ.**—1. ಉ.ಮ.ಗ್ರ., 2. ಕೃತ.ಪಾ., 3. ಮೈ.ಪ್ರಾ.ಸ.ಮ., C. 2128 C. 1289.

**೬. ಏಕಾದಶೀ ನಿರ್ಣಯ**

**೭. ಜನ್ಮಾಷ್ಟಮೀ ನಿರ್ಣಯ**

**೮. ತಿಥಿತ್ರಯ ನಿರ್ಣಯ (ದಿನತ್ರಯ ನಿರ್ಣಯ)**

**೯. ವಿಷ್ಣುಪಂಚಕ ನಿರ್ಣಯ**

೬ ರಿಂದ ೯ ರ ಹಸ್ತಲಿಖಿತಗಳು ಕೃ.ತ.ಪಾ. ಅವರಲ್ಲಿವೆ.

**೧೦. ತಲವಕಾರೋಪನಿಷತ್ ಖಂಡಾರ್ಥ** ಇವರ ಹಸ್ತಲಿಖಿತಗಳು ಉಪಲಬ್ಧವಿಲ್ಲ.

## 3. ಪಾಂಡುರಂಗಿ ಶ್ರೀನಿವಾಸಾಚಾರ್ಯರು

**೧. ತತ್ತ್ವಸುಬೋಧಿನೀ**—ತತ್ತ್ವಪ್ರಕಾಶಿಕಾ ಟಿಪ್ಪಣಿಯು. ಸುಮಾರು ೨೦೦ ಪತ್ರಗಳು.

**ಹ.ಲಿ.**—1. ಉ.ಮ.ಗ್ರ., 2. ಕೃ.ತ.ಪಾ., 3. ವಾ.ವಿ.ವಿ. 4. ಮ.ಗ.ಗ್ರ, R. 754.

## 4. ಪಾಂಡುರಂಗಿ ಕೇಶವಭಟ್ಟಾರಕರು (ಗುರುರಾಜರು)

**೧. ಶೇಷವಾಕ್ಯಾರ್ಥಚಂದ್ರಿಕಾ** — ಶ್ರೀಮನ್ನ್ಯಾಯಸುಧಾದ ಟಿಪ್ಪಣಿಯು ಆನಂದಮಯಾಧಿಕರಣದಿಂದ ಗ್ರಂಥಸಮಾಪ್ತಿಯವರೆಗೆ ಇರುವದು. ಸುಮಾರು ಒಂದುಸಾವಿರ ಪತ್ರಗಳು. ೧೯೩೨ ರಲ್ಲಿ ಧಾರವಾಡದಲ್ಲಿ ಸವಣೂರು ಗೋವಿಂದರಾಯರು ಮುದ್ರಿಸಿ ಪ್ರಕಟಿಸಿರುವರು. ಶ್ರೀಮದುತ್ತರಾದಿಮಠದಿಂದ ೧೯೬೫ ರಲ್ಲಿ ಮತ್ತೆ ಮುದ್ರಿಸಲ್ಪಟ್ಟಿದೆ.

**ಹ.ಲಿ.**—1. ಉ.ಮ.ಗ್ರ., 2. ಕೃ.ತ.ಪಾ., 3. ಮೈ.ಪ್ರಾ.ಸ.ಮ., C. 96, C. 338, C. 1876, C. 1878, C. 2183, A.546.

**೨. ಸುಧಾವಾಕ್ಯಾರ್ಥವಿನೋದ** — ಶ್ರೀಮನ್ನ್ಯಾಯಸುಧಾದ ಇನ್ನೊಂದು ಟಿಪ್ಪಣಿಯು. ಸುಮಾರು ೪೦೦ ಪತ್ರಗಳು.

**ಹ.ಲಿ.**—1. ಉ.ಮ.ಗ್ರ.

'ಸುಧಾವಾಕ್ಯಾರ್ಥಮಂಜರೀ' ಎಂಬ ಇನ್ನೂ ಒಂದು ಟಿಪ್ಪಣಿಯು ಇದ್ದಂತೆ ಸರಂಪರೆಯಿಂದ. ಅದರ ಹಸ್ತಪ್ರತಿಗಳು ಉಪಲಬ್ಧವಿಲ್ಲ. ಅದು ಈ ಮೇಲಿನ ಎರಡು ಸುಧಾ ಟಿಪ್ಪಣಿಗಳಿಗಿಂತ ಭಿನ್ನವೋ ಇವುಗಳಲ್ಲಿಯೇ ಒಂದರ ಇನ್ನೊಂದು ಹೆಸರೋ ತಿಳಿದುಬರುವದಿಲ್ಲ.

**೩. ತಾತ್ಪರ್ಯಚಂದ್ರಿಕಾ ಟಿಪ್ಪಣೀ**—ಶ್ರೀವ್ಯಾಸರಾಜರ ತಾತ್ಪರ್ಯ ಚಂದ್ರಿಕಾದ ವ್ಯಾಖ್ಯಾನವು. ಕುಂಭಕೋಣದಲ್ಲಿ 1913 ರಲ್ಲಿ ಟಿ. ಆರ್. ಕೃಷ್ಣಾಚಾರ್ಯರು ಪ್ರಕಟಿಸಿರುವರು. ಗುರ್ವೀ, ಲಘ್ವೀ ಎಂದು ಎರಡು ವಿಧ ವಾಗಿದೆ. ಗುರ್ವೀ ಎಂಬುದು ಮೊದಲಿನ ಆರು ಅಧಿಕರಣಗಳಿಗೆ ಮಾತ್ರ ಉಪಲಬ್ಧವಿದೆ.

**ಹ.ಲಿ.**—1. ಉ.ಮ.ಗ್ರ. 2. ಕೃ.ತ.ಪಾ. 3. ಮೈ.ಪ್ರಾ.ಸಂ.ಮ. A. 372, A. 269, C. 1002, A. 368.

**೪. ನ್ಯಾಯಾಮೃತ ಟಿಪ್ಪಣೀ**—ಕ್ರೋಡಪತ್ರರೂಪವಾದ ಕೆಲವು ಪತ್ರಗಳು ಮಾತ್ರ ಉಪಲಬ್ಧವಾಗಿವೆ.

**ಹ.ಲಿ.**—1. ಕೃ.ತ.ಪಾ.

**೫. ತತ್ವಪ್ರಕಾಶಿಕಾ ಟಿಪ್ಪಣೀ**—ಶ್ರೀಜಯತೀರ್ಥರ ತತ್ವಪ್ರಕಾಶಿಕಾದ ವ್ಯಾಖ್ಯಾನರೂಪವಾದುದು. ಕೆಲವು ಪತ್ರಗಳು ಮಾತ್ರ ದೊರೆಯುತ್ತವೆ.

**ಹ.ಲಿ.**—1. ಉ.ಮ.ಗ್ರ.

**೬. ಗೀತಾಭಾಷ್ಯಪ್ರಮೇಯದೀಪಿಕಾ ಟಿಪ್ಪಣೀ**—ಭಾಷ್ಯ ಮತ್ತು ಪ್ರಮೇಯದೀಪಿಕಾಗಳಲ್ಲಿಯ ಕೆಲವು ಪ್ರಯೋಗಗಳ ವ್ಯಾಕರಣಾಂಶವನ್ನು ಸಮರ್ಥಿಸುವ ಟಿಪ್ಪಣಿಯು. ಸುಮಾರು ೪೦ ಪತ್ರಗಳು.

**ಹ.ಲಿ.**—1. ಉ.ಮ.ಗ್ರ. 2. ಕೃ.ತ.ಪಾ.

**೭. ಯುಗ್ಮಾಪ್ಯಟಿಪ್ಪಣೀ**—ಯುಗ್ಮಾಪ್ಯಟೀಕಾದ ಟಿಪ್ಪಣಿಯು. ಇದರಲ್ಲಿ ವ್ಯಾಕರಣ ವಿಚಾರಗಳು ಬಹಳವಾಗಿವೆ. ಸುಮಾರು ಇನ್ನೂರು ಪತ್ರಗಳು.

**ಹ.ಲಿ.**—1. ಕೃ.ತ.ಪಾ., 2. ಮೈ.ಪ್ರಾ.ಸಂ.ಮ. C. 825. (ಈ ಹಸ್ತಲಿಖಿತವನ್ನು ವಿ. ಪ್ರಭಂಜನರು ಕೊಟ್ಟಿರುವರು).

**೮. ತತ್ವಸಂಖ್ಯಾನ ಟಿಪ್ಪಣೀ**—ವರಖೇಡಿ ಭೀಮಸೇನಾಚಾರ್ಯರು 1982 ರಲ್ಲಿ ಮುದ್ರಿಸಿರುವರು.

**ಹ.ಲಿ.**—1. ಉ.ಮ.ಗ್ರ. 2. ಕೃ.ತ.ಪಾ. 3. ಮೈ.ಪ್ರಾ.ಸಂ.ಮ. A. 401, 4334.

**೯. ತತ್ವೋದ್ಯೋತ ಟಿಪ್ಪಣೀ** — 1971ರಲ್ಲಿ ಶ್ರೀಮನ್ಮಧ್ವ-ರಾದ್ಧಾಂತ ಸಭೆಯಿಂದ ಪ್ರಕಟಿಸಲ್ಪಟ್ಟ ದಶಪ್ರಕರಣ ಸಂಪುಟಗಳಲ್ಲಿ ಪ್ರಕಟವಾಗಿದೆ.

**ಹ.ಲಿ.**—1. ಉ.ಮ.ಗ್ರ. 2. ಕೃ.ತ.ಪಾ. 3. ಮೈ.ಪ್ರಾ.ಸ.ಮ. A. 388, C. 1636, 3216, ಮ.ಗ.ಗ್ರ. R. 5845, R. 7520.

**೧೦. ವಿಷ್ಣುತತ್ವನಿರ್ಣಯ ಟಿಪ್ಪಣೀ**—1969 ರಲ್ಲಿ ಶ್ರೀಮನ್ಮಧ್ವ-ರಾದ್ಧಾಂತ ಸಭೆಯಿಂದ ಪ್ರಕಟಿಸಲ್ಪಟ್ಟ ದಶಪ್ರಕರಣ ಸಂಪುಟಗಳಲ್ಲಿ ಪ್ರಕಟವಾಗಿದೆ.

**ಹ.ಲಿ.**—1. ಉ.ಮ.ಗ್ರ. 2. ಕೃ.ತ.ಪಾ. 3. ಮೈ.ಪ್ರಾ.ಸಂ.ಮ. C. 2329, ಮ.ಗ.ಗ್ರ. R. 5890.

**೧೧. ಮಾಯಾವಾದಖಂಡನ ಟಿಪ್ಪಣೀ**—ಇದು ಇನ್ನೂ ಮುದ್ರಿತವಾಗಿಲ್ಲ. ಸುಮಾರು ೧೨ ಪತ್ರಗಳು.

**ಹ.ಲಿ.**—1. ಉ.ಮ.ಗ್ರ. 2. ಕೃ.ತ.ಪಾ. 3. ಮೈ.ಪ್ರಾ.ಸ.ಮ. C. 59.

**೧೨. ಮಿಥ್ಯಾತ್ವಾನುಮಾನಖಂಡನ ಟಿಪ್ಪಣೀ**—ಇದು ಇನ್ನೂ ಮುದ್ರಿತವಾಗಿಲ್ಲ.

**ಹ.ಲಿ.**—1. ಉ.ಮ.ಗ್ರ. 2. ಕೃ.ತ.ಪಾ. 3. ಮೈ.ಪ್ರಾ.ಸ.ಮ. C. 1004, C. 87. (ಇದರ ಹಸ್ತಪ್ರತಿಯನ್ನು ವಿ. ಪ್ರಭಂಜನರು ಕೊಟ್ಟಿರುವರು).

**೧೩. ಪ್ರಮಾಣಲಕ್ಷಣ ಟಿಪ್ಪಣೀ**—ಇದು ಇನ್ನೂ ಮುದ್ರಿತವಾಗಿಲ್ಲ.

**ಹ.ಲಿ.**—1. ಉ.ಮ.ಗ್ರ. 2. ಕೃ.ತ.ಪಾ. 3. ಪಾಂ. ಗು. 4. ವಾ. ಪ. 5. ಮೈ. ಪ್ರಾ.ಸಂ.ಮ. A. 362, C. 1651.

(ಇದರ ಹಸ್ತಪ್ರತಿಯನ್ನು ಪಾಂಡುರಂಗಿ ಗುರುರಾಜಾಚಾರ್ಯರು ಕೊಟ್ಟಿರುವರು. ಅದರ ಝುರಾಕ್ಸ ಮಾಡಲಾಗಿದೆ.)

**೧೪. ಕಥಾಲಕ್ಷಣ ಟಿಪ್ಪಣೀ**—ಇದು ಇನ್ನೂ ಮುದ್ರಿತವಾಗಿಲ್ಲ.

**ಹ.ಲಿ.**—1. ಕೃ.ತ.ಪಾ. 2. ಗೌ.ಕೃ. 3. ಮೈ.ಪ್ರಾ.ಸಂ.ಮ. C. 1472.

ತತ್ತ್ವವಿವೇಕ, ಉಪಾಧಿಖಂಡನ, ಕರ್ಮನಿರ್ಣಯಗಳಿಗೂ ಟಿಪ್ಪಣಿಗಳನ್ನು ಬರೆದಿರುವವೆಂಬ ಪರಂಪರೆಯಿದ್ದು ಅವುಗಳ ಹಸ್ತಪ್ರತಿಗಳು ಉಪಲಬ್ಧವಿಲ್ಲ.

**೧೫. ಮಾಯಾವಾದಖಂಡನೋಪನ್ಯಾಸ** — ಮಾಯಾವಾದಖಂಡನದ ಕ್ರೋಡಪತ್ರ. ಮುದ್ರಿತವಾಗಿಲ್ಲ. ಸುಮಾರು ೮ ಪತ್ರಗಳು.

**ಹ.ಲಿ.**—1. ಕೃ.ತ.ಪಾ.

**೧೬. ವಾದೀಂದ್ರಧಿಕ್ಕಾರಃ**—ರಂಗೋಜೀಭಟ್ಟ ಮತ್ತು ವಾದೀಂದ್ರನೊಡನೆ ಆದ ವಾಕ್ಯಾರ್ಥದ ವಿವರಗಳು. ಮುದ್ರಿತವಾಗಿಲ್ಲ. ಸುಮಾರು ೪ ಪತ್ರಗಳು.

**ಹ.ಲಿ.**—1. ಕೃ.ತ.ಪಾ.

**೧೭. ಭಾಗವತ ಟಿಪ್ಪಣೀ**—ಭಾಗವತಕ್ಕೆ ಕ್ರೋಡಪತ್ರರೂಪವಾದ ಒಂದು ಟಿಪ್ಪಣೀ ಬರೆದಿದ್ದಾರೆ ಎಂಬ ಪರಂಪರೆಯಿದೆ. ಆದರೆ ಅದರ ಹಸ್ತಪ್ರತಿಯು ಉಪಲಬ್ಧವಿಲ್ಲ.

**೧೮. ವಿಷ್ಣುಸ್ತುತಿ ಟೀಕಾ**—ಈ ಟೀಕಾಗ್ರಂಥವ ಕೊನೆಗೆ ಸಕಲ ವಿದ್ವಚ್ಚಕ್ರ ಚೂಡಾಮಣಿ ವಿರಚಿತ ಎಂದಿಷ್ಟು ಮಾತ್ರ ಬರೆದಿದೆ.

## 5. ಪಾಂಡುರಂಗಿ ನರಸಿಂಹಾಚಾರ್ಯರು (ರತ್ನಮಾಲಾ ನರಸಿಂಹಾಚಾರ್ಯರು)

೧. **ಶ್ರೀಮನ್ನ್ಯಾಯಸುಧಾ ವಾಕ್ಯಾರ್ಥರತ್ನಮಾಲಾ**— ಶ್ರೀಮನ್ನ್ಯಾಯಸುಧಾ ವಾಕ್ಯಾರ್ಥಚಂದ್ರಿಕಾ ಮತ್ತು ಶೇಷವಾಕ್ಯಾರ್ಥ ಚಂದ್ರಿಕಾಗಳ ಟಿಪ್ಪಣಿಯು ಸುಮಾರು ಒಂದೂವರೆ ಸಾವಿರ ಪತ್ರಗಳು. ಮುದ್ರಿತ ವಾಗಿಲ್ಲ.

**ಹ.ಲಿ.**—1. ಉ.ಮ.ಗ್ರ. 2. ಕೃ.ತ.ಪಾ. 3. ವ್ಯೆ.ಪ್ರಾ.ಸ.ಮ. C. 2207, C. 398. 4. ಗೌ.ಕೃ.

## 6. ಪಾಂಡುರಂಗಿ ರಾಮಕೃಷ್ಣ

೧. **ಶ್ರುತ್ಯರ್ಥಸಂಗ್ರಹ** — ಭಾಷ್ಯದಲ್ಲಿ ಉದಹರಿಸಿದ ಶ್ರುತಿಗಳ ವ್ಯಾಖ್ಯಾನ. ಮುದ್ರಿತವಾಗಿಲ್ಲ. ಸುಮಾರು ೨೦ ಪತ್ರಗಳು.

**ಹ.ಲಿ.**—1. ಕೃ.ತ.ಪಾ.

ಇವರು ತಾವು ಕೇಶವಾಚಾರ್ಯರ ಶಿಷ್ಯರು ಎಂದು ಹೇಳಿರುವರು. ಆದ್ದರಿಂದ ಅವರಲ್ಲಿ ಸಾಕ್ಷಾತ್ ಓದಿದವರೂ, ಸಮಕಾಲೀನರೂ ಇರುವಂತೆ ಕಾಣುತ್ತದೆ.

## 7. ಪಾಂಡುರಂಗಿ ಶ್ರೀನಿವಾಸಾಚಾರ್ಯರು

೧. **ಪ್ರಮಾಣಮಂಜರೀ**—ಪ್ರಮಾಣ ಪದ್ಧತಿಯ ಸಂಗ್ರಹರೂಪ ವಾಗಿದೆ. ಮುದ್ರಿತವಾಗಿಲ್ಲ.

**ಹ.ಲಿ.**—1. ಕೃ.ತ.ಪಾ.

(ಈ ಶ್ರೀನಿವಾಸಾಚಾರ್ಯರು ಮಾಸೂರು ಬಾಳಯ್ಯಾಚಾರ್ಯರ ಮಕ್ಕಳು ಮತ್ತು ತಿರುಪತಿ ಹುಚ್ಚಾಚಾರ್ಯರ ತಂದೆಯವರು).

## 8. ಪಾಂಡುರಂಗಿ ಮಾಧವಾಚಾರ್ಯ ಸುತ ಕೇಶವಾರ್ಯ

೧. **ವಿರೋಧೋದ್ಧಾರ**—ಶ್ರೀಮಧ್ವಾಚಾರ್ಯರು, ಜಯತೀರ್ಥರು, ವ್ಯಾಸರಾಜರು ಇವರ ಗ್ರಂಥಗಳಿಂದ ಸುಮಾರು ೧೩೫ ಸಂದರ್ಭಗಳನ್ನು ಆಯ್ದು ಕೊಂಡು ಆಪಾತತಃ ತೋರುವ ವಿರೋಧಗಳನ್ನು ಪರಿಹರಿಸಲಾಗಿದೆ.

ಈ ಗ್ರಂಥಕರ್ತರು ಶ್ರೀಸತ್ಯವಿಜಯರ ಪೂರ್ವಾಶ್ರಮದ ಸಂತತಿಗೆ ಸೇರಿದವರು. ದಕ್ಷಿಣದೇಶದ ಪಾಂಡುರಂಗಿಯವರು.

**ಹ.ಲಿ.**—1. ಅಡಿ.ಗ್ರ. TR. 911, ಪ್ರಿಂಟೆಡ್ ಕ್ಯಾಟಲಾಗಿನಲ್ಲಿ No. 748. 2. ಉ.ಮ.ಗ್ರ. ಹೊಸಪೇಟೆ. ಅಡಿಯಾರದಲ್ಲಿರುವ ಪ್ರತಿಯಿಂದ ಇವರು ಗ್ರಂಥಕರ್ತರೋ ಅಥವಾ ಕೇವಲ ಲೇಖಕರೋ ಎಂಬುದು ಸ್ಪಷ್ಟವಾಗುವದಿಲ್ಲ.

## 9. ಪಾಂಡುರಂಗಿ ಹುಚ್ಚಾಚಾರ್ಯರು (ತಿರುಪತಿ)

**ಸಂಸ್ಕೃತ ಗ್ರಂಥಗಳು :—**

**೧. ಬ್ರಹ್ಮಸೂತ್ರ ಪ್ರಮೇಯಮಾಲಾ**—ಬ್ರಹ್ಮಸೂತ್ರ ಭಾಷ್ಯದ ಸಾರಸಂಗ್ರಹ ರೂಪವಾದುದು. ಮೂವತ್ತೆರಡು ಶ್ಲೋಕಗಳಲ್ಲಿದೆ. ಮುದ್ರಿತವಾಗಿಲ್ಲ.

**ಹ.ಲಿ.**—1. ಕೃ.ತ.ಪಾ. 2. ಪಾಂ.ರಾ.

**೨. ದ್ವಾದಶಸ್ತೋತ್ರ ವ್ಯಾಖ್ಯಾನಮ್**—ಮುದ್ರಿತವಾಗಿಲ್ಲ.

**ಹ.ಲಿ.**—ಪಾಂ.ರಾ.

**೩. ಶ್ರೀನಿವಾಸಾಷ್ಟಕಮ್**—

ಗುರುಗೋವಿಂದ ವಿಠಲದಾಸರು ಬರೆದ ಹುಚ್ಚಾಚಾರ್ಯರ ಚರಿತ್ರೆಯ ಪರಿಶಿಷ್ಟದಲ್ಲಿ ಮುದ್ರಿತವಾಗಿದೆ.

**ಹ.ಲಿ.**—ಪಾಂ.ರಾ.

**೪. ಲಕ್ಷ್ಮೀಸ್ತೋತ್ರಮ್, ದುರ್ಗಾಸ್ತೋತ್ರಮ್**— "

**ಹ.ಲಿ.**—ಪಾಂ.ರಾ.

**೫. ಮುಖ್ಯಪ್ರಾಣಸ್ತವಃ**— "

**ಹ.ಲಿ.**—ಪಾಂ.ರಾ.

**೬. ಪುರಂದರಾರ್ಯಸ್ತೋತ್ರಮ್**— "

ವಸಂತತಿಲಕವೃತ್ತದಲ್ಲಿ ೪೦ ಸುಂದರ ಸಂಸ್ಕೃತ ಶ್ಲೋಕಗಳಿವೆ.

**ಹ.ಲಿ.**—ಪಾಂ.ರಾ.

**೭. ವೆಂಕಟೇಶ ವೇದವ್ಯಾಸ ರಾಮ ಪರಶುರಾಮ ಕರಾವಲಂಬನ ಸ್ತೋತ್ರಾಣಿ**—ಮುದ್ರಿತವಾಗಿಲ್ಲ.

**ಹ.ಲಿ.**—ಪಾಂ.ರಾ.

**೮. ಲಕ್ಷ್ಮೀಕರಾವಲಂಬನ ಸ್ತೋತ್ರಮ್,**
**ದುರ್ಗಾಕರಾವಲಂಬನ ಸ್ತೋತ್ರಮ್**—ಮುದ್ರಿತವಾಗಿಲ್ಲ.

**ಹ.ಲಿ.**—ಪಾಂ.ರಾ.

**೯. ಸಮೀರಕರಾವಲಂಬನ ಸ್ತೋತ್ರಮ್,**
**ನಾರದಕರಾವಲಂಬನ ಸ್ತೋತ್ರಮ್**—ಮುದ್ರಿತವಾಗಿಲ್ಲ.

**ಹ.ಲಿ.**—ಪಾಂ.ರಾ.

೧೦. ವಿದ್ಯಾಧೀಶಕರಾವಲಂಬನಸ್ತೋತ್ರಮ್—ಮುದ್ರಿತವಾಗಿಲ್ಲ.

**ಹ.ಲಿ.**—ಪಾಂ.ರಾ.

೧೧. **ಬಾಬಾಚಾರ್ಯಕರಾವಲಂಬನಸ್ತೋತ್ರಮ್**—
ಮುದ್ರಿತವಾಗಿಲ್ಲ.

**ಹ.ಲಿ.**—ಪಾಂ.ರಾ.

**ಕನ್ನಡ ಗ್ರಂಥಗಳು :—**

| | | |
|---|---|---|
| ೧. **ಸರ್ವಮೂಲಸಾರಸಂಗ್ರಹ**—ಮುದ್ರಿತವಾಗಿಲ್ಲ. | **ಹ.ಲಿ.** | ಪಾಂ.ರಾ. |
| ೨. **ಉಪಾಧಿಖಂಡನ ವ್ಯಾಖ್ಯಾನ** | ,, | ,, |
| ೩. **ತತ್ವನ್ಯಾಸ ಮಾತೃಕಾನ್ಯಾಸ ವ್ಯಾಖ್ಯಾನ** | ,, | ,, |
| ೪. **ದಶಮಸ್ಕಂಧ ಭಾಗವತ** | ,, | ,, |
| ೫. **ಜಯತೀರ್ಥ ಟೀಕಾಪುಂಜ** | ,, | ,, |

ಟೀಕಾಗ್ರಂಥಗಳಲ್ಲಿಯ ಮುಖ್ಯಾಂಶಗಳ ಸಾರ.

೬. **ತಂತ್ರಸಾರೋಕ್ತಪೂಜಾನುಸಾರಿ ದೇವರನಾಮಗಳು** ,,

೭. **ತತ್ವಸಂಖ್ಯಾನ**—ದೇವರ ನಾಮರೂಪದಲ್ಲಿ ಸಾರಸಂಗ್ರಹ. ಗುರುಗೋವಿಂದ ವಿಠಲದಾಸರು ಬರೆದ ಹುಚ್ಚಾಚಾರ್ಯರ ಚರಿತ್ರೆಯ ಪರಿಶಿಷ್ಟದಲ್ಲಿ ಮುದ್ರಿಸಲಾಗಿದೆ. **ಹ.ಲಿ.** ಪಾಂ.ರಾ.

**೮. ಪಾಪಪುರುಷ ವಿಸರ್ಜನ, ಮಾನಸಪೂಜಾ,** **ಹ.ಲಿ.**—ಪಾಂ.ರಾ.
**ಆವರಣಪೂಜಾ, ಅಧಿಷ್ಠಾನ ಭಗವದ್ರೂಪ ಚಿಂತನ**
ದೇವರನಾಮುಗಳ ರೂಪಗಳಲ್ಲಿವೆ.

**೯. ಉದಯರಾಗ** ,, ,,

**೧೦. ಯಜುಃಶಾಖೋಕ್ತಶ್ರಾವಣೀ ಪದ್ಧತಿ**—ಮುದ್ರಿತವಾಗಿಲ್ಲ.

ಶ್ರೀ ಹುಚ್ಚಾಚಾರ್ಯರು ಬರೆದಿರುವ ಎಲ್ಲ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳ ಹಸ್ತಲಿಖಿತಪ್ರತಿಗಳು ಧಾರವಾಡದಲ್ಲಿರುವ ಅವರ ಮೊಮ್ಮಕ್ಕಳಾದ ಬೆಟ್ಟದ ಪಾಂಡುರಂಗಿ ರಾಮಾಚಾರ್ಯರ ಮನೆಯಲ್ಲಿವೆ. ಅವುಗಳನ್ನು ಪ್ರಕಟಿಸಿ ಅಥವಾ ಈಗಿದ್ದ ಕಾಗದಗಳು ಶಿಥಿಲವಾಗುವದರಿಂದ ಮತ್ತೆ ಮತ್ತೆ ಪ್ರತಿಮಾಡಿಸಿ ರಕ್ಷಿಸುವದು ಅಗತ್ಯವಿದೆ. ಶ್ರೀ ಹುಚ್ಚಾಚಾರ್ಯರ ದೇವರನಾಮುಗಳನ್ನು ಕಂಠಪಾಠ ಮಾಡಿದವರಾಗಿ ಅವನ್ನು ಹಾಡುವವರೂ ಕೆಲವರು ಇನ್ನೂ ಇರುವರು.

**ಹಸ್ತಲಿಖಿತ ಗ್ರಂಥಗಳು ದೊರೆಯುವ ಸ್ಥಳಗಳ ಸಂಕ್ಷಿಪ್ತರೂಪಗಳ ವಿವರಣೆ :**

**ಹ.ಲಿ.**—ಹಸ್ತಲಿಖಿತಗಳು ದೊರೆಯುವ ಸ್ಥಳ.

**ಸಂಕ್ಷಿಪ್ತ ರೂಪಗಳು :**

1. ಉ.ಮ.ಗ್ರ.—ಉತ್ತರಾದಿಮಠದ ಗ್ರಂಥಾಲಯ.
2. ಕೃ.ತ.ಪಾಂ—ಕೆ.ಟಿ. ಪಾಂಡುರಂಗಿಯವರ ಸಂಗ್ರಹ.
3. ಮೈ.ಪ್ರಾ.ಸ.ಮ—ಮೈಸೂರು ಪ್ರಾಚ್ಯ ವಿದ್ಯಾಸಂಶೋಧನ ಮಂದಿರ.
4. ಮ.ಗ.ಗ್ರ—ಮದ್ರಾಸ ಗವರ್ನಮೆಂಟ ಮ್ಯಾನ್ಯುಸ್ಕ್ರಿಪ್ಟ್ಸ ಲೈಬ್ರರಿ.
5. ವಾ.ವಿ.ವಿ—ವಾಣೀವಿಹಾರ ವಿದ್ಯಾಲಯ ಗ್ರಂಥಾಲಯ, ಸತ್ಯಧ್ಯಾನ-ವಿದ್ಯಾಪೀಠ, ಮುಂಬಯಿ.
6. ಪಾಂ.ಗು—ಪಾಂಡುರಂಗಿ ಗುರುರಾಜಾಚಾರ್ಯ, ಹುಬ್ಬಳ್ಳಿ.
7. ವಾ.ಪಂ—ವಾದಿರಾಜ ಪಂಚಮುಖಿ, ಧಾರವಾಡ (ಈಗ ದಿಲ್ಲಿಯಲ್ಲಿ ಇರುವರು).
8. ಗೌ.ಕೃ—ಗೌಡಗೆರೆ ಕೃಷ್ಣಾಚಾರ್ಯರು(ಡಿ.ಎಸ್. ಕೃಷ್ಣಾಚಾರ್ಯರು, ಪ್ರಭಾ ಪ್ರೆಸ್, ಬೆಂಗಳೂರು).
9. ಪಾಂ.ರಾ—ಬೆಟ್ಟದ ಪಾಂಡುರಂಗಿ ರಾಮಾಚಾರ್ಯರು (ಧಾರವಾಡ).
10. ಅಡಿ.ಗ್ರ—ಅಡಿಯಾರ ಗ್ರಂಥಾಲಯ, ಮದ್ರಾಸ.
11. ವಿ.ಪ್ರ.—ವ್ಯಾಸನಕೆರೆ ಪ್ರಭಂಜನ.

# ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಪಾಂಡುರಂಗಿ ಮನೆತನದವರು ಬರೆದ ವೇದಾಂತ ಗ್ರಂಥಗಳು

## 1. ಪಾಂಡುರಂಗಿ ಗುರುರಾಜಾಚಾರ್ಯರು (ಹುಬ್ಬಳ್ಳಿ)

೧. **ಮಧ್ವಮತದ ವೈಶಿಷ್ಟ್ಯ**—೧೯೬೪ ರಲ್ಲಿ ಮುಗುಟಖಾನ ಹುಬ್ಬಳ್ಳಿಯಲ್ಲಿ ನಡೆದ ಮಾಧ್ವಸಿದ್ಧಾಂತ ಸಂವರ್ಧಿನೀಸಭೆಯಲ್ಲಿ ಶ್ರೀ ಭಂಡಾರಕೇರಿ ಸ್ವಾಮಿಗಳವರಿಂದ ಬಹುಮಾನ ಪಡೆದ ಭಾಷಣ. ಆಚಾರ್ಯರ ೬೦ನೆಯ ವರ್ಷದ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾಗಿದೆ.

೨. **ದಶೋಪನಿಷತ್ ಭಾಷ್ಯ ಮತ್ತು ಗೀತೆಯ ಮೇಲಿನ ಲೇಖನಗಳು**—ಇವು ತತ್ವವಾದವೇ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವುಗಳ ಸಂಕಲನ ಪ್ರಕಟವಾಗಬೇಕಾಗಿದೆ.

೩. **ಶ್ರೀಮನ್ನ್ಯಾಯಸುಧಾ ಮತ್ತು ಅದರ ಟಿಪ್ಪಣಿಗಳು**—ಆಚಾರ್ಯರ ೬೦ನೆಯ ವರ್ಷದ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾದ ಲೇಖನ.

ಆಚಾರ್ಯರು 'ತತ್ವಪ್ರಕಾಶಿಕಾ' ಗ್ರಂಥಕ್ಕೆ ಉಪನ್ಯಾಸರೂಪವಾದ ಒಂದು ವಿಸ್ತಾರವಾದ ವ್ಯಾಖ್ಯಾನವನ್ನು ಸಂಸ್ಕೃತ ಮತ್ತು ಕನ್ನಡದಲ್ಲಿ ಬರೆಯುತ್ತಿದ್ದಾರೆ.

## 2. ಪಾಂಡುರಂಗಿ ಕೃಷ್ಣಾಚಾರ್ಯರು, ಬೆಂಗಳೂರು (ಕೆ. ಟಿ. ಪಾಂಡುರಂಗಿ)

೧. **ಅಣುಭಾಷ್ಯ ತತ್ವಮಂಜರೀ**—ಶ್ರೀ ರಾಘವೇಂದ್ರಸ್ವಾಮಿಗಳವರು ಅಣುಭಾಷ್ಯಕ್ಕೆ ಬರೆದ ತತ್ವಮಂಜರೀ ಎಂಬ ವ್ಯಾಖ್ಯಾನದ ಕನ್ನಡ ಅನುವಾದ. 1975 ರಲ್ಲಿ ಬೆಂಗಳೂರಿನ ಬಸವನಗುಡಿ ಮಾಡೆಲ್ ಹೌಸ ಬೀದಿಯಲ್ಲಿಯ ರಾಘವೇಂದ್ರಸ್ವಾಮಿ ಮಠದವರು ಮಠದ ರಜತೋತ್ಸವದ ಅಂಗವಾಗಿ ಪ್ರಕಟಿಸಿದ್ದಾರೆ. ಇವರಲ್ಲಿ ಸೀರಿಕಾರೂಪವಾಗಿ ಬರೆದ ಅಣುಭಾಷ್ಯಸಾರವನ್ನು 1984 ರಲ್ಲಿ ದಾವಣಗೇರಿ ಸರ್ವಜ್ಞ ಸೇವಾ ಸಂಘದವರು ಮತ್ತೆ ಪ್ರಕಟಿಸಿದ್ದಾರೆ.

೨. **ವಿಷ್ಣುತತ್ತ್ವವಿನಿರ್ಣಯಃ**—ಶ್ರೀಮಧ್ವಾಚಾರ್ಯರ ದಶಪ್ರಕರಣದಲ್ಲಿ ಒಂದಾದ ವಿಷ್ಣುತತ್ತ್ವವಿನಿರ್ಣಯದ ಕನ್ನಡ ಅನುವಾದ 1983 ರಲ್ಲಿ ಬೆಂಗಳೂರಿನ ಮಲ್ಲೇಶ್ವರದಲ್ಲಿಯ ರಾಘವೇಂದ್ರಾಶ್ರಮ ಟ್ರಸ್ಟದವರು ಪ್ರಕಟಿಸಿದ್ದಾರೆ.

೩. **ಗೀತಾತಾತ್ಪರ್ಯನಿರ್ಣಯಃ**—ಶ್ರೀಮಧ್ವಾಚಾರ್ಯರ ಗೀತಾ-ತಾತ್ಪರ್ಯ ನಿರ್ಣಯದ ಕನ್ನಡ ಅನುವಾದ. ಶ್ರೀ ಪೇಜಾವರ ಸ್ವಾಮಿಗಳವರು ಪ್ರಕಟಿಸುತ್ತಿರುವ ಕನ್ನಡ ಸರ್ವಮೂಲದ ಮೊದಲನೆಯ ಸಂಪುಟವಾದ ಗೀತಾಪ್ರಸ್ಥಾನ ಸಂಪುಟದಲ್ಲಿ 1987 ರಲ್ಲಿ ಪ್ರಕಟವಾಗಿದೆ. (ಇದೇ ಗ್ರಂಥದ ಉಪೋದ್ಘಾತ ಭಾಗದ ಅನುವಾದವು ಜಯನಗರ ೬. ಬ್ಲಾಕ್ ರಾಘವೇಂದ್ರ ಸ್ವಾಮಿಗಳವರ ಮಠದಿಂದ 1978 ರಲ್ಲಿ ಪ್ರಕಟಿಸಲ್ಪಟ್ಟಿತ್ತು).

೪. **ಸದಾಚಾರಸ್ಮೃತಿಃ**—ಶ್ರೀಮಧ್ವಾಚಾರ್ಯ ಸದಾಚಾರಸ್ಮೃತಿಯ ಕನ್ನಡ ಅನುವಾದ. ವಿವರಣೆಯಲ್ಲಿ ಶ್ರೀನಿವಾಸತೀರ್ಥರ ಆಹ್ನಿಕ ಪದ್ಧತಿಯಲ್ಲಿಯ ಮುಖ್ಯಾಂಶಗಳನ್ನೂ ಕೊಡಲಾಗಿದೆ. 1978 ರಲ್ಲಿ ಬೆಂಗಳೂರಿನ ಜಯನಗರ ೬. ಬ್ಲಾಕಿನ ರಾಘವೇಂದ್ರಸ್ವಾಮಿ ಮಠದವರು ಪ್ರಕಟಿಸಿದ್ದಾರೆ.

೫. **ಉಪನಿಷದ್-ದರ್ಶನ ಭಾಗ ೧–೨**—ಶ್ರೀ ರಾಘವೇಂದ್ರಸ್ವಾಮಿಗಳ ಖಂಡಾರ್ಥಾನುಸಾರವಾಗಿ ಐತರೇಯ, ಛಾಂದೋಗ್ಯ, ಬೃಹದಾರಣ್ಯ ಈ ಮೂರು ಬಿಟ್ಟು ಇನ್ನುಳಿದ ಏಳು ಉಪನಿಷತ್ತುಗಳ ಕನ್ನಡ ಸಾರ ಸಂಗ್ರಹ 1964 ಮತ್ತು 1967 ರಲ್ಲಿ ಧಾರವಾಡದ ಮಿಂಚಿನ ಬಳ್ಳಿ ಗ್ರಂಥಮಾಲೆಯಲ್ಲಿ ಎರಡು ಭಾಗಗಳಲ್ಲಿ ಪ್ರಕಟವಾಗಿವೆ. ಇನ್ನುಳಿದ ಮೂರರ ಸಾರಸಂಗ್ರಹವನ್ನೂ ಸೇರಿಸಿ ಹತ್ತು ಉಪನಿಷತ್ತುಗಳ ಸಾರವನ್ನೂ ಒಂದೇ ಸಂಪುಟದಲ್ಲಿ ಪ್ರಕಟಿಸುವ ಯೋಜನೆ ಇದೆ.

೬. **ಮಹಿಪತಿದಾಸರ ಕೃತಿಗಳಲ್ಲಿಯ ಆಧ್ಯಾತ್ಮಿಕ ದೃಷ್ಟಿ**—ಮಹಿಪತಿದಾಸರ ದೇವರನಾಮಗಳಲ್ಲಿ ಬಂದ ದ್ವೈತತತ್ತ್ವಗಳ ಸಾರಸಂಗ್ರಹ. 1981 ರಲ್ಲಿ ಇಲಕಲ್ಲಿನ ಡಾ. ಕೆ. ಎ. ಕಾಖಂಡಕಿಯವರು ಮಹಿಪತಿದಾಸರ ಪುಣ್ಯಸ್ಮರಣೆಯ ಉತ್ಸವದ ಸಂದರ್ಭದಲ್ಲಿ ಪ್ರಕಟಿಸಿರುವರು.

**೭. ಅಣುವಿದ್ಯಾಧೀಶವಿಜಯ**—ಜನಾರ್ದನಸೂರಿ ಎಂಬ ಕವಿಯು ಬರೆದ ವಿದ್ಯಾಧೀಶವಿಜಯ ಮಹಾಕಾವ್ಯದ ಸಾರಸಂಗ್ರಹ. ಅದರಲ್ಲಿಯ ೧೧೮ ಶ್ಲೋಕಗಳನ್ನು ಆಯ್ದು ಈ ಸಂಗ್ರಹಮಾಡಿ ಕನ್ನಡ ಅನುವಾದ ಸಹಿತ ಕೊಡಲಾಗಿದೆ. ಇದನ್ನು ಕೆ. ಟಿ. ಪಾಂಡುರಂಗಿಯವರ ತಂದೆಯವರಾದ ತಮ್ಮಣ್ಣಾಚಾರ್ಯ ಪಾಂಡುರಂಗಿಯವರು 1960 ರಲ್ಲಿ ಪ್ರಕಟಿಸಿದ್ದಾರೆ. ಇದನ್ನೇ ಇನ್ನೂ ವಿಸ್ತರಿಸಿ ಈಗ ಪ್ರಕಟಿಸಲಾಗುತ್ತಿದೆ.

**೮. ಅಣುಸತ್ಯಬೋಧವಿಜಯ**—ಕಂಚೀ ಕೃಷ್ಣಾಚಾರ್ಯರು ಬರೆದ ಸತ್ಯಬೋಧವಿಜಯ ಮಹಾಕಾವ್ಯದ ಸಾರಸಂಗ್ರಹ. ಈ ಮಹಾಕಾವ್ಯದಿಂದ ೧೧೮ ಶ್ಲೋಕಗಳನ್ನು ಆರಿಸಿ ಕನ್ನಡ ಅನುವಾದದೊಡನೆ ಪ್ರಕಟಿಸಲಾಗಿದೆ. ಇದನ್ನು ಸವಣೂರಿನಲ್ಲಿ ವಕೀಲರಾಗಿದ್ದ ರಿತ್ತಿ ಪ್ರಲ್ಹಾದರಾಯರು 1961 ರಲ್ಲಿ ತಮ್ಮ ಇಂಗ್ಲಿಷ್ ಮುನ್ನುಡಿಯೊಡನೆ ಪ್ರಕಟಿಸಿದ್ದಾರೆ.

**೯. ಈಶಾವಾಸ್ಯತಲವಕಾರಕಾಠಕೋಪನಿಷತ್ತುಗಳು**—ಶ್ರೀಮಧ್ವಾಚಾರ್ಯ ಭಾಷ್ಯ ಮತ್ತು ಶ್ರೀ ರಾಘವೇಂದ್ರತೀರ್ಥರ ಖಂಡಾರ್ಥಗಳನ್ನನುಸರಿಸಿ ಈ ಉಪನಿಷತ್ತುಗಳನ್ನು ಇಂಗ್ಲಿಷ್‌ನಲ್ಲಿ ಭಾಷಾಂತರಿಸಲಾಗಿದೆ. ಪದ್ಮಸರೋವರದ S.M.S.O. ಸಭಾದವರು ೧೯೮೫ ರಲ್ಲಿ ತಮ್ಮ ಸಭೆಯ ಹತ್ತನೆಯ ಪ್ರಕಟಣೆಯಾಗಿ ಇದನ್ನು ಪ್ರಕಾಶಿಸಿದ್ದಾರೆ.

**೧೦. ಷಟ್ಪ್ರಶ್ನ ಅಥರ್ವಣ ಮಾಂಡೂಕ್ಯೋಪನಿಷತ್ತುಗಳು**—ಇವುಗಳ ಇಂಗ್ಲಿಷ್ ಅನುವಾದ S.M.S.O. ಸಭೆಯವರು 1986 ರಲ್ಲಿ ಹನ್ನೊಂದನೆಯ ಪ್ರಕಟಣೆಯಾಗಿ ಪ್ರಕಾಶಿಸಿದ್ದಾರೆ. ಇನ್ನುಳಿದ ನಾಲ್ಕು ಉಪನಿಷತ್ತುಗಳ ಇಂಗ್ಲಿಷ್ ಅನುವಾದಗಳೂ ಕ್ರಮೇಣ ಪ್ರಕಟಿಸಲ್ಪಡುವವು.

**೧೧. Essentials of Yuktimallika**

ಶ್ರೀ ವಾದಿರಾಜತೀರ್ಥರ ಯುಕ್ತಿಮಲ್ಲಿಕಾ ಗ್ರಂಥದ ಸಾರಸಂಗ್ರಹವನ್ನು ಇಂಗ್ಲಿಷ್‌ನಲ್ಲಿಕೊಡಲಾಗಿದೆ. ಇದು ಮೊದಲು ದಾವಣಗೇರಿಯ ಬಿ. ಭೀಮರಾಯರು ಮಾಡಿದ ಯುಕ್ತಿಮಲ್ಲಿಕಾದ ಕನ್ನಡ ಅನುವಾದದ ಸಂಪುಟಗಳಿಗೆ ಭೂಮಿಕಾ ರೂಪವಾಗಿ ಬರೆಯಲ್ಪಟ್ಟಿತು. ಮುಂದೆ ಹದಿನಾಲ್ಕೂ ಸಂಪುಟಗಳಿಗೆ ಬರೆದ

ಭೂಮಿಕಾಗಳನ್ನು ಒಟ್ಟಿಗೆ ಸೇರಿಸಿ ಈ ಇಂಗ್ಲಿಷ್ ಸಾರಸಂಗ್ರಹದ ಒಂದು ಪುಸ್ತಕವನ್ನು 1982 ರಲ್ಲಿ ಮಾಡಲಾಯಿತು.

೧೨. **Essentials of Bhagavadgitā**

ಭಗವದ್ಗೀತೆಯ ಮುಖ್ಯಾಂಶಗಳನ್ನು ಇಂಗ್ಲಿಷದಲ್ಲಿ ಕೊಡಲಾಗಿದೆ. ಇದು ಪೂರ್ಣಪ್ರಜ್ಞವಿದ್ಯಾಪೀಠವು 1981 ರಲ್ಲಿ ಪ್ರಕಟಿಸಿದ 'ಗೀತಾಭಾಷ್ಯ ಪ್ರಮೇಯ ದೀಪಿಕಾ' ಗ್ರಂಥಕ್ಕೆ ಭೂಮಿಕಾರೂಪವಾಗಿ ಬರೆಯಲ್ಪಟ್ಟು ನಂತರ ಚಿಕ್ಕ ಪುಸ್ತಕ ರೂಪದಿಂದ ಪ್ರಕಟಿಸಲ್ಪಟ್ಟಿದೆ. ಇದರ ಪ್ರತಿಗಳು ಈಗ ದೊರೆಯುವದಿಲ್ಲ.

೧೩. **Essentials of Gitā Bhāshya and Gitā Tātparya**

ಮೇಲಿನ ಪುಸ್ತಕವನ್ನೇ ಇನ್ನೂ ವಿಸ್ತರಿಸಿ ಬರೆಯಲಾಗಿದೆ. ಇದು ಕನ್ನಡ ಸರ್ವಮೂಲದ ಪ್ರಥಮ ಸಂಪುಟವಾದ ಗೀತಾಪ್ರಸ್ಥಾನಕ್ಕೆ ಭೂಮಿಕಾರೂಪವಾಗಿ 1987 ರಲ್ಲಿ ಬರೆಯಲ್ಪಟ್ಟಿದೆ.

೧೪. **Essentials of Gitā Tātparya**

ಇದು ಪೂರ್ಣಪ್ರಜ್ಞವಿದ್ಯಾಪೀಠವು 1985 ರಲ್ಲಿ ಪ್ರಕಟಿಸಿದ 'ಗೀತಾತಾತ್ಪರ್ಯನಿರ್ಣಯ'ಕ್ಕೆ ಭೂಮಿಕಾರೂಪವಾಗಿದೆ. ಗೀತಾತಾತ್ಪರ್ಯ ನಿರ್ಣಯದಲ್ಲಿಯೇ ವಿಶೇಷವಾಗಿ ಚರ್ಚಿಸಿದ ಅಂಶಗಳು ಇದರಲ್ಲಿ ಬಂದಿವೆ.

೧೫. **Essentials of Upanishads**

ಇದು ಪೂರ್ಣಪ್ರಜ್ಞವಿದ್ಯಾಪೀಠವು ಪ್ರಕಟಿಸಿದ ಏಳು ಉಪನಿಷತ್ತುಗಳ ಖಂಡಾರ್ಥಗಳಿಗೆ ಇಂಗ್ಲಿಷದಲ್ಲಿ ಬರೆದ ಭೂಮಿಕೆ.

ಏಳೂ ಉಪನಿಷತ್ತುಗಳ ಮುಖ್ಯ ಸಂದೇಶವನ್ನು ಇಲ್ಲಿ ವಿವರಿಸಲಾಗಿದೆ. ಈ ಇಂಗ್ಲಿಷ್ ಸಾರದ ಭಾಗವನ್ನು ಮಾತ್ರ ಪ್ರತ್ಯೇಕವಾಗಿ ಪ್ರಕಟಿಸಲಾಗಿದೆ.

**೧೬. ಹತ್ತನೆಯ ಮಾಧ್ವತತ್ವಜ್ಞಾನ ಸಮ್ಮೇಳನದ ಅಧ್ಯಕ್ಷ ಭಾಷಣ—**

1978 ರಲ್ಲಿ ಬೆಂಗಳೂರಿನಲ್ಲಿ ಶ್ರೀ ೧೦೮ ಶ್ರೀ ಪೇಜಾವರ ಸ್ವಾಮಿಗಳವರ ನೇತೃತ್ವದಲ್ಲಿ ನಡೆದ ಅಖಿಲಭಾರತ ಮಾಧ್ವತತ್ವಜ್ಞಾನ ಸಮ್ಮೇಳನದ ಹತ್ತನೆಯ ಅಧಿವೇಶನದ ಅಧ್ಯಕ್ಷಭಾಷಣ. ಇದರಲ್ಲಿ ಮಾಧ್ವವಾಙ್ಮಯದ ಸಿಂಹಾವಲೋಕನ ಮಾಡಲಾಗಿದೆ.

**೧೭. ಆಗಮ ಪದವೀದಾನ ಸಮಾರಂಭ ಭಾಷಣ**—1974 ರಲ್ಲಿ ಕರ್ನಾಟಕ ಸರಕಾರದ ಮುಜರಾಯಿ ಖಾತೆಯವರು ಏರ್ಪಡಿಸಿದ ಆಗಮ ಪದವೀದಾನ ಸಮಾರಂಭದ ಅಧ್ಯಕ್ಷಭಾಷಣ.

**೧೮. ಬ್ರಹ್ಮಸೂತ್ರಾನುವ್ಯಾಖ್ಯಾನ**—ಈ ಗ್ರಂಥದ ಸಂಸ್ಕೃತಮೂಲವು ವಿವರವಾದ ವಿಷಯಶೀರ್ಷಿಕೆಗಳೊಡನೆ ಮತ್ತು ವಿಸ್ತಾರವಾದ ಇಂಗ್ಲಿಷ್ ಮತ್ತು ಕನ್ನಡ ಪ್ರಸ್ತಾವನೆಗಳೊಡನೆ ಪ್ರಕಟಿಸಲ್ಪಟ್ಟಿದೆ.

ವೇದಾಂತಕ್ಕೆ ಸಂಬಂಧಿಸಿದ ಈ ಗ್ರಂಥಗಳಲ್ಲದೆ ಅನೇಕ ವೇದಾಂತವಿಷಯಕ ಬಿಡಿ ಲೇಖನಗಳನ್ನೂ ಕೆ. ಟಿ. ಪಾಂಡುರಂಗಿಯವರು ಇಂಗ್ಲಿಷದಲ್ಲಿಯೂ, ಕನ್ನಡದಲ್ಲಿಯೂ ಬರೆದಿರುವರು. ಇದಲ್ಲದೆ ಪೂರ್ವಮೀಮಾಂಸಾ ಮತ್ತು ಸಾಹಿತ್ಯ ಕೃತಿಗಳಿಗೆ ಸಂಬಂಧಿಸಿದ ಕೃತಿಗಳನ್ನೂ, ಲೇಖನಗಳನ್ನೂ ಬರೆದಿರುವರು. ಅವುಗಳ ಉಲ್ಲೇಖ ಇಲ್ಲಿ ಪ್ರಕೃತವಲ್ಲವಾದ್ದರಿಂದ ಅವುಗಳನ್ನು ಇಲ್ಲಿ ನಿರ್ದೇಶಿಸಿಲ್ಲ.

ಬ್ರಹ್ಮಸೂತ್ರಾನುವ್ಯಾಖ್ಯಾನದ ಕನ್ನಡ ಮತ್ತು ಇಂಗ್ಲಿಷ್ ಅನುವಾದಗಳೂ ಸಿದ್ಧವಾಗುತ್ತಿದ್ದು ಕಾಲಕ್ರಮೇಣ ಪ್ರಕಟವಾಗಲಿರುವವು.

# ಪಾಂಡುರಂಗಿ ಮನೆತನದ ಸಂಕ್ಷಿಪ್ತ ವಂಶಾವಳಿ

**ವಿಭಾಗ—೧ (ಮಾಸೂರು-ತುಮ್ಮಿನಕಟ್ಟೆ)**



## ವಿಭಾಗ—೨ (ಮಾಸೂರು-ಮಿಶ್ರಕೋಟೆ)

೧. ಆನಂದಭಟ್ಟಾರಕರು (ಪುಣತಾಂಬೆ)

೨. ನರಸಿಂಹಾಚಾರ್ಯರು (ಶ್ರೀ ವಿದ್ಯಾಧೀಶರು) (ಶೂರ್ಪಾಲಿ)

೩. ಕೃಷ್ಣಾಚಾರ್ಯರು (ಶೂರ್ಪಾಲಿ)

೪. ಆನಂದಾಚಾರ್ಯರು (ಶೂರ್ಪಾಲಿ)

೫. ಕೃಷ್ಣಾಚಾರ್ಯರು (ಶೂರ್ಪಾಲಿ)

೬. ಅಣ್ಣಯ್ಯಾಚಾರ್ಯರು (ಮಾಸೂರು)

೭. ಬಾಬಾಚಾರ್ಯರು (ಮಾಸೂರು)

೮. ಬಾಳಾಚಾರ್ಯರು (ಮಿಶ್ರಕೋಟಿ)

೯. ನರಸಿಂಹಾಚಾರ್ಯರು (ಮಿಶ್ರಕೋಟಿ)

೧೦. ಶ್ರೀನಿವಾಸಾಚಾರ್ಯರು (ಮಿಶ್ರಕೋಟಿ)

೧೧. ವೆಂಕಣ್ಣಾಚಾರ್ಯರು (ಮಿಶ್ರಕೋಟಿ)

೧೨. ರಾಮಾಚಾರ್ಯರು (ವಿದ್ಯಮಾನರು) (ಮಿಶ್ರಕೊಟಿ)

೧೩. ಗೋವಿಂದಾಚಾರ್ಯರು (ವಿದ್ಯಮಾನರು) (ಮಿಶ್ರಕೋಟಿ)

## ವಿಭಾಗ—೩ (ಭಂಡಿವಾಡ-ಕಡಕೋಳ)



೧. ಆನಂದಭಟ್ಟರು (ಪುಣತಾಂಬೆ)

೨. ಕೇಶವಾಚಾರ್ಯರು (ಗುರುರಾಜರು) (ಶೂರ್ಪಾಲಿ)

೩. ಗಡ್ಡದ ಶ್ರೀವಾಸಾಚಾರ್ಯರು (ಶೂರ್ಪಾಲಿ, ಮನ್ನಾರ ಗುಡಿ)

೪. ರಾಮಾಚಾರ್ಯರು (ಮನ್ನಾರ ಗುಡಿ)

೫. ಮನ್ನಾರಿ ಕೃಷ್ಣಾಚಾರ್ಯರು (ರಾಣೇಬೆನ್ನೂರು)

೬. ರಾಮಾಚಾರ್ಯರು (ರಾಣೇಬೆನ್ನೂರು)

೭. ಶ್ರೀನಿವಾಸಾಚಾರ್ಯರು (ರಾಣೇಬೆನ್ನೂರು)

೮. ಕೃಷ್ಣಾಚಾರ್ಯರು (ಚಿಕ್ಕೇರೂರು)

೯. ರಾಮಾಚಾರ್ಯರು (ಚಿಕ್ಕೇರೂರು)

೧೦. ವೆಂಕಟರಮಣಾಚಾರ್ಯರು (ಚಿಕ್ಕೇರೂರು)

೧೧. ಕೃಷ್ಣಾಚಾರ್ಯರು (ವಿದ್ಯಮಾನರು) (ಚಿಕ್ಕೇರೂರು)

೧೨. ರಾಘವೇಂದ್ರ (ವಿದ್ಯಮಾನರು) (ಚಿಕ್ಕೇರೂರು)


೧. ಆನಂದಭಟ್ಟರು (ಪುಣತಾಂಬೆ)
೨. ಕೇಶವಾಚಾರ್ಯರು (ಗುರುರಾಜರು) (ಶೂರ್ಪಾಲಿ)
೩. ಗಡ್ಡದ ಶ್ರೀನಿವಾಸಾಚಾರ್ಯರು (ಮನ್ನಾರಗುಡಿ)
೪. ನರಸಿಂಹಾಚಾರ್ಯರು
೪. ಬಾಬಾಚಾರ್ಯರು (ಶ್ರೀ ಸತ್ಯವಿಜಯರು)
೫. ಗೋಪಾಲಾಚಾರ್ಯರು (ಮನ್ನಾರಗುಡಿ)
೬. ವಾಸುದೇವಾಚಾರ್ಯರು (ಮನ್ನಾರಗುಡಿ)
೭. ಬಿಂದು ಮಾಧವಾಚಾರ್ಯರು (ಮನ್ನಾರಗುಡಿ)
೮. ಕೇಶವಾಚಾರ್ಯರು (ಮನ್ನಾರಗುಡಿ)
೯. ವ್ಯಾಸಾಚಾರ್ಯರು (ಕುಂಭಕೋಣ)
೧೦. ರಾಮಚಂದ್ರಾಚಾರ್ಯರು (ಕುಂಭಕೋಣ)
(ಪ್ರೊ. ಪಿ. ರಾಮಚಂದ್ರರಾಯರು)
೧೧. ವ್ಯಾಸಭೀಮನ್ (ಲಖನೌ)
(P. V. ಭೀಮನ್) (ವಿದ್ಯಮಾನರು)
ರಾಘವೇಂದ್ರ (ಮದ್ರಾಸ್)
(ವಿದ್ಯಮಾನರು)




---

ಪಾಂಡುರಂಗಿ ಮನೆತನಗಳಲ್ಲಿ ಮಾಸೂರು, ಮಿಶ್ರಕೋಟಿ, ಭುಂಡಿವಾಡ, ರಾಣೇಬೆನ್ನೂರು–ಚಿಕ್ಕೇರೂರು–ಕಳಸ, ದಕ್ಷಿಣ ದೇಶ ಮತ್ತು ವಿಶಾಖಪಟ್ಟಣಗಳೆಂಬ ಆರು ಮುಖ್ಯ ವಿಭಾಗಗಳಿವೆ. ಈ ಆರೂ ವಿಭಾಗಗಳ ಪ್ರತ್ಯೇಕವಾದ ವಂಶಾವಳಿಯನ್ನು ವಿವರವಾಗಿ ಸಿದ್ಧಪಡಿಸಲಾಗಿದೆ. ಅವುಗಳನ್ನು ಪ್ರತ್ಯೇಕವಾಗಿಯೇ ಪ್ರಕಟಿಸಲಾಗುವದು. ಅವುಗಳಲ್ಲಿ ಅನೇಕ ಈಗಿರುವವರ ತಂದೆ ಅಥವಾ ಅಜ್ಜನ ತಲೆಗೇ ನಿಂತಿವೆ. ಆದ್ದರಿಂದ ಈಗಿರುವವರು ತಮ್ಮ ತಮ್ಮ ವಿವರ ಮೂರು ತಲೆಮಾರಿನದಾದರೂ ಕಳಿಸಿಕೊಟ್ಟರೆ ಅವುಗಳಲ್ಲಿ ಸೇರಿಸಲು ಅನುಕೂಲವಾಗುವದು. ಈಗಿರುವವರೆಲ್ಲ ಹದಿಮೂರನೆಯ ತಲೆಮಾರಿನವರು. ನಮ್ಮಲ್ಲಿಯ ಮಾಹಿತಿ ಹನ್ನೊಂದನೆಯ ತಲೆಮಾರಿನ ವರೆಗಿದೆ. ಆದ್ದರಿಂದ ಮೂರು ತಲೆಮಾರಿನವರ ಹೆಸರು ಅವರಿದ್ದ ಊರುಗಳು ಇವನ್ನು ತಿಳಿಸಿದರೆ ಹೊಂದಿಸಲು ಅನುಕೂಲವಾಗುತ್ತದೆ. ಅದಕ್ಕೂ ಹೆಚ್ಚು ಮಾಹಿತಿ ಇದ್ದವರು ಅದನ್ನೂ ಕಳಿಸಬೇಕು.

ಈ ಏಡೂ ವಿಭಾಗಗಳ ಮನೆಗಳಿಂದ ಒಂದು ಕುಟುಂಬವನ್ನು ಆಯ್ದುಕೊಂಡು ಈ ಸಂಕ್ಷಿಪ್ತ ವಂಶಾವಳಿಯನ್ನು ಸಿದ್ಧಪಡಿಸಲಾಗಿದೆ.